# ವಿದ್ವನ್ಮಣಿತಿಲಕ ಭೋಜರಾಜ

(ಐತಿಹಾಸಿಕ ಕಾದಂಬರಿ)

ಮಾಧವಸಿಂಹ

ಶ್ರೀ ಲಕ್ಷ್ಮೀನರಸಿಂಹ ಪ್ರಕಾಶನ
36, 3ನೇ ಅಡ್ಡ ರಸ್ತೆ, ಹೊಸಕೆರೆಹಳ್ಳಿ ಮುಖ್ಯ ರಸ್ತೆ
ಬೆಂಗಳೂರು - 560 085
ದೂರವಾಣಿ : 6721669

VIDWANMANITHILAKA BHOJARAJA A HISTORICAL NOVEL By Madhavasimha and PUBLISHED BY SRI LAKSHIMI NARASIMNA PRAKASHANA No. 36, III Cross, Hosakerehally Main Road, Bangalore -560085.

ಪುಟಗಳು : 248

ಮೊದಲನೆಯ ಮುದ್ರಣ : 1993

ಎರಡನೆಯ ಮುದ್ರಣ : 1999





ಮುಖಚಿತ್ರ : `ಶ್ರೀ '

ಬೆಲೆ : 65/- ಅರವತ್ತೈದು ರೂಪಾಯಿಗಳು
$ 3.0
£ 2.0

ಸುಂದರವಾದ ಲಿಪಿಕಾರರು

ಅಕ್ಷರದ ಜೋಡನೆ :
ಸಪ್ತಗಿರಿ ಗ್ರಾಫಿಕ್ಸ್,
ಜಯನಗರ.
ಬೆಂಗಳೂರು - 560 011
ಫೋನ್ : 645557



ಭಾರತೀಶ ಎಂಟರ್‌ಪ್ರೈಸಸ್
ನಂ. 51 ಹೌಸಿಂಗ್ ಕಾಲೋನಿ
ಯಲಚೇನಹಳ್ಳಿ
ಬೆಂಗಳೂರು 560 078

# ವಿದ್ವನ್ಮಣಿತಿಲಕ ಭೋಜರಾಜ

ಪೌರಾಣಿಕ ಹಿನ್ನೆಲೆಯ
ಚಾರಿತ್ರಿಕ ಕಥಾವಸ್ತುವಿಗೆ
ಕಲ್ಪನೆಯ ಮೆರಗನ್ನಿತ್ತು
ರಚಿಸಿದ ಭೋಜರಾಜನ ಕಥೆ

ಅರ್ಪಣೆ ನಿಮಗೆ

ಮಾಧವಸಿಂಹ

# ಮುನ್ನುಡಿ



ಶ್ರೀ ಎಲ್. ರೇವಣ್ಣ ಸಿದ್ದಯ್ಯ, ಭಾ. ಪೊ. ಸೇ,
ಪೊಲೀಸ್ ಕಮೀಷನರ್.

ಶ್ರೀ ಹೆಚ್.ಎನ್. ಮಾಧವರಾವ್ ರವರು ಸುಮಾರು ಮೂರು ದಶಕಗಳಿಗಿಂತಲೂ ಹೆಚ್ಚುಕಾಲ ಪೊಲೀಸ್ ಇಲಾಖೆಯಲ್ಲಿ ಅತ್ಯಂತ ನಿಷ್ಠೆಯಿಂದ ಸೇವೆ ಸಲ್ಲಿಸುತ್ತಾ ಹಲವಾರು ಉತ್ತಮ ಕನ್ನಡ ಸಮಾಜಿಕ ಕಥೆ ಕಾದಂಬರಿಗಳನ್ನು ಬರೆದು ಪ್ರಕಟಿಸಿರುವುದು ಇಲಾಖೆಯ ಹಿರಿಮೆಯನ್ನು ಹೆಚ್ಚಿಸಿದೆಯೆಂದು ಹೇಳಿದರೆ ತಪ್ಪಾಗಲಾರದು. ಶ್ರೀಯುತರು ಹೆಚ್ಚು ಆಸಕ್ತಿವಹಿಸಿ ಭಾರತದ ಇತಿಹಾಸ ಮತ್ತು ಪುರಾಣದ ಆಧಾರದ ಮೇಲೆ "ವಿದ್ವನ್ಮಣಿ ತಿಲಕ ಬೋಜರಾಜ" ಎಂಬ ಶ್ರೇಷ್ಠ ಗ್ರಂಥವನ್ನು ರಚಿಸಿರುವುದು ಸ್ತುತ್ಯಾರ್ಹ. ಅದರಲ್ಲಿಯೂ ಆಧುನಿಕ ದಿನಗಳ ಓದುಗರು ಈ ಗ್ರಂಥದ ಬಗ್ಗೆ ಒಲವನ್ನು ತೋರಿಸಿರುವುದರಿಂದ ಇದು ಎರಡನೆ ಮುದ್ರಣವಾಗುತ್ತಿದೆ ಎಂಬ ಅಂಶ ಈ ಗ್ರಂಥದ ಉತ್ಕೃಷ್ಟತೆಯನ್ನು ಸೂಚಿಸುತ್ತದೆ. ಪುರಾಣದಲ್ಲಿ ಗರಲ ಕ್ಷೇತ್ರವೆಂದು ಹೆಸರುವಾಸಿಯಾದ ಈಗಿನ ನಂಜನಗೂಡಿನವರಾದ ಶ್ರೀ ಮಾಧವರಾವ್ ಅವರು ಶ್ರೀ ಗರಲ ಕ್ಷೇತ್ರಾಧಿಪತಿ ಶ್ರೀ ಶ್ರೀ ಶ್ರೀಕಂಠೇಶ್ವರ ಸ್ವಾಮಿಯ ಅನುಗ್ರಹವನ್ನು ಪಡೆದು ಲಾಠಿ ಹಿಡಿದ ಜೀವನದಿಂದ ನಿವೃತ್ತರಾದ ಮೇಲೆ ಲೇಖನಿಯನ್ನು ಹಿಡಿದು ಸಾಹಿತ್ಯ ಸೇವೆಯ ಮಾರ್ಗದಲ್ಲಿ ಅದಮ್ಯ ಶಕ್ತಿ ಮತ್ತು ಯಶಸ್ಸನ್ನು ಪಡೆಯಲೆಂದು ಹಾರೈಸುತ್ತೇನೆ.

ಬೆಂಗಳೂರು

ಶ್ರೀ ಎಲ್. ರೇವಣ್ಣ ಸಿದ್ದಯ್ಯ

ಕರ್ನಾಟಕರಾಜ್ಯ ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಕರ್ನಾಟಕ ರಾಜ್ಯ ಸಾರ್ವಜನಿಕ ಗ್ರಂಥಾಲಯ ಇಲಾಖೆಗಳಿಂದ ಆಯ್ಕೆಯಾದ ಐತಿಹಾಸಿಕ ಕನ್ನಡ ಗ್ರಂಥ

" ವಿದ್ವನ್ಮಣಿ ತಿಲಕ ಭೋಜರಾಜ "

ಆದೇಶ ಸಂಖ್ಯೆ

ಕರ್ನಾಟಕ ರಾಜ್ಯ, ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ಕಛೇರಿ,
ನೃಪತ್ತುಂಗರಸ್ತೆ, ಬೆಂಗಳೂರು - 1.

ಸಖ :2:ಬಿಪಿ:5:97-98 ದಿನಾಂಕ : 24 - 11 - 97

ಕ.ಸ.ರಾ. ಗ್ರಂ. ಇಲಾಖೆ.

ನಿಕಾ:ಉಕಾದಿ:ಪುಕಶಿ: (ರಾಸಾನಿ) 21329:93-94 ದಿನಾಂಕ : 19-2-94

# ಹಾರೈಕೆ



ಡಾ.ಪಿ. ಎಸ್. ರಾಮಾನುಜಂ,

ಪೊಲೀಸ್ ಮಹಾ ನಿರ್ದೇಶಕರು (ಹೆಚ್ಚುವರಿ) ರಾಜ್ಯ ಗುಪ್ತ ವಾರ್ತೆ ಬೆಂಗಳೂರು.

ಕವಿಗಳೆಂದರೆ ಸರ್ವಸ್ವವನ್ನೂ ದಾನಮಾಡಿ ಬಿಡುತ್ತಿದ್ದ ಹಾಗೂ ಸತ್ಕಾರ್ಯಕ್ಕೆ ಅಕ್ಷರಲಕ್ಷ ಕೊಡುತ್ತಿದ್ದ ವಿದ್ವತ್ಪ್ರಿಯ ರಾಜನೆಂದೇ ಪ್ರಸಿದ್ಧನಾಗಿದ್ದ ಸ್ವತಃ ಕವಿಯೂ ವಿದ್ವಾಂಸನೂ ಆಗಿದ್ದ ಭೋಜರಾಜನ ಮೇಲೆ ವಿದ್ವನ್ಮಣಿತಿಲಕ ಭೋಜರಾಜ ಎಂಬ ಕಾದಂಬರಿಯನ್ನು ಬರೆದು ಶ್ರೀ ಮಾಧವಸಿಂಹರು ಸಾಹಿತ್ಯಲೋಕಕ್ಕೆ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ. ಭೋಜರಾಜನ ಮೇಲೆ ಕನ್ನಡದಲ್ಲಿ ಇಂತಹ ಕಾದಂಬರಿಯೊಂದು ಬಂದು ಎರಡನೆಯ ಮುದ್ರಣವನ್ನು ಕಾಣುತ್ತಿರುವುದು ಸಂತೋಷಕರ ವಿಚಾರ. ಶ್ರೀ ಮಾಧವ ಸಿಂಹರು ಪೊಲೀಸ್ ಇಲಾಖೆಯಲ್ಲಿದ್ದರೂ ಸಾಹಿತ್ಯ ಕ್ಷೇತ್ರದಲ್ಲಿ ಪ್ರವೃತ್ತಿಯನ್ನು ಬೆಳಸಿಕೊಂಡು ದುಡಿಯುತ್ತಿರುವುದು ಹೆಮ್ಮೆಯ ವಿಚಾರ. ಅವರ ಲೇಖನಿಯಿಂದ ಹೀಗೆಯೇ ಭಾರತೀಯ ಪರಂಪರೆಯ ಶ್ರೇಷ್ಠವಾದ ಅಂಶಗಳನ್ನು ಹೊರತರುವ ಅನೇಕ ಕೃತಿಗಳು ಹೊರಬರಲಿ ಎಂದು ಹಾರೈಸುತ್ತೇನೆ.

ಬೆಂಗಳೂರು

ಪಿ. ಎಸ್. ರಾಮಾನುಜಂ

## : ಶುಭ ಹಾರೈಕೆ :

ಮಾನ್ಯ ಮಾಧವಸಿಂಹ ಅವರು ನನ್ನ ಆಪ್ತ ಸ್ನೇಹಿತರಲ್ಲದೆ, ನನ್ನ ಹುಟ್ಟೂರಾದ ನಂಜನಗೂಡಿನಲ್ಲೇ ಸಾಹಿತ್ಯ ಪರಂಪರೆಯ ಕುಟುಂಬದಲ್ಲಿ ಜನಿಸಿದವರೆಂಬುವುದು ಹೆಮ್ಮೆತರುವ ವಿಚಾರ. ಪೋಲೀಸ್ ಇಲಾಖೆಯಲ್ಲಿ ಹೆಚ್.ಎನ್. ಮಾಧವರಾವ್ ಆಗಿ ವೃತ್ತಿಯಲ್ಲಿದ್ದರಾಗಿದ್ದರೂ ಪ್ರವೃತ್ತಿಯಲ್ಲಿ ಮಾಧವಸಿಂಹರಾಗಿ ಹಲವಾರು ಕಾದಂಬರಿಗಳ ವಿರಚಿತರಾಗಿ ಕನ್ನಡ ಸಾರಸ್ವತ ಲೋಕಕ್ಕೆ ಸಲ್ಲಿಸಿರಿಸುವ ಇವರ ಸೇವೆ ಶ್ಲಾಘನೀಯ. ಇವರ ಒಂಬತ್ತನೆ ಕೃತಿಯಾಗಿ ಹೊರಬರುತ್ತಿರುವ "ವಿದ್ವನ್ಮಣಿತಿಲಕ ಭೋಜರಾಜ" ಇವರ ಕೃತಿಗಳಲ್ಲಿ ಮೈಲಿಗಲ್ಲಾಗಿ ನಿಲ್ಲುವಂತಹದಾಗಿರುತ್ತದೆ. ಶ್ರೀ ಮಾಧವಸಿಂಹ ಅವರ ಚಿಕ್ಕಪ್ಪಂದಿರಾದ ಸ್ವರ್ಗೀಯ ಹೆಚ್.ಎಲ್.ಎನ್. ಸಿಂಹ ಅವರು ನಮ್ಮ ಕುಟುಂಬಕ್ಕೆ ಸನಿಹರಾಗಿದ್ದಂತೆ ಇವರೂ ಸಹ ನನ್ನ ಆಪ್ತರಾಗಿರುವುದು ಹಾಗೂ ಕನ್ನಡಾಂಬೆಯ ಅರಾಧಕರಾಗಿರುವುದು ನಾನು ಹೆಮ್ಮೆಯಿಂದ ಹೇಳಿಕೊಳ್ಳುವ ಸಂಗತಿಯಾಗಿರುತ್ತದೆ. ಮಾಧವಸಿಂಹ ಅವರ "ವಿದ್ವನ್ಮಣಿತಿಲಕ ಭೋಜರಾಜ" ಈ ಐತಿಹಾಸಿಕ ಕಾದಂಬರಿಯು ಸರ್ವಾಂಗೀಣ ಯಶಸ್ಸು ಕಂಡು, ಇವರಿಂದ ಮತ್ತಷ್ಟು ಉತ್ತಮ ಕೃತಿ ರಚಿಸುವಲ್ಲಿ ಪ್ರೋತ್ಸಾಹದಾಯಕವಾಗಲೀ ಎಂದು ಹಾರೈಸಿ, ಶ್ರೀ ಮಾಧವಸಿಂಹ ಹಾಗೂ ಅವರ ಕುಟುಂಬಕ್ಕೆ ಸರ್ವ ರೀತಿಯ ಕಲ್ಯಾಣವನ್ನು ದಯಪಾಲಿಸಲಿ ಎಂದು ನಂಜನಗೂಡು ಶ್ರೀ ಶ್ರೀಕಂಠೇಶ್ವರರನ್ನು ಬೇಡಿಕೊಳ್ಳುತ್ತೇನೆ.

ಎನ್.ಎ. ಚಿದಂಬರ
ಶ್ರೀ ಶ್ರೀಕಂಠೇಶ್ವರ ಸೇವಾ ಸಂಘ (ರಿ)
ಮಲ್ಲೇಶ್ವರಂ, ಬೆಂಗಳೂರು.

ದಿ. 15.10.1993

## KARNATAKA STATE POLICE

**S. N. S. MURTHY**, I.P.S.
Director General and
Inspector General of Police
Karnataka State

Police Headquarters
No. 2, Nrupathunga Road
Bangalore - 560 002
ಅಕ್ಟೋಬರ್ 16, 1993

---

### ಎರಡು ಮಾತು

ಶ್ರೀ ಹೆಚ್. ಎನ್. ಮಾಧವ ರಾವ್ (ಮಾಧವ ಸಿಂಹ) ಇವರ ಹೊಸ ಐತಿಹಾಸ ಕಾದಂಬರಿಗೆ ಒಂದು ಸಂಕ್ಷಿಪ್ತ ಮುನ್ನುಡಿಯನ್ನು ಬರೆಯಲು ನಾನು ಸಂತೋಷಿಸುತ್ತೇನೆ. ಪೊಲೀಸ್ ಇಲಾಖೆಯಲ್ಲಿ ಮೂವತ್ತು ವರ್ಷಗಳ ಕಾಲ ಸೇವೆಸಲ್ಲಿಸಿದ ಶ್ರೀ ಮಾಧವ ರಾವ್ ಅವರು ಮೂಲತಃ ನಂಜನಗೂಡಿನವರೇ ಆಗಿದ್ದು ಆಗಿನ ಸುಪ್ರಸಿದ್ಧ ಹಿರಿಯ ಚಿತ್ರ ಸಾಹಿತಿ ದಿವಂಗತ ಹೆಚ್.ಎಲ್.ಎನ್. ಸಿಂಹ ಅವರ ವಂಶೀಕರು ಆಗಿರುತ್ತಾರೆ. ಪೊಲೀಸ್ ಇಲಾಖೆಯ ಕೆಲಸ ಸ್ವಾರಸ್ಯಮಯವಾದರೂ ಸಹ. ಸಾಹಿತಿಗಳಿಗೆ ಸ್ಪೂರ್ತಿಯನ್ನು ನೀಡುವ ದೃಷ್ಟಿಯಿಂದ ಅದು ನೀರಸ ಎಂದು ಹಲವರ ಭಾವನೆ ಇರಬಹುದು. ಆದರೆ ಶ್ರೀ ಮಾಧವ ಸಿಂಹ ಅವರು ಈ ಭಾವನೆಯನ್ನು ಸುಳ್ಳಾಗಿಸಿದ್ದಾರೆ. ತಮ್ಮ ಕೆಲಸದ ಒತ್ತಡದ ನಡುವೆಯೂ ಸಹ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ತಮ್ಮ ಸೇವೆಯನ್ನು ಸಲ್ಲಿಸುತ್ತಾ ಬಂದಿರುವುದು ನನ್ನ ಗಮನಕ್ಕೆ ಬಂದಿದೆ. ಇದು ಸ್ತುತ್ಯಾರ್ಹ. ಇವರು ಅನೇಕ ಕನ್ನಡ ಸಾಮಾಜಿಕ ಕಾದಂಬರಿಗಳನ್ನು ಬರೆದು ಕನ್ನಡ ಸಾಹಿತ್ಯ ಲೋಕಕ್ಕೆ ಶ್ರೀಮಂತಿಕೆಯನ್ನು ಒದಗಿಸಿದ್ದಾರೆ. ಇವರು ಬರೆದಿರುವ ಹಲವಾರು ಕನ್ನಡ ಸಾಮಾಜಿಕ ಕಾದಂಬರಿಗಳಲ್ಲಿ ಅಪೂರ್ವದೇವತೆ, ಬಾಳ ಪುಟದಲ್ಲಿ ಮತ್ತು ನನ್ನಾಸೆಯಹೂವು ಕೃತಿಗಳು ಜನಪ್ರಿಯವಾಗಿದೆ ಎಂದು-ಕೇಳಿ ಬಲ್ಲೆ.

ಇದೀಗ ಕನ್ನಡ ಸಾಹಿತ್ಯ ಲೋಕಕ್ಕೆ ಅರ್ಪಿಸುತ್ತಿರುವ ಐತಿಹಾಸಿಕ ಕಾದಂಬರಿ "ವಿದ್ವನ್ಮಣಿತಿಲಕ ಭೋಜರಾಜ" ಯಶಸ್ವಿಯಾಗಲಿ ಎಂದು ಹಾರೈಸುತ್ತೇನೆ. ಶ್ರೀಯುತರ ಸಾಹಿತ್ಯಸೇವೆ ಮುಂದುವರಿಯಲಿ, ಅದಕ್ಕೆ ಓದುಗರ ಮುಕ್ತ ಪ್ರೋತ್ಸಾಹ ಸಿಗಲಿ ಎಂದು ಆಶಿಸುತ್ತೇನೆ.

**ಎಸ್.ಎನ್.ಎಸ್. ಮೂರ್ತಿ**
ಮಹಾ ನಿರ್ದೇಶಕರು ಮತ್ತು
ಆರಕ್ಷಕ ಮಹಾನಿರೀಕ್ಷಕರು



# ನಾಲ್ಕು ಮಾತು

ಪರಮ ಶ್ರೇಷ್ಠವಾದ ಗ್ರಂಥಗಳು, ಉತ್ತಮ ಸಾಹಿತ್ಯವನ್ನೊಳಗೊಂಡ ಕಥೆ-ಕಾದಂಬರಿಗಳು ದೇಶದ ಅಮೂಲ್ಯ ಆಸ್ತಿ.

ನಮ್ಮ ಕರ್ನಾಟಕ ರಾಜ್ಯ ಪೋಲೀಸ್ ಇಲಾಖೆಯಲ್ಲಿಯೂ ಸಹ ಅನೇಕ ಕನ್ನಡ ಬರಹಗಾರರಿದ್ದಾರೆ. ಉತ್ತಮ ಕನ್ನಡಗ್ರಂಥಗಳನ್ನು ರಚಿಸಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಿಕೆಗೊಳಿಸಿದ್ದಾರೆ. ಆ ಮಹನೀಯರುಗಳಪೈಕಿ ಇಬ್ಬರ ಹೆಸರನ್ನು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ಡಾ. ಪಿ. ಎಸ್. ರಾಮಾನುಜಂ, ಐ.ಪಿ.ಎಸ್. ಮತ್ತು ಶ್ರೀ ವಿಜಯಾಸಾಸನೂರ್ ಐ.ಪಿ.ಎಸ್. ಇವರುಗಳು ಪೋಲೀಸ್ ಇಲಾಖೆಯಲ್ಲಿ ಉನ್ನತಾಧಿಕಾರಿಗಳಾಗಿ ದಿನವಿಡೀ ಅಹೋರಾತ್ರಿ ನಿರಂತರ ಸೇವೆ ಸಲ್ಲಿಸುತ್ತಾ ಜೊತೆಗೆ ಕನ್ನಡ ಸಾಹಿತ್ಯಕ್ಷೇತ್ರಕ್ಕೂ ಸಹ ಆಧಾರಸ್ಥಂಭವಾಗಿರುವುದು ಉಲ್ಲೇಖನಾರ್ಹ ಹಾಗೂ ತಾಯಿಯ ಮಹಾಭಾಗ್ಯ.

ಅದರಂತೆ ಸುಮಾರು ಮೂರು ದಶಕಗಳಿಂದಲೂ ಪೋಲೀಸ್ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಾ ಜೊತೆಗೆ ಬಿಡುವು ವೇಳೆಯಲ್ಲಿ ತಮ್ಮ ಅಮೂಲ್ಯ ಸಮಯವನ್ನು ವ್ಯರ್ಥಮಾಡದೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿಯೂ ಸಹ ಅನೇಕ ಕನ್ನಡ ಸಾಮಾಜಿಕ ಕಾದಂಬರಿಗಳನ್ನು

ರಚಿಸಿ ಆ ಮೂಲಕ ಸಾಹಿತ್ಯಲೋಕವನ್ನು ಶ್ರೀಮಂತಗೊಳಿಸುತ್ತಾ ಬಂದಿರುವ ಮಾಧವಸಿಂಹ ಎಂಬ ಕಾವ್ಯನಾಮದಿಂದ ಖ್ಯಾತರಾದ ಶ್ರೀ ಹೆಚ್. ಎಸ್. ಮಾಧವರಾವ್ ಅವರು ಈಗಾಗಲೇ ಅನೇಕ ಕಾದಂಬರಿಗಳನ್ನು ಬರೆದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಚಿರಪರಿಚಿತರಾಗಿದ್ದಾರೆ.

ಇದೀಗ ಶ್ರೀ ಮಾಧವಸಿಂಹರು ಪ್ರಾಚೀನ ಭಾರತದ ಸುಮಾರು ಎರಡನೇ ಶತಮಾನಕ್ಕೂ ಹಿಂದಿನ, ಅಂದಿನ ಅಖಂಡ ಭಾರತದ ರಾಜಮಹಾರಾಜರುಗಳ ಪರಂಪರೆಯಲ್ಲಿ ಕಾಣಬರುವ ಅನೇಕ ರಾಜರುಗಳ ಸಾಲಿನಲ್ಲಿ ಮಹಾ ಸುಪ್ರಸಿದ್ಧನಾಗಿದ್ದ ಹಾಗೂ ಸಂಸ್ಕೃತ ಕವಿಗಳಿಗೆ ಆಶ್ರಯದಾತನಾಗಿದ್ದ ಆದರ್ಶ ರಾಜ ಭೋಜರಾಜನ ಕಥಾವಸ್ತುವನ್ನು ತಮ್ಮದೆ ಆದ ಕಲ್ಪನಾಶಕ್ತಿಯ ಮೂಲಕ ವಿನೂತನವಾಗಿ ರಚಿಸಿರುವ "ವಿದ್ವನ್ಮಣಿತಿಲಕ ಭೋಜರಾಜ" ಎಂಬ ಕನ್ನಡ ಗ್ರಂಥವನ್ನು ಸಾಹಿತ್ಯಲೋಕಕ್ಕೆ ಅರ್ಪಿಸುತ್ತಿದ್ದಾರೆ.,

ಇವರು ಮೈಸೂರು ಜಿಲ್ಲೆಯ ದಕ್ಷಿಣಕಾಶಿ ಎಂದೇ ಮನೆ ಮಾತಾಗಿರುವ ನಂಜನಗೂಡಿನವರೇ ಆದ ಶ್ರೀಯುತರು ಕನ್ನಡ ಚಿತ್ರರಂಗದ ಹಿರಿಯ ಚಲನಚಿತ್ರ ಸಾಹಿತಿ ನಿರ್ಮಾಪಕ ನಿರ್ದೇಶಕರಾದ ಕೀರ್ತಿಶೇಷ ಶ್ರೀ ಹೆಚ್. ಎಲ್. ಎನ್. ಸಿಂಹ ಅವರ ವಂಶೀಕರು ಹಾಗೂ ಮೊದಲಿನಿಂದಲೂ ನನ್ನ ಬಗ್ಗೆ ಅಪಾರ ಪ್ರೀತಿ ವಿಶ್ವಾಸವನ್ನಿಟ್ಟುಕೊಂಡು ಬಂದಿದ್ದಾರೆ. ಶ್ರೀ ಮಾಧವಸಿಂಹರು ಇಂತಹ ಉತ್ತಮ ಕನ್ನಡ ಗ್ರಂಥವನ್ನು ನಾಡಿನ ಜನತೆಗೆ ಅರ್ಪಿಸುತ್ತಿರುವುದು ಶ್ಲಾಘನೀಯ.

ಶ್ರೀ ಮಾಧವಸಿಂಹರಿಗೆ ಕನ್ನಡತಾಯಿ ಭುವನೇಶ್ವರಿಯು ಎಲ್ಲಾ ರೀತಿಯಲ್ಲೂ ಒಳ್ಳೆಯದು ಮಾಡಲಿ. ಇವರಿಂದ ಇನ್ನೂ ಹೆಚ್ಚು ಹೆಚ್ಚು ಉಪಯುಕ್ತ ಕನ್ನಡ ಗ್ರಂಥಗಳು ರಚಿಸುವಂತಾಗಲಿ ಎಂದು ಹಾರೈಸುತ್ತೇನೆ.

ಇಂತು
ಶುಭಕಾಮಾನೆಗಳೊಂದಿಗೆ
**ರಾಜ್‌ಕುಮಾರ್**

ಬೆಂಗಳೂರು
ತಾ. 10.08.1993

# ಲೇಖಕರ ಉಪಕಾರಸ್ಮರಣೆ

ಸುಮಾರು ಎರಡು ದಶಕಗಳಿಂದಲೂ ಕನ್ನಡ ಬರಹಗಾರನಾಗಿ ಸೇವೆಸಲ್ಲಿಸುತ್ತಾ ಅನೇಕ ಸಾಮಾಜಿಕ ಕಾದಂಬರಿಗಳನ್ನು ಬರೆದು ಪ್ರಕಟಿಸುತ್ತಾ ಬಂದಿರುವ ನನಗೆ ಪ್ರಾಚೀನ ಭಾರತದ (ಚಪ್ಪನ್ನರುದೇಶಗಳ) ರಾಜಮಹಾರಾಜರ ಪರಂಪರೆಯಲ್ಲಿ ಹಾಗೂ ಇತಿಹಾಸದಲ್ಲಿ ಧ್ರುವತಾರೆಯಂತೆ ಅಜರಾಮರನಾಗಿ ಮಿಂಚಿದ ರಾಜ ಭೋಜರಾಜನ ಅಪೂರ್ವ ಮೂಲಕಥಾವಸ್ತುವನ್ನು ಬರೆದು ಪ್ರಕಟಿಸಬೇಕೆಂಬ ಕುತೂಹಲ ಉಂಟಾಯಿತು.

ಅದಕ್ಕಾಗಿ ಅನೇಕಾನೇಕ ಹಿರಿಯ ಸಂಸ್ಕೃತ ಪಂಡಿತರುಗಳನ್ನು ಇತಿಹಾಸಕಾರರನ್ನು ಸಂಪರ್ಕಿಸಿದೆ. "ನಭೂತೋ ನಭವಿಷ್ಯತಿ" ಎಂಬಂತೆ ಆತನ ಚರಿತ್ರೆಯನ್ನು ಕೇಳುಕೇಳುತ್ತಿದ್ದಂತೆ ನನಗೆ ನಾನೇ ವಿಸ್ಮಯಭೂತನಾದೆ. ನಿಜಕ್ಕೂ ದೇವಲೋಕದ ದೇವರಾಜ ಇಂದ್ರದೇವನ ಹಿರಿಮೆಯನ್ನು ನಾಚಿಸುವಂಥ ಮಹಾದೈವಾಂಶ ಸಂಭೂತನು ಸ್ವತಃ ಪಾಂಡಿತ್ಯ ಭೂಷಣನು ಮಹಾಮಹಾ ವಿದ್ವನ್ಮಣಿಗಳ ಆಶ್ರಯದಾತನು. ರಾಜಧರ್ಮ, ರಾಜನೀತಿ, ಪ್ರಜಾಪರಿಪಾಲನೆಯಲ್ಲಿ ಅಭೂತಪೂರ್ವನು ಆದ ಆ ಮಹಾಪುರುಷನ ಚರಿತ್ರೆಯನ್ನು ಬರೆದು ಪ್ರಕಟಿಸಲು ನಾನು ಸಮರ್ಥನೆ? ನನಗೆ ಆ ಯೋಗ್ಯತೆ ಇದೆಯೆ? ಎಂಬ ಬೃಹದಾಕಾರದ ಪ್ರಶ್ನೆಗಳು ನನ್ನನ್ನು ಕಾಡಿತು. ಹೇಗೋ ಇಟ್ಟ ಹೆಜ್ಜೆ ಹಿಂದಕ್ಕೆ ಹಾಕದೆ ದಿಟ್ಟ ಹೆಜ್ಜೆಯಿಂದ ವರ್ಷಗಟ್ಟಲೆ ಶ್ರಮಿಸಿದೆ. ಸಾಧನೆ ಮಾಡಿದೆ. ಆ ಸಾಧನೆಯ ಫಲವಾಗಿ "ಭೋಜರಾಜ" ಕಥಾ ವಸ್ತುವಿನ ಮೊದಲರ್ಧ ಭಾಗವನ್ನು ಪ್ರಕಟಿಸಲು ಸಾಧ್ಯವಾಯಿತು. ಆತನ ಚರಿತ್ರೆಗೆ ಸ್ವತಃ ನಾನೇ ಬಯಸಿದ ಶಿರೋನಾಮೆ. ವಿದ್ವನ್ಮಣಿ ತಿಲಕ ಭೋಜರಾಜ ಎಂಬ ಹೆಸರನಿಟ್ಟು, ಕಥಾ ವಸ್ತುವಿನ ಮೊದಲರ್ಧ ಭಾಗವನ್ನು ಕನ್ನಡ ಸಾಹಿತ್ಯ ಭಂಡಾರಕ್ಕೆ ಸಮರ್ಪಿಸಿದೆ.

"ವಿದ್ವನ್ಮಣಿ ತಿಲಕ ಭೋಜರಾಜ" ಗ್ರಂಥವನ್ನು ಪರಿಶೀಲಿಸಿ ಅದೊಂದು ಉತ್ತಮ ಗ್ರಂಥವೆಂದು ಪರಿಗಣಿಸಿದ ಕರ್ನಾಟಕ ರಾಜ್ಯದ ಎಲ್ಲಾ ಸಾರ್ವಜನಿಕ ಗ್ರಂಥಾಲಯಗಳು ಪುಸ್ತಕವನ್ನು ಖರೀದಿಸಲು ಆದೇಶ (ಸುತ್ತೋಲೆ) ನೀಡಿದ ನಮ್ಮ ಕರ್ನಾಟಕ ರಾಜ್ಯ ಸಾರ್ವಜನಿಕ ಗ್ರಂಥಾಲಯದ ಉನ್ನತ ಅಧಿಕಾರಿಗಳು ಹಾಗೂ ಕರ್ನಾಟಕ ರಾಜ್ಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಉನ್ನತಾಧಿಕಾರಿಗಳಿಗೆ ನಾನು ಹೃದಯಾಂತರಾಳದಿಂದ ಅತ್ಯಂತವಾಗಿ ಸ್ಮರಿಸುತ್ತೇನೆ.

ಅದರಂತೆ ನಾನು ವೃತ್ತಿಯಲ್ಲಿ ಕರ್ನಾಟಕ ರಾಜ್ಯ ಪೊಲೀಸ್ ಇಲಾಖೆಯಲ್ಲಿ ಆರಕ್ಷಕ ಉಪನಿರೀಕ್ಷಕನಾಗಿ, ಪ್ರವೃತ್ತಿಯಲ್ಲಿ ಕನ್ನಡ ಬರಹಗಾರನಾಗಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿಯೂ ಸೇವೆ ಸಲ್ಲಿಸಲು ಎಲ್ಲಾ ರೀತಿಯಲ್ಲೂ ಪರಮ ಪ್ರೋತ್ಸಾಹ ನೀಡಿದ ಹಾಗೂ "ಭೋಜರಾಜ"

ಕನ್ನಡ ಗ್ರಂಥವನ್ನು ರಾಜ್ಯ ಪೋಲೀಸ್ ಇಲಾಖೆಯ ಎಲ್ಲಾ ಜಿಲ್ಲೆಗಳ ವರಿಷ್ಠಾಧಿಕಾರಿಗಳ ಮತ್ತು ಜಿಲ್ಲಾ ಪೋಲೀಸ್ ಕಛೇರಿಗಳ ಗ್ರಂಥಾಲಯಗಳಿಗೆ ಪುಸ್ತಕವನ್ನು ಖರೀದಿಸಿ ನನ್ನ ನಿರಂತರ ಕನ್ನಡ ಸಾಹಿತ್ಯ ಸೇವೆಗೆ ಪ್ರೋತ್ಸಾಹ ನೀಡುವಂತೆ ಆದೇಶ ನೀಡಿದ ರಾಜ್ಯ ಪೋಲೀಸ್ ಇಲಾಖೆಯ ಮಾನ್ಯ ಪೋಲೀಸ್ ಡೈರೆಕ್ಟರು ಜನರಲ್ ಮತ್ತು ಇನ್‌ಸ್ಪೆಕ್ಟರ್ ಜನರಲ್‌ರವರಿಗೂ ಎಲ್ಲಾ ಉನ್ನತ ಪೋಲೀಸ್ ಐ.ಪಿ.ಎಸ್. ಅಧಿಕಾರಿಗಳಿಗೂ ನಾನು ಅತ್ಯಂತ ಚಿರಋಣಿಯಾಗಿದ್ದೇನೆ.

ಈ ಪುಸ್ತಕವನ್ನು ಹೊರತರಲು ಪ್ರತ್ಯಕ್ಷವಾಗಿ ಪರೋಕ್ಷವಾಗಿ ಎಲ್ಲಾ ರೀತಿಯ ಸಹಕಾರ ನೀಡಿದ ಬಂಧು ಮಿತ್ರರಿಗೆ ನಾನು ಎಂದೆಂದೂ ಆಭಾರಿಯಾಗಿದ್ದೇನೆ.

ವಿದ್ವನ್ಮಣಿ ತಿಲಕ ಭೋಜರಾಜ ಕೃತಿಯ ಎರಡನೇ ಮುದ್ರಣಕ್ಕೆ ನನ್ನ ಮನವಿಯನ್ನು ಪುರಸ್ಕರಿಸಿ ಇಲಾಖೆಯ ಕೆಲಸದ ಎಷ್ಟೇ ಒತ್ತಡವಿದ್ದಾಗ್ಯೂ ಸಹ ಪುಸ್ತಕಕ್ಕೆ ಮುನ್ನುಡಿಯನ್ನು ಬರೆದುಕೊಟ್ಟ ಬೆಂಗಳೂರು ನಗರ ಪೊಲೀಸ್ ಕಮಿಷನರವರಾದ ಸನ್ಮಾನ್ಯ ಶ್ರೀ ಎಲ್. ರೇವಣ್ಣ ಸಿದ್ದಯ್ಯ, ಐ.ಪಿ.ಎಸ್.ರವರಿಗೂ ಮತ್ತು ಕರ್ನಾಟಕ ಸರ್ಕಾರ ರಾಜ್ಯ ಗುಪ್ತ ವಾರ್ತೆ ಪೊಲೀಸ್ ಮಹಾ ನಿರ್ದೇಶಕರು, ಸ್ವತಃ ಸಂಸ್ಕೃತ ಭಾಷಾ ಪ್ರಬುದ್ಧರೂ, ಕನ್ನಡ ಸಾಹಿತ್ಯ ಕ್ಷೇತ್ರದ ದಿಗ್ಗಜರೂ ಆದ ಡಾ. ಟಿ.ಎಸ್. ರಾಮಾನುಜಂ, ಐ.ಪಿ.ಎಸ್. ರವರಿಗೂ ನಾನು ನನ್ನ ಹೃದಯಾಂತರಾಳದಿಂದ ಕೃತಜ್ಞತೆಯನ್ನು ಅರ್ಪಿಸುತ್ತೇನೆ.

ಭೋಜರಾಜ ಎರಡನೇ ಮುದ್ರಣಕ್ಕೆ ಎಲ್ಲ ರೀತಿಯಲ್ಲೂ ಸಹಕರಿಸಿ ಸುಂದರವಾಗಿ ಮುದ್ರಿಸಿ ಕೊಟ್ಟ, ನನ್ನ ಆತ್ಮೀಯರಾದ ಭಾರತೀಶ ಎಂಟರ್‌ಪ್ರೈಸಸ್‌ನ ಸನ್ಮಾನ್ಯ ಶ್ರೀ ಕೆ.ಬಿ. ಕೃಷ್ಣಮೂರ್ತಿರವರಿಗೆ ನಾನು ಆಭಾರಿಯಾಗಿದ್ದೇನೆ.

" *ಜೈ ಕರ್ನಾಟಕ ಮಾತೆ* "

(ಮಿಗಿಲಾಗಿ ನನ್ನ ಸಾಹಿತ್ಯ ಕೃಪೆಗೆ ಎಲ್ಲಾರೀತಿಯ ಸಹಕಾರ ನೀಡುತ್ತಿರುವ ನನ್ನ ಸಹಧರ್ಮಿಣಿಗೆ ಈ ಮುದ್ರಣದ ಯಶಸ್ಸು ಮೀಸಲು.)

ಪ್ರಮಾಥಿ ಸದವತ್ಸರ ಶ್ರಾವಣ ಶುದ್ಧ ಪಂಚಮಿ - ಮಾಧವ ಸಿಂಹ.

**"ಕಾಳಿದಾಸ - ಭೋಜರಾಜ"**

**ವಿದ್ವನ್ಮಣಿ ತಿಲಕ ಭೋಜರಾಜ ಇದರ ದ್ವಿತೀಯ ಭಾಗ ಸಧ್ಯದಲ್ಲಿ ಪ್ರಕಟವಾಗಲಿದೆ.**

# ಲೇಖಕರ ನುಡಿ

ಸಹೃದಯ ಓದುಗರ ಶ್ರೀರಕ್ಷೆಯಿಂದಾಗಿ ಹಾಗೂ ಕರ್ನಾಟಕ ರಾಜ್ಯ ಪೋಲೀಸು ಇಲಾಖೆಯ ಉನ್ನತಾಧಿಕಾರಿಗಳೆಲ್ಲರ ಔದಾರ್ಯದ ಪರಮ ಪ್ರೋತ್ಸಾಹದಿಂದ ಮತ್ತೆ ಮತ್ತೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕೃಷಿ ಮಾಡಲು ಹೊರಟ ನನಗೆ ಪ್ರಾಚೀನ ಭಾರತದ ಇತಿಹಾಸದಲ್ಲಿ, ರಾಜ ಮಹಾರಾಜರುಗಳ ಪರಂಪರೆಯಲ್ಲಿ ಧ್ರುವತಾರೆಯಂತೆ ಅಖಂಡ ವೈಭವದಿಂದ ಶೋಭಿಸಿದ ಆದರ್ಶರಾಜ ಭೋಜರಾಜನ ಕಥೆಯನ್ನು ಬರೆದು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅರ್ಪಿಸಬೇಕೆಂದು ನನ್ನ ಮನಸ್ಸು ಗರಿಕೆದರಿತು.

ಹಲವಾರು ಕನ್ನಡ ಸಾಮಾಜಿಕ ಕಾದಂಬರಿ ಬರೆದು ಪ್ರಕಟಿಸಿದ ನನಗೆ ಐತಿಹಾಸಿಕವಾಗಿಯೂ ಪೌರಾಣಿಕವಾಗಿಯೂ ಪ್ರತಿಬಿಂಬಿಸಿದ ಮಹಾ ಆದರ್ಶರಾಜ ಭೋಜರಾಜನ ನೈಜ ಕಥಾವಸ್ತುವನ್ನು ಬರೆಯಲು ಆರಂಭಿಸಿದಾಗ ನನಗೆ ಆಕಾಶಕ್ಕೆ ಏಣಿ ಹಾಕಿದಂತಾಯಿತು. ಆದರೂ ಧೃತಿಗೆಡದ ನಾನು ನನ್ನ ಪ್ರಯತ್ನವನ್ನು ಮುಂದುವರಿಸಿಕೊಂಡು ಸಾಗಿದೆ. ಭೋಜರಾಜ ಕಾಳಿದಾಸರಿಗೆ ಸಂಬಂಧ ಪಟ್ಟ ಅನೇಕ ಗ್ರಂಥಗಳನ್ನು ಪರಿಶೀಲಿಸಿದೆನು. ಯಾವುದೇ ಗ್ರಂಥವನ್ನು ತಿರುವು ಹಾಕಿದರೂ ಸಹ ಎಲ್ಲೆಡೆ ಕಾಳಿದಾಸನಿಗೆ ಹೆಚ್ಚು ಮಹತ್ವಕೊಟ್ಟು ಲೇಖಿಸಿದ್ದಾರೆಯೇ ಹೊರತು ಭೋಜರಾಜನ ಬಗ್ಗೆ ಅಷ್ಟಾಗಿ ಅವನ ಮೂಲ ಕಥೆಯನ್ನು ಆಧಾರಿಸಿ ಬರೆದಿಲ್ಲ. ಅನೇಕ ವರ್ಷಗಳಿಗೂ ಹಿಂದೆ "ಭೋಜ ಪ್ರಬಂಧ" ಎಂಬ ಒಂದು ಗ್ರಂಥ ಬಿಟ್ಟರೆ ಬೇರಾವ ಕೃತಿಯೂ ಲಭ್ಯವಿರಲಿಲ್ಲ. ಕಡೆಗೆ ತೆಲುಗು ಸಾಹಿತ್ಯ ಗ್ರಂಥದಲ್ಲಿ ಮಾತ್ರ ಕೆಲವು ಪೌರಾಣಿಕವಾದ ಆಧಾರ ಸಿಕ್ಕಿತು. ಅದೂ ಸಹ ಬೆರಳೆಣಿಕೆಯಲ್ಲಿ ಮಾತ್ರ.

ಆದರೆ ಎಲ್ಲೋ ಯಾವುದೇ ಗ್ರಂಥವನ್ನು ಒಳಹೊಕ್ಕು ನೋಡಿದರೂ ಸಹ ಭೋಜರಾಜ - ಕಾಳಿದಾಸರ ಬಗ್ಗೆ ಕಾಲ ನಿರ್ಣಯ ಬಗ್ಗೆ ಒಮ್ಮತವಿರಲಿಲ್ಲ ಎಂಬುದು ಅರಿವಾಯಿತು.

ಕಾಲ ನಿರ್ಣಯವೇ ಸರಿಯಾಗಿ ದೊರಕದಿದ್ದ ಮೇಲೆ ಇನ್ನು ಆತನ ನೈಜ ಚರಿತ್ರೆಯನ್ನು ಬರೆಯುವುದಾದರೂ ಹೇಗೆ ಎಂಬ ಜಿಜ್ಞಾಸೆ ಮತ್ತೆ ಕಾಡಿತು.

ಕೆಲವರು ಗ್ರಂಥಕರ್ತರು ಇತಿಹಾಸಕಾರರು ಭೋಜರಾಜನನ್ನು ಕ್ರಿ.ಶ. ಪೂರ್ವ ಎರಡನೆಯ ಶತಮಾನದವರು ಎನ್ನುತ್ತಾರೆ. ಮತ್ತೆ ಕೆಲವರು ಆರು - ಏಳನೆಯ ಶತಮಾನವಿರಬಹುದೆಂದು ಊಹಿಸುತ್ತಾರೆ. ಮೊಗದೊಬ್ಬರು ಭೋಜ ಕಾಳಿದಾಸರು ಕ್ರಿ.ಶ. ಪೂರ್ವ ಒಂದನೆಯ ಶತಮಾನದವರು ಎಂದು ವಾದಿಸುತ್ತಾರೆ. ಮತ್ತೆ ಕೆಲವಾರು ಪಂಡಿತರು ಕ್ರಿ. ಪೂರ್ವ ಒಂದನೆಯ ಶತಮಾನದಲ್ಲಿ ವಿಕ್ರಮಾದಿನ್ಯನ ಆಸ್ಥಾನದಲ್ಲಿ ಕಾಳಿದಾಸನು ರಾಜಕವಿ(ಶ್ರೇಷ್ಠಕವಿ)ಯಾಗಿದ್ದನೆಂದು ಎದೆ ತಟ್ಟಿ ಟೀಕಿಸುತ್ತಾರೆ.

ಹೀಗಿರುವಾಗ ಕಾಳಿದಾಸನು ವಿಕ್ರಮಾದಿತ್ಯ ರಾಜನ ಕಾಲದವನು ಎಂದ ಮೇಲೆ ಭೋಜರಾಜ - ಕಾಳಿದಾಸ ಸಂಬಂಧ ಬಾದರಾಯಣ ಸಂಬಂಧವೇ? ಎಂಬ ಬೃಹತ್ ಪ್ರಶ್ನೆಯೂ ಕಾಡುತ್ತದೆ. ಇದರಿಂದಾಗಿ ಈ ಎಲ್ಲದರ ಸಮಸ್ಯೆ ಯಕ್ಷ ಪ್ರಶ್ನೆಯಾಗಿ ಕಾಡಿತ್ತು ನನ್ನನ್ನು.

ಕಡೆಗೆ ನನಗೆ ಹತ್ತಿರದ ಬಂಧುಗಳಾದ ಚಿಂತಾಮಣಿ ತಾಲ್ಲೂಕು ಬುರುಡುಗುಂಟೆ ಗ್ರಾಮದ ಶ್ರೀ. ಬಿ. ಎಸ್. ಕೃಷ್ಣ ಮೂರ್ತಿಯವರ ಮೂಲಕ ತೆಲುಗು ಪಂಡಿತರೊಬ್ಬರನ್ನು ಸಂದರ್ಶಿಸಿದಾಗ ಭೋಜರಾಜ. - ಕಾಳಿದಾಸರ ಬಗ್ಗೆ ಸಾಕಷ್ಟು ವಿಚಾರವನ್ನು ತಿಳಿದಿದ್ದವರೇ ಆದ ಆ ಪಂಡಿತರ ಮೂಲಕ ಕೆಲವು ಮೂಲಾಧಾರಗಳನ್ನು ಶೇಖರಿಸಿಕೊಂಡೆನು. ಹಾಗೂ ಅವರಲ್ಲಿದ್ದ ತೆಲುಗು ಪುಸ್ತಕ ಒಂದನ್ನು ಪರಿಶೀಲಿಸಿದಾಗ ಅಲ್ಲಿ ಕಂಡು ಬಂದ ಅಂಶದ ಪ್ರಕಾರ ಭೋಜರಾಜನು ಐತಿಹಾಸ ವ್ಯಕ್ತಿ ಎಂಬುದಕ್ಕಿಂತ ಅವನೊಬ್ಬ ಪುರಾಣಯುಗದವನು ಎಂಬುದು ಸಹ ಕಂಡು ಬಂದಿತು.

ಆದ್ದರಿಂದ ನಾನು ಇಲ್ಲಿ ಪುರಾಣಕ್ಕೆ ಹೆಚ್ಚು ಮಹತ್ವ ಕೊಟ್ಟು ಬರೆಯಲು ಪ್ರಾರಂಭಿಸಿದೆ.

ಭೋಜರಾಜನು ಕ್ರಿ ಶ. ಪೂರ್ವದ ಒಂದನೆಯ ಶತಮಾನಕ್ಕೂ ಹಿಂದಿನವನು ಎಂಬುದನ್ನು ಊಹಿಸಬಹುದಾದರೂ

ನನ್ನ ಮತ್ತೊಬ್ಬರು ಬಂಧುಗಳಾದ ಬೆಂಗಳೂರು ವಿಜಯಾ ಕಾಲೇಜಿನ ಶ್ರೀ ಬಿ. ಎಸ್. ಅನಂತ ಪದ್ಮನಾಭರಾವ್ ನನ್ನ ಕೋರಿಕೆ ಮೇಲೆ ಬಹು ಸಾಹಸದಿಂದ ಹುಡುಕಿ ತಂದು ಕೊಟ್ಟ ಇಂಗ್ಲೀಷು ಗ್ರಂಥ ಲೈಟ್ ಆಫ್ ಟ್ರೂಥ್ ("LIGHT OF TRUTH") ಎಂಬ ಗ್ರಂಥದ ಆಧಾರದ ಮೇಲೆ (ಪುಟ337 ಪ್ಯಾರಾ 3) ಭೋಜರಾಜನು ಎರಡನೇ ಶತಮಾನದವನೆಂದು ವಿಕ್ರಮಶಖ ಐನೂರು ವರ್ಷಗಳ ನಂತರದವನು ಎಂಬ ಖಚಿತ ಅಂಶ ಕಂಡು ಬಂತು. ಆ ಆಧಾರದ ಪ್ರಕಾರ ಕಾಳಿದಾಸನು ಆ ಭೋಜರಾಜನ ಆಸ್ಥಾನದಲ್ಲಿ ರಾಜಾಶ್ರಯ ಪಡೆಯುತ್ತ ವಿಶ್ವಕವಿಯಾದನೆಂದು ತಿಳಿದು ಬಂತು. ಆ ಪ್ರಕಾರ ಭೋಜನು ಸಂಸ್ಕೃತ ವಿದ್ಯೆಗೆ ಬೆಲೆ ಕೊಟ್ಟಷ್ಟು ಬೇರೆ ಯಾರೇ ರಾಜರುಗಳು ಸಹ ಅಷ್ಟಾಗಿ ಮಹತ್ವ ಕೊಟ್ಟಿಲ್ಲ. ಹಾಗೂ ವಿಶ್ವದಲ್ಲಿಯೇ ಅತ್ಯಂತವಾದ ಕಿರೀಟ ಪ್ರಾಯವಾದ ಭಾರತೀಯ ಸಂಸ್ಕೃತಿ ಸುಸಂಸ್ಕೃತಿ - ಸಮಾಜಕ್ಕೆ ಪ್ರೋತ್ಸಾಹಿಸಿದಷ್ಟು ಮತ್ತಾವರಾಜರೂ ಕೊಟ್ಟಿರಲಿಲ್ಲ ಎಂಬ ನಗ್ನ ಸತ್ಯ ಕಂಡು ಬಂತು.

ಭೋಜರಾಜನ ಬಗ್ಗೆ ಮೇರು ಪ್ರಾಯ ವಾದ ಮತ್ತೊಂದು ಅತಿ ಮುಖ್ಯ ವಿಚಾರ ಆ ಆದರ್ಶರಾಜನ ಕೀರ್ತಿ ಕೇವಲ ಮಾನವಲೋಕ ಮಾತ್ರವಲ್ಲದೆ ತ್ರಿಲೋಕದವರೆವಿಗೂ ವ್ಯಾಪಿಸಿತ್ತು ಎಂಬ ಅಂಶ ಪೌರಾಣಿಕವಾಗಿ ಕಂಡು ಬರುತ್ತದೆ. ಆಗ ಗರಿಕೆದರಿದ ನನ್ನ ಮನಸ್ಸು...... ಭೋಜರಾಜನ ಕೀರ್ತಿ ತ್ರಿಲೋಕದಲ್ಲಿ ಹೇಗೆ ಯಾವರೀತಿ ವ್ಯಾಪಿಸಿತ್ತು? ಎಂಬ ಅಲೌಕಿಕ ವಿಚಾರವನ್ನು ಧಾರೆ ಧಾರೆಯಾಗಿ ಪುಟ ಪುಟಗಳಲ್ಲೂ ಅಲಂಕರಿಸಲು ಸತತವಾಗಿ ಪ್ರಯತ್ನ ಪಟ್ಟ ನಾನು ನನ್ನ ಲೇಖಣಿಯನ್ನು ಹೊತ್ತು ವಿಷ್ಣುಲೋಕ. ಬ್ರಹ್ಮಲೋಕ. ಶಿವಲೋಕಕ್ಕೆ ಪ್ರಯಾಣ ಬೆಳೆಸಿದೆ (ಮನಸ್ಸು ಮಾತ್ರ!)

ಇದೆ ಸಂದರ್ಭದಲ್ಲಿ ಪ್ರಪ್ರಥಮವಾಗಿ ಕಾಳಿದಾಸನು ಭೋಜರಾಜನ ಆಸ್ಥಾನಕ್ಕೆ ಬಂದು. ಭೋಜರಾಜನ ಕೀರ್ತಿಯನ್ನು ತನ್ನದೆ ಆದ ಚಮತ್ಕಾರ ಶ್ಲೋಕದಿಂದ ಹೇಳುತ್ತಾ "ಹೇ ಭೋಜರಾಜ ನಿನ್ನ ಅಖಂಡ ಉಜ್ವಲ ಕೀರ್ತಿಯ ಪ್ರಭೆ (ಬೆಳಕು) ಯಿಂದಾಗಿ ವಿಷ್ಣುಲೋಕದಲ್ಲಿ ವಿಷ್ಣುವು ತನ್ನ ಕ್ಷೀರಸಮುದ್ರ ಎಲ್ಲಿ ಹೋಯಿತು? ಎಂದು ಹುಡುಕುತ್ತಿದ್ದಾನೆ. ಬ್ರಹ್ಮದೇವರು ತನ್ನ ವಾಹನವಾದ ಅತ್ಯಂತ ಬಿಳುಪಾದ ಹಂಸ ಪಕ್ಷಿ ಕಾಣದಾಗಿದೆಯಲ್ಲ ಎಲ್ಲಿ ಹೋಯಿತು ಎಂದು

ಹುಡುಕುತ್ತಿದ್ದಾನೆ. ಅದೇ ರೀತಿಯಾಗಿ ಶಿವನು ತನ್ನ ಶ್ವೇತ ಶಿಖರವಾದ ಕೈಲಾಸ ಪರ್ವತ ಕಾಣದಾಗಿದೆಯಲ್ಲ ಎಲ್ಲಿ ಹೋಯಿತು ನನ್ನ ಕೈಲಾಸ ಪರ್ವತ" ಎಂದು ಪರಿತಪಿಸುತ್ತಿದ್ದಾನೆ. ಎಂದು ಭೋಜರಾಜನ ಕೀರ್ತಿಯನ್ನು ಬಣ್ಣಿಸಿದ್ದಾನೆ; ಎಂದ ಮೇಲೆ...... ಇಷ್ಟೊಂದು ಕೀರ್ತಿವಂತರಾದ..... ತ್ರೇತಾಯುಗದ ಹರಿಶ್ಚಂದ್ರ, ದಶರಥ ಮಹಾರಾಜರಿಂದ ಹಿಡಿದು ಕಲಿಯುಗದ ವಿಕ್ರಮಾದಿತ್ಯ ರಾಜಾಭರ್ತೃಹರಿ - ರಾಜರುಗಳವರೆಗೂ ಇವನಷ್ಟು ಹೊಗಳಿಸಿಕೊಂಡ ರಾಜರು ಮತ್ತೊಬ್ಬರಿಲ್ಲ ಎಂದು ಧಾರಾಳವಾಗಿ ಹೇಳಬಹುದು.

ಈ ಎಲ್ಲ ಅಂಶವನ್ನು ಕ್ರೋಢಿಕರಿಸಿ ಭೋಜರಾಜನ ಕಥಾವಸ್ತುವನ್ನು ಚಾರಿತ್ರಿಕ (ಐತಿಹಾಸಿಕ) ಕಥಾ ವಸ್ತುವಿಗೆ ಪೌರಾಣಿಕ ಹಿನ್ನೆಲೆಯಲ್ಲಿ ನನ್ನದೆ ಆದ ಕಲ್ಪನೆಯ ಮೆರಗು ಕೊಟ್ಟು ನನ್ನದೇ ಆದ ಶೈಲಿಯಲ್ಲಿ ಈ ಕೃತಿಯನ್ನು ಬರೆದಿದ್ದೇನೆ. ಅದು ಎಷ್ಟರಮಟ್ಟಿಗೆ ಫಲಕಾರಿಯಾಗಿದೆ ಎಂಬುದು ಸಹೃದಯ ಸಂಪನ್ನರಾದ ಓದುಗರ ಪಾಲಿಗೆ ಬಿಟ್ಟಿದ್ದೇನೆ.

ಈ ಕೃತಿಯನ್ನು ರಚಿಸಲು ಪ್ರಪ್ರಥಮವಾಗಿ ಎಲ್ಲ ರೀತಿಯಲ್ಲೂ ಸಹಾಯ ಮಾಡಿ ಮಾರ್ಗದರ್ಶನ ನೀಡಿದ ನನ್ನ ಸಾಹಿತ್ಯ ಕೃಷಿಗೆ ಪರಮ ಪ್ರೋತ್ಸಾಹಕರಾದ ಹಿರಿಯ ಸಾಹಿತಿ ಸೂರ್ಯನಾರಾಯಣ ಚಡಗ ಇವರನ್ನು ಹಾಗೂ ಮಿತ್ರ ರಾಧಾಕೃಷ್ಣಕಲ್ಯಾಣಪುರ್ ಅವರನ್ನು ಅನಂತವಾಗಿ ಸ್ಮರಿಸುತ್ತೇನೆ.

ಯಾವುದೇ ಉತ್ತಮ ಕೆಲಸ ಮಾಡಲು ಚೈತನ್ಯ (ಶಕ್ತಿ) ಮುಖ್ಯವಾದ ಅಡಿಗಲ್ಲು ಹಾಗೂ ಆಧಾರಸ್ತಂಭ. ನಾನು ಸಾಹಿತ್ಯ ಕೃಷಿ ಮಾಡಲು ಹೊರಟಾಗ ನನಗೆ ಎಲ್ಲರೀತಿಯಲ್ಲೂ ಚೈತನ್ಯ ತುಂಬಿ ಬೆನ್ನು ತಟ್ಟಿ ಪ್ರೋತ್ಸಾಹಿಸಿದ ನನ್ನ ಉನ್ನತ ಹಾಗೂ ಹಿರಿಯ ಐ.ಪಿ.ಎಸ್. ಪೊಲೀಸ್ ಅಧಿಕಾರಿಗಳಾದ ಸದ್ಭಾವನಾ ಹೃದಯ ಸಂಪನ್ನರಾದ ಕರ್ನಾಟಕ ರಾಜ್ಯದ ಡಿ.ಜಿ.ಪಿ. ಮತ್ತು ಐ.ಜಿ.ಪಿ. ರವರಾದ ಎಸ್.ಎನ್.ಎಸ್. ಮೂರ್ತಿ., ಶ್ರೀ ಆರ್ ಎಂ. ವಸಂತ ಕುಮಾರ್ ಡಿ.ಜಿ.ಪಿ., ಸಿ.ಓ.ಡಿ., ಎಲ್. ರೇವಣ್ಣ ಸಿದ್ದಯ್ಯ ಐ.ಜಿ.ಪಿ., ಸಿ.ಓ.ಡಿ. ಸುಭಾಶ್ ಚಂದ್ರ ಐ.ಜಿ.ಪಿ. ಮಡಿಯಾಲ್ ಐ.ಜಿ.ಪಿ. ಗುಪ್ತದಳ ಎಸ್.ಎಸ್. ಪಾವಟೆ ಡಿ.ಐ.ಜಿ.ಪಿ...... ಎಸ್.ಪಿ. ಗುಪ್ತದಳ ರವರುಗಳನ್ನು ಅತ್ಯಂತವಾಗಿ ಸ್ಮರಿಸುತ್ತೇವೆ, ಹಾಗೂ ನನ್ನ ಪರಮ ಮಿತ್ರರಾದ ವಾಸನ್. ಶ್ರೀನಿವಾಸ್. ಮಲ್ಲೇಶ್ ಇವರುಗಳನ್ನು ಸಹ

ಸ್ಮರಿಸುತ್ತೇನೆ. ಅಲ್ಲದೆ ಪೋಲೀಸ್ ಮುದ್ರಣಾಲಯದ ಸಹಾಯಕ ನಿರ್ದೇಶಕರಾದ ಶ್ರೀ ಸತ್ಯನಾರಾಯಣ ಇವರಿಗೂ ಸಹ ಅಭಾರಿಯಾಗಿದ್ದೇನೆ.

ಅದೇ ರೀತಿಯಾಗಿ ಈ ನನ್ನ ಕೃತಿಯು ಪುಟವಿಟ್ಟ ಚಿನ್ನದಂತೆ ಶೋಭಿಸಲು ಕಾರಣರಾದ ಹಾಗೂ ಗೀತೆಗಳನ್ನು ಒದಗಿಸಿಕೊಟ್ಟ ಕನ್ನಡ ಚಲನಚಿತ್ರ ಸಾಹಿತಿ.... ವಿಜಯಾನಾರಸಿಂಹ, ಸಂಸ್ಕೃತ ಪಂಡಿತರಾದ ಶ್ರೀ ಶ್ರೀ ರಾಘವೇಂದ್ರ ಗುರು ಪೀಠದ ವಂಶ ಭೂಷಣ ಪ್ರಾಯರಾದ ವಿದ್ಯಾತೀರ್ಥ ರಾಜ ಎಸ್. ಗುರುರಾಜಾಚಾರ್ಯರನ್ನೂ ಹಾಗೂ ಸಂಸ್ಕೃತ ವಿದ್ವಾನ್ ಹನುಮೇಶಾಚಾರ್ಯ ಜಾಲಿಹಾಳ ಹುನಗುಂದರವರನ್ನು ಮತ್ತು ನನ್ನ ಕಿರಿಯ ಸೋದರನಾದ ಚಿ|ರಾ| ಹೆಚ್.ಎಲ್. ಶೇಷಚಂದ್ರ (ಕೀರ್ತಿಶೇಷ ಹೆಚ್.ಎಲ್.ಎನ್.ಸಿಂಹರ ಪುತ್ರ) ರನ್ನು, ಈ ಸಂದರ್ಭದಲ್ಲಿ ಸ್ಮರಿಸುತ್ತೇನ.

ಈ ಪುಸ್ತಕವನ್ನು ಹೊರತರಲು ಉತ್ಸಾಹದ ಗರಡಿ ಆಳಾಗಿ ಶ್ರಮಿಸಿದ ನನ್ನ ಹತ್ತಿರದ ಬಂಧುಗಳಾದ ಶ್ರೀ. ಬಿ. ಎಸ್. ಶಾಮಣ್ಣ (ಬಿ.ಇ.ಎಲ್) ಇವರನ್ನು ಸಹ ಸ್ಮರಿಸುತ್ತೇವೆ.

ಈ ಕೃತಿಗೆ ಅನೇಕ ರೀತಿಯಲ್ಲಿ ನೆರವು ನೀಡಿದ ನನ್ನ ಕಿರಿಯ ಬಂಧುವಾದ, ಮೂರ್ತಿ ಚಿಕ್ಕದಾದರೂ ಕೀರ್ತಿದೊಡ್ಡದು ಎಂಬಂತೆ ಅತಿ ಎಳೆ ವಯಸ್ಸಿನಲ್ಲಿಯೇ ಭಗವತ್ ಪುರಾಣ - ಪುಣ್ಯ ಕಥೆಗಳಲ್ಲಿ ಪ್ರವೀಣರಾದ ಸುಕೀರ್ತಿವಂತ ಸಂಸ್ಕೃತ ಪಂಡಿತರಾದ ಹೈದರಾಬಾದಿನ ಹೆಚ್.ಸಿ.ಎಲ್.ಡಿ.ಎ.ವಿ. ಪ್ರೌಢಶಾಲೆಯ ಅಧ್ಯಾಪಕರು ಆದ ಶ್ರೀ ಎಂ.ಜಿ' ಶ್ರೀರಾಮಚಂದ್ರ ಪಂಡಿತ್ ಇವರ ನೆನಪು ನನ್ನ ಹೃದಯಂಗಳದಲ್ಲಿ ಸದಾ ಹಸಿರು.

ಏನೇ ಕಥೆ ಕಾದಂಬರಿ ಬರೆದರೂ ಸಹ ಪುಸ್ತಕ ಶೋಭಿಸಲು ಮುಖಚಿತ್ರವಿಲ್ಲದೆ ಶೋಭಿಸದು. ನನ್ನ ಭಾವನೆಗಿಂತಲೂ ಅತಿಶಯವಾಗಿ ಮುಖಚಿತ್ರವನ್ನು ರಚಿಸಿಕೊಟ್ಟ ಸುಪ್ರಸಿದ್ಧ ಚಿತ್ರ ಕಲೆಗಾರರಾದ 'ಶ್ರೀ' (ಶ್ರೀನಿವಾಸ ಮೂರ್ತಿ) ರನ್ನು ಈ ಸಂದರ್ಭದಲ್ಲಿ ಅತ್ಯಂತವಾಗಿ ಸ್ಮರಿಸುತ್ತೇನೆ.

ನನ್ನ ಸಾಹಿತ್ಯ ಕೃಷಿಗೆ ಮೊದಲಿನಿಂದಲೂ ಬಹು ಚೈತನ್ಯ ಸ್ವರೂಪರಾದ ಹಾಗೂ "ಅಪೂರ್ವದೇವತೆ" ಪುಸ್ತಕ ಬಿಡುಗಡೆ ಸಮಾರಂಭದ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತು ಅದೇ

ರೀತಿಯಾಗಿ ಪ್ರಸ್ತುತ ಈ ಐತಿಹಾಸಿಕ ಕೃತಿ ಬಿಡುಗಡೆ ಸಮಾರಂಭದ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತು ಬೆನ್ನು ತಟ್ಟಿ ಸಹಕರಿಸಿದ ನನಗೆ ಅತ್ಯಂತ ಆತ್ಮೀಯರು ಮಾರ್ಗದರ್ಶಕರು ಆದ ಶ್ರೀ ಶ್ರೀ ಕಂಠೇಶ್ವರ ಸೇವಾ ಸಂಘದ ಮೂಲ ವ್ಯವಸ್ಥಾಪಕರಾದ ಶ್ರೀ ಎನ್.ಎ. ಚಿದಂಬರ ಇವರ ಹೃದಯ ಔದಾರ್ಯವನ್ನು ಎಷ್ಟು ಹೇಳಿದರೂ ಸಾಲದಾಗಿದೆ. ಅವರನ್ನು ಈ ಸಂದರ್ಭದಲ್ಲಿ ನೆನೆಸುತ್ತೇನೆ.

ಹಾಗೂ ಈ ಕೃತಿ ಬಿಡುಗಡೆಯಾಗಲು ಸಹಕರಿಸಿದ ಇನ್ನೂ ಅನೇಕ ಮಹನೀಯರನ್ನೆಲ್ಲರನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇನೆ.

ಈ ಪುಸ್ತಕವು ಬಹು ಸುಂದರವಾಗಿ ಅಚ್ಚಾಗಲು ಕಾರಣ ಕರ್ತರಾದ ಡಿ.ಟಿ.ಪಿ. ಸಪ್ತಗಿರಿ ಗ್ರಾಫಿಕ್ಸ್‌ನ ಸಹೃದಯರಾದ ಶ್ರೀ ರಾಮಕೃಷ್ಣರವರನ್ನು, ಶ್ರೀ ಶ್ರೀನಿವಾಸರವರನ್ನು ಹಾಗೂ ಕುಮಾರಿಯರಾದ ಶೋಭ ಮತ್ತು ವಿನುತ ಇವರನ್ನು ಸ್ಮರಿಸುತ್ತೇನೆ.

ಅದೇ ರೀತಿಯಾಗಿ ಈ ಪುಸ್ತಕವನ್ನು ಬಲು ಅಂದಚೆಂದವಾಗಿ ರೂಪಿಸಿಕೊಟ್ಟ ಸರಳ ಹೃದಯಸಂಪನ್ನರಾದ ಲಹರಿ ಪ್ರಿಂಟರ್ಸ್ ಮಾಲೀಕರಾದ ಶ್ರೀ ಆರ್. ಸತ್ಯನಾರಯಣ ಶ್ರೇಷ್ಠಿರವರನ್ನೂ ನೆನೆಸುತ್ತೇನೆ

ಅದೇ ರೀತಿಯಾಗಿ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಎಲ್ಲಾ ರೀತಿಯ ನೆರವು ಸಹಕಾರ ನೀಡಿದ ಎಲ್ಲರನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇನೆ.

ನನ್ನ ಕೋರಿಕೆಗೆ ಓಗೊಟ್ಟು ಈ ಗ್ರಂಥಕ್ಕೆ ಮುನ್ನುಡಿ. ನಾಲ್ಕು ಮಾತು. ಶುಭ ಹಾರೈಕೆಯನ್ನು ಬರೆದುಕೊಟ್ಟ ಕರ್ನಾಟಕ ರಾಜ್ಯದ ಡಿ.ಜಿ.ಪಿ. ಮತ್ತು ಐ.ಜಿ.ಪಿ. ಅವರಾದ ಸನ್ಮಾನ್ಯ ಶ್ರೀ ಎಸ್.ಎನ್.ಎಸ್. ಮೂರ್ತಿಯವರಿಗೂ ಹಾಗೂ ಕರ್ನಾಟಕ ರಾಜ್ಯದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮುಖ್ಯ ಕಾರ್ಯದರ್ಶಿಗಳಾದ ಡಾ|| ಟಿ.ಎಸ್. ರಾಮಾನುಜಂ ಐ.ಪಿ.ಎಸ್.,ರವರನ್ನು ಮತ್ತು ಎನ್.ಎ. ಚಿದಂಬರನ್ನು ಸ್ಮರಿಸುತ್ತೇನೆ.

ಈ ಐತಿಹಾಸಿಕ ಕಾದಂಬರಿಗೆ ನನ್ನ ಕೋರಿಕೆಯನ್ನು ಮನ್ನಿಸಿ ನಾಲ್ಕು ಮಾತುಗಳನ್ನು ಬರೆದುಕೊಟ್ಟ ಕರ್ನಾಟಕ ರತ್ನ ಡಾ|| ರಾಜ್‌ಕುಮಾರ್‌ರವರನ್ನು ಸಹ ನಾನು ಅತ್ಯಂತವಾಗಿ ಸ್ಮರಿಸುತ್ತೇನೆ.

ಮಾಧವಸಿಂಹ

# ವಿಷಯಾನುಕ್ರಮಣಿಕೆ

# ವಿಷ್ಣುಲೋಕ

ಶಾರಸದಳ ನಯನ ||ಪ|| ಪಾಲಯ ಶ್ರೀಹರಿ ||ಪ||
ನಾರದಾದಿ ಮುನಿಮಾನಸಮಂದಿರ
ವರವೈಕುಂಠ ಪುರಾಧಿವಾಸ ಜಯ ||ಅ|| ||ಪ||
ಮಾರಜನಕ ಪರಿಪೂತಚರಿತ|
ಪುರವೈರಿವಿರಿಂಚ ಸುರಾರ್ಚಿತಪಾದ||
ಹಾರಮುಕುಟ ಕೇಯೂರಶೋಭಿತಾಕಾರ ವರದ ಕಮಲೇಶ ಸದಾ ಅವ
ಧೀರಮಾರಮಣ ಲೋಕಪಾಲಕ ಪರೇಶ ನಿರಂಜನ ಮಂಗಳಕಾರಕ || ಚ ||

ಪರಬ್ರಹ್ಮ ಸ್ವರೂಪನೂ, ದಯಾಮಯನೂ, ಮಹಾಜ್ಞಾನಿಯೂ, ಸದಾ ಲೋಕಕಲ್ಯಾಣಾಪೇಕ್ಷಿತನೂ ಆದ ನಾರದ ಮಹರ್ಷಿಯು ಎಂದಿನಂತೆ ವೈಕುಂಠಾಧಿಪತಿಯಾದ ಶ್ರೀಮನ್ನಾರಾಯಣನನ್ನು ಅನನ್ಯ ಭಕ್ತಿಭಾವದಿಂದ ತಮ್ಮ ಮಹತೀ ವೀಣೆಯ ಮಧುರ ನಾದದಿಂದ ಸುಶ್ರಾವ್ಯವಾಗಿ ಹಾಡುತ್ತಾ ಪರಮಾತ್ಮನ ಅನಂತ ಲೀಲಾವಿನೋದವನ್ನು ಕೊಂಡಾಡುತ್ತಾ ವೈಕುಂಠಲೋಕಕ್ಕೆ ಆಗಮಿಸಿದನು.

ಸ್ವಯಂ ಪ್ರಕಾಶಿತನೂ . ಬ್ರಹ್ಮಾಂಡನಾಯಕನೂ ಆದ ಶ್ರೀಹರಿಯವಾಸಸ್ಥಾನವಾದ ಆ ಅದ್ಭುತ ಸಿರಿಸೊಬಗಿನ ವೈಕುಂಠ ಲೋಕವು ವರ್ಣಿಸಲಸದಳವೆಂಬಂತೆ ಅತ್ಯಂತ ಶೋಭಾಯಮಾನವಾಗಿತ್ತು. ಅದರ ಹಿರಿಮೆಯನ್ನು ಹೆಚ್ಚಿಸುವಂತೆ ಮಹಾ ತೇಜೋಮಯವಾದ - ಸದಾಕಾಲವೂ ಸುಪ್ರಕಾಶಮಾನವಾಗಿ ಪ್ರಕಾಶಿಸುತ್ತಿರುವ ಅಂಬರದಲ್ಲಿ ನಿರಾಲಂಬವಾಗಿ ಬ್ರಹ್ಮಾಂಡೀಕರಿಸಿರುವ ಆ ವೈಕುಂಠಲೋಕವು ಪುಟಕ್ಕೆ ಹಾಕಿದ ಚಿನ್ನದಂತೆ ಥಳಥಳಿಸುತ್ತಿತ್ತು. ಮುತ್ತು ರತ್ನ ವಜ್ರ ವೈಢೂರ್ಯಗಳಿಂದ ಕೂಡಿದ ನವರತ್ನ ಖಚಿತವಾದ ಬೃಹತ್ ಬಂಗಾರದ ಕಲಾತ್ಮಕಗಳಿಂದಲೂ ಕಾಂತಿಯುಕ್ತವಾದ ಚಿನ್ನದ ಪ್ರಭಾವಳಿಗಳಿಂದಲೂ - ಶಿಖರಪ್ರಾಯವಾದ ಚಿನ್ನದ ಗೋಪುರಗಳಿಂದಲೂ ಕೂಡಿದ ವೈಕುಂಠ ಲೋಕದ ಆರು ಮಹಾದ್ವಾರಗಳನ್ನು ಸ್ವಯಂ ಪ್ರಭೆಯಿಂದ ದಾಟಿಕೊಂಡು ಏಳನೇ ಮಹಾದ್ವಾರಕ್ಕೆ ಬಂದರು ನಾರದರು.

ಆ ವೈಕುಂಠ ಲೋಕದ ಏಳನೇ ಮಹಾದ್ವಾರವೂ ರತ್ನಖಚಿತ ಬಂಗಾರದ ಕಂಬ - ಪ್ರಭಾವಳಿ ಗೋಪುರ ಇವುಗಳ ವೈಭವ ಮಾತ್ರವೇ ಅಲ್ಲದೆ - ವಾಯುದೇವನು ಪರಮಾತ್ಮನಿಗೆ ನಿರಂತರ ಸೇವೆ ಸಲ್ಲಿಸುತ್ತಿರುವನೋ ಎಂಬಂತೆ ಭಾಸವಾಗುವಂತಹ ವಾತಾವರಣ ಸೃಷ್ಟಿಯಾಗಿತ್ತು. ಪುಷ್ಪವನಗಳಲ್ಲಿ ಬೆಳೆದಿರುವ ಜಾಜಿ, ಚಂಪಕ ಮಂದಾರ, ಕಮಲಕಲ್ಹಾರ ಮುಂತಾದ ಪರಿಮಳ ಪುಷ್ಪಗಳ ಕಂಪನ್ನು ಬೆರೆಸಿ ಮಂದಾನಿಲವು ತಂಪಾಗಿ ಬೀಸುತ್ತ ಆಹ್ಲಾದವನ್ನು ಉಂಟುಮಾಡುತ್ತಿತ್ತು. ಈ ಎಲ್ಲ ಪುಷ್ಪಗಳ ಕಂಪು ವೈಕುಂಠದ ಸುತ್ತಲು ಆವರಿಸಿತ್ತು. ಈ ಆಘ್ರಾಣಿಸುವ ಪರಿಮಳದಿಂದ ಅತೀ ಮನೋಹರವಾದ ಹಾಗೂ ದಿವ್ಯತೆಯ ನವೀನ ಲೋಕವನ್ನೇ ಕಂಡಂತಾಯಿತು

ನಾರದರಿಗೆ.

ಅಂತಹ ಪರಮ ಅದ್ಭುತ ಲೋಕವಾದ ಶ್ರೀ ವೈಕುಂಠದ ಏಳನೆ ಬಾಗಿಲಿಗೆ ಬರುತ್ತಿದ್ದ ನಾರದರನ್ನು ದೂರದಿಂದಲೇ ಗಮನಿಸಿದ ಪೂರ್ವದ್ವಾರದ ಪ್ರಮುಖ ದ್ವಾರಪಾಲಕರಾದ ಜಯವಿಜಯರು ಮಹದಾನಂದದಿಂದ ಪುಳಕಿತರಾದರು. ಅಷ್ಟೇ ಭಕ್ತಿಭಾವದಿಂದ ಅವರ ಆಗಮನವನ್ನ ಎದುರು ನೋಡುತ್ತಿದ್ದರು.

ಸದಾ ಪರಮಾತ್ಮನ ಸೇವೆಯಲ್ಲಿಯೇ ನಿರತರಾದ, ಬಹು ಸುಂದರ ರೂಪ ಉಳ್ಳವರಾದ ಚತುರ್ಭುಜ ಸಂಪನ್ನರಾದ ವೈಕುಂಠದ ಪೂರ್ವ ಮಹಾದ್ವಾರದ ದ್ವಾರಪಾಲಕರಾದ ಜಯವಿಜಯರನ್ನು ಕಂಡು ನಾರದರೂ ಸಹ ಆನಂದ ಪರವಶರಾದರು.

ನಾರದ ಮಹರ್ಷಿಗಳು ಮಹಾಜ್ಞಾನಿಯೇ ಆಗಿದ್ದರೂ ಸಹ ಕೆಲವು ವೇಳೆಯಲ್ಲಿ ವಿನೋದಪ್ರಿಯರೂ ಆಗಿ ದೇವಲೋಕದ ಎಲ್ಲ ದೇವತೆಗಳ ಮನಸ್ಸನ್ನು ಸೂರೆಗೊಳ್ಳುತ್ತಿದ್ದರು. ಅದಕ್ಕಾಗಿಯೇ ನಾರದರೆಂದರೆ ತ್ರಿಮೂರ್ತಿಗಳಾದಿಯಾಗಿ ಸಮಸ್ತ ದೇವಾನುದೇವತೆಗಳು ಸಹ ವಿಶೇಷ ಸಂತೋಷದಿಂದ ಅವರನ್ನು ಬರಮಾಡಿಕೊಳ್ಳುತ್ತಿದ್ದರು.

ನಾರದರ ಸ್ವಭಾವವನ್ನರಿತ ಜಯ ವಿಜಯರು ಸಹ ಅಂದು ನಾರದರೊಡನೆ ಏನಾದರೊಂದು ರೀತಿಯ ವಿನೋದದಿಂದ ಕೆಲವು ಕಾಲಕಳೆಯುವ ಅಭಿಲಾಶೆ ಉಂಟಾಯಿತು. ಆಗ ಜಯನು ವಿಜಯನನ್ನು ಕುರಿತು,

"ವಿಜಯ"

"ಏನು ಜಯ"

"ಅದೊ ನಾರದರು ಇತ್ತ ಬರುತ್ತಿದ್ದಾರೆ. ಎಂದಿಗಿಂತ ಇಂದು ಬಹಳ ಉತ್ಸಾಹದಿಂದಲೆ ಇದ್ದಾರೆ. ಬಹುಶಹ ಈದಿನ ನಾರದರು ಯಾವುದೋ ಮಹತ್ತರವಾದ ಹೊಸ ವಿಷಯವನ್ನೆ ಮನದಲ್ಲಿ ಗುಣಾಕಾರ ಹಾಕುತ್ತಾ ಜಗದೊಡೆಯನಾದ ನಮ್ಮ ಶ್ರೀಹರಿಯನ್ನು ವಿಶೇಷವಾಗಿ ಗುಣಗಾನ ಮಾಡುತ್ತಾ ಬರುತ್ತಿರುವ ಹಾಗೆ ತೋರುತ್ತಿದೆಯಲ್ಲ"

"ಹೌದು...... ನನಗೂ ಸಹ ಅದೇ ರೀತಿ ಕಾಣುತ್ತಿದೆ" ಎಂದು ಜಯನ ಮಾತಿಗೆ ಪ್ರತಿಯಾಗಿ ಧ್ವನಿ ಗೂಡಿಸಿ ನುಡಿದ ವಿಜಯ.

"ಹಾಗಾದರೆ ಇದೆ ಸುಸಮಯ ನಮಗೆ, ನಾವೀಗ ಸುಮ್ಮನಿರಬಾರದು. ನಾರದರಿಗೆ ನಮ್ಮ ಪ್ರಭಾವವನ್ನು ತೋರಿಸೋಣ. ವಿನೋದಕ್ಕಾಗಿಯಾದರೂ ನಾರದರನ್ನು ಇಲ್ಲಿಯೆ ತಡೆ ಹಾಕೋಣ, ಪರಮಾತ್ಮನ ದರ್ಶನಕ್ಕೆ ಈ ಸಮಯ

ಸರಿಯಾದ ಸಮಯವಲ್ಲ ಎಂದು ಏನಾದರೂ ಒಂದು ನೆಪ ಹೂಡಿ ಅವರನ್ನು ಇಲ್ಲಿಯೇ ಇರಿಸಿಕೊಳ್ಳೋಣ. ಕೊಂಚ ಹೊತ್ತು ಅವರೊಡನೆ ವಿನೋದವಾಗಿ ಹರಟೆ ಹೊಡೆಯೋಣ'' ಎಂದು ನುಡಿದ ವಿಜಯ.

''ಸಧ್ಯ ... ಎಲ್ಲಿಯಾದರೂ ಹಾಗೆ ಮಾಡಿಯಾ ಮಹಾರಾಯ. ಈ ಹಿಂದೆ ನಾವಿಬ್ಬರೂ ಸೇರಿ ನಮ್ಮ ನಮ್ಮಲ್ಲಿ ಉಂಟಾದ ಗರ್ವದಿಂದ ಮಹಾತಪೋ ಬ್ರಹ್ಮರಾದ ಸನಕಾದಿ ಮಹರ್ಷಿಗಳನ್ನು ತಡೆದು ಅವರುಗಳ ಉಗ್ರಕೋಪಕ್ಕೆ ಗುರಿಯಾದೆವು. ಮಹಾಮುನಿಗಳು ಕೊಟ್ಟ ಶಾಪ ಪ್ರಾಯಶ್ಚಿತ್ತಕ್ಕಾಗಿ ಆ ಶಾಪವಿಮೋಚನೆಗಾಗಿ ಒಂದಲ್ಲ ಎರಡಲ್ಲ ಮೂರು ಯುಗಗಳಲ್ಲಿ ಅದರಲ್ಲೂ ಪರಮಾತ್ಮನ ವಿರೋಧಿಗಳಾಗಿ ದೈತ್ಯರ ವಂಶದಲ್ಲಿ ಹುಟ್ಟಬೇಕಾಯಿತು. ಒಂದೊಂದು ಜನ್ಮದಲ್ಲೂ ಸಹ ನಾವು ಜಗದೊಡೆಯನಿಗೆ ಕಡು ವಿರೋಧಿಗಳಾಗಿ ಪಡಬಾರದ ಪಾಡನ್ನು ಅನುಭವಿಸಬೇಕಾಯಿತು. ಇನ್ನು ಮುಂದೆ ಪರಮಾತ್ಮನ ದರ್ಶನಕ್ಕೆ ಯಾರೇ ಬರಲಿ, ಯಾರನ್ನು ತಡೆಯುವ ಗೋಜಿಗೆ ಹೋಗಲೇ ಬಾರದು. ಅದರಲ್ಲೂ ತಪೋಮುನಿಗಳು, ಜ್ಞಾನಿ ಮಹಾ ಜ್ಞಾನಿಗಳ ವಿಷಯದಲ್ಲಂತೂ ಬಹಳ ಎಚ್ಚರಿಕೆಯಿಂದ ಇರಬೇಕು ವಿಜಯ'' ಎಂದು ಹಿಂದೆ ತಮ್ಮಿಬ್ಬರ ಪಾಲಿಗೆ ಒದಗಿ ಬಂದಿದ್ದ ವಿಪತ್ತನ್ನು ಜ್ಞಾಪಿಸಿಕೊಂಡು ಎಚ್ಚರಿಸಿ ನುಡಿದ ಜಯ.

''ಹೌದು ವಿಜಯ .... ನೀನು ಸಹ ಸಮಯ ಪ್ರಜ್ಞೆಯಿಂದಲೆ ನನ್ನನ್ನು ಎಚ್ಚರಿಸಿದೆ. ಮುಂದೆ ಸಂಭವಿಸಬಹುದಾದ ವಿಪತ್ತಿನಿಂದ ಪಾರು ಮಾಡಿದೆ'' ಎಂದು ಹೇಳಿದ ವಿಜಯನ ಮಾತಿಗೆ ಸಮ್ಮತಿಸಿದ ಜಯ.

ಆ ವೇಳೆಗೆ ನಾರದರು ಸಹ ಜಯ ವಿಜಯರ ಸಮೀಪಕ್ಕೆ ಬಂದರು.

ನಾರದರ ಆಗಮನದಿಂದ ಸಂತೋಷಗೊಂಡ ಜಯವಿಜಯರು ಅವರನ್ನು ಭಕ್ತಿಯಿಂದ ಪ್ರಣಾಮ ಮಾಡುತ್ತ ''ನಾರದ ಮುನೀಂದ್ರರಿಗೆ ಜಯವಾಗಲಿ ದಯಮಾಡಿಸಬೇಕು. ದಯಮಾಡಿಸಬೇಕು'' ಎಂದು ಅನನ್ಯ ಭಕ್ತಿಯಿಂದ ವಂದಿಸಿ ಬರಮಾಡಿಕೊಂಡರು ಜಯವಿಜಯರು.

ಆಗ ನಾರದರು ಸಂತೋಷದಿಂದ ಅವರನ್ನು ಹರಸುತ್ತಾ ''ಶುಭವಾಗಲಿ'' ಎಂದು ಹೇಳಿ ಮತ್ತೆ ''ನಾರಾಯಣ ನಾರಾಯಣ'' ಎನ್ನುತ್ತ ಜಯ ವಿಜಯರತ್ತ ಮಂದಹಾಸದ ಮಿಂಚಿನ ನೋಟ ಬೀರಿ ವೈಕುಂಠಲೋಕದ ದಕ್ಷಿಣ ಮಹಾದ್ವಾರದ ಕಡೆಗೆ ಪ್ರಯಾಣ ಬೆಳೆಸಿದರು.

ಆಗ ಜಯವಿಜಯರಿಗೆ ಪರಮಾಶ್ಚರ್ಯವಾಯಿತು. ಅಷ್ಟೇ ಅಲ್ಲದೆ, ಇಬ್ಬರಲ್ಲೂ ಒಂದು ರೀತಿಯ ಕಳವಳವೂ ಉಂಟಾಯಿತು. ಒಬ್ಬರ ಮುಖವನ್ನೊಬ್ಬರು ನೋಡಿಕೊಳ್ಳುತ್ತಾ ಅದ್ಯಾವುದೋ ಅವ್ಯಕ್ತ ಭೀತಿ ತುಂಬಿದ ದನಿಯಿಂದ ಜಯನು

ವಿಜಯನನ್ನು ಕುರಿತು,

"ವಿಜಯ.... ಏಕೆ ನಾರದರು ಪೂರ್ವ ದ್ವಾರದ ಮೂಲಕ ಒಳಪ್ರವೇಶ ಮಾಡದೆ ಹೊರಟುಹೋದರಲ್ಲ ?'

"ನನ್ನನ್ನೂ ಸಹ ಅದೇ ಪ್ರಶ್ನೆ ಕಾಡುತ್ತಿದೆ ಜಯ ... ನಾರದ ಮುನಿಗಳ ಇಂದಿನ ಮನೋಸಂಕಲ್ಪವಾದರೂ ಏನು ?' ಎಂದು.

"ಓ ಇದೀಗ ಅರ್ಥವಾಗುತ್ತಿದೆ ನನಗೆ ... ಎಷ್ಟೇ ಆಗಲಿ ... ನಾರದರು ಮಹಾಜ್ಞಾನಿಗಳು, ತ್ರಿಲೋಕ ಸಂಚಾರಿಗಳು .... ಸಮಸ್ತಲೋಕದ ಕ್ಷಣಕ್ಷಣಗಳ ಆಗುಹೋಗುಗಳನ್ನು ತಿಳಿಯುವಂಥವರು .... ಈಗ ಕೊಂಚ ಹೊತ್ತಿನ ಮುಂಚೆ ನಾವಿಬ್ಬರು ನಾರದರನ್ನು ತಡೆದು ನಿಲ್ಲಿಸುವ ವಿಚಾರ ಮಾಡಿಕೊಂಡಿರುವುದರ ಸುಳಿವು ಅವರಿಗೆ ತಿಳಿಯಿತೋ ಏನೋ.... ಈ ಜಯ ವಿಜಯರು ಇರುವ ಪೂರ್ವಮಹಾದ್ವಾರದ ಮೂಲಕ ಪರಮಾತ್ಮನ ದರ್ಶನಕ್ಕೆ ಹೋಗುವುದೇ ಬೇಡ ಎಂದು ನಮ್ಮಿಬ್ಬರನ್ನು ತಿರಸ್ಕರಿಸಿ ಹೊರಟು ಹೋಗಿರಬೇಕು ವಿಜಯ" ಎಂದು ದೀರ್ಘವಾದ ನಿಟ್ಟುಸಿರುಬಿಡುತ್ತಾ ತನ್ನ ಮನದೊಳಗಿದ್ದ ಅನುಮಾನಕ್ಕೆ ಪ್ರತಿಯಾಗಿ ನುಡಿದ ಜಯ.

"ಹಾಗಾದರೆ ಈಗ ಏನು ಮಾಡುವುದು ಜಯ"ಎಂದು ಜಯನನ್ನು ವಿಜಯನನ್ನು ಪ್ರಶ್ನಿಸಿದ.

"ಎಲ್ಲ ಆ ಶ್ರೀಹರಿ ಚಿತ್ತ ...... ಈ ಸಂದರ್ಭದಲ್ಲಿ ಪರಮಾತ್ಮನೆ ನಮ್ಮನ್ನು ರಕ್ಷಿಸಬೇಕು ಜಯ" ಎಂದನು ವಿಜಯ.

"ಮುನಿಗಳ ಕೋಪಕ್ಕೆ ತುತ್ತಾಗುವುದು ವಿಪತ್ತಿಗೆ ಆಹ್ವಾನಕೊಟ್ಟಂತಾಗುವುದಿಲ್ಲವೆ ವಿಜಯ ?'

"ಕಾದು ನೋಡೋಣ, ಪಾಲಿಗೆ ಬಂದದ್ದನ್ನು ಅನುಭವಿಸಲೇಬೇಕು" ಎಂದು ನುಡಿದ ಜಯ.

ಇತ್ತ ನಾರದರು ಶ್ರೀ ಲಕ್ಷ್ಮೀಕಾಂತನನ್ನು ಕೊಂಡಾಡುತ್ತಾ ದಕ್ಷಿಣ ಮಹಾದ್ವಾರಕ್ಕೆ ಆಗಮಿಸಿದರು.

ನಾರದರನ್ನು ಕಂಡ ದಕ್ಷಿಣ ಮಹಾದ್ವಾರದ ದ್ವಾರಪಾಲಕರಾದ ನಂದ - ಸುನಂದರಿಗೆ ಎಂದಿಲ್ಲದ ರೀತಿಯಲ್ಲಿ ಪರಮಾಶ್ಚರ್ಯವಾಯಿತು. ಅಷ್ಟೇ ಅಲ್ಲ. ಕೆಲಕ್ಷಣ ದಿಘ್ಮೂಢರಾಗಿ ಏನೊಂದು ಅರಿಯದಂತೆ ನಿಂತಲ್ಲೆ ನಿಂತು ಬಿಟ್ಟರು. ಬಿಟ್ಟ ಕಣ್ಣುಗಳನ್ನು ಬಿಟ್ಟಂತೆಯೇ ಆಶ್ಚರ್ಯವನ್ನು ಸೂಸುತ್ತಾ ನಾರದರತ್ತಲೇ ಮುಖ ಮಾಡಿ ಮೈ ಮರೆತರು. ಇವರ ವರ್ತನೆಗೆ ನಾರದರೂ ಮುಗುಳ್ನಕ್ಕು "ನಾರಾಯಣ ನಾರಾಯಣ"

ಎಂದರು.

ಆಗ ನಂದ - ಸುನಂದರು ವಾಸ್ತವಲೋಕಕ್ಕೆ ಬಂದು ನಾರದರನ್ನು ಬಹು ಭಕ್ತಿಭಾವದಿಂದ ವಂದಿಸಿ "ಧನ್ಯೋಸ್ಮಿ ಧನ್ಯೋಸ್ಮಿ ನಾರದ ಮುನಿಶ್ರೇಷ್ಠರು ದಯಮಾಡಿಸಬೇಕು ದಯಮಾಡಿಸಬೇಕು" ಎಂದು ಇಬ್ಬರೂ ಒಕ್ಕೊರಳಿನಿಂದ ನುಡಿದು ಭಕ್ತಿಯಿಂದ ನಮಿಸಿ ಸ್ವಾಗತಿಸಿದರು. ಆದರೆ ನಾರದರ ಮನದಲ್ಲಿ ಏನು ಇದೆ ಎಂಬುದನ್ನು ಅರಿಯುವರು ಯಾರು ? ಎಂದಿನಂತೆ ನಂದ ಸುನಂದರ ಕಡೆ ನಗೆ ನೋಟ ಬೀರಿ ಪಶ್ಚಿಮದ ಕಡೆಗೆ ಪ್ರಯಾಣ ಬೆಳೆಸಿದರು. ಇದರಿಂದ ಆಗ ನಂದ - ಸುನಂದರಿಗೂ ಸಹ ಏಕೋ ಮನಸ್ಸಿಗೆ ಕೊಂಚ ಕಳವಳವೇ ಆಯ್ತು.

ನಂದನು ಸುನಂದನನ್ನು ಕುರಿತು,

"ಸುನಂದ...."

"ನಂದ..."

"ನಾರದ ಮುನೀಂದ್ರರೇಕೆ ಹಾಗೆ ಹೊರಟುಹೋದರಲ್ಲ" ಎಂದು ನಂದರು ಸುನಂದರನ್ನು ಪ್ರಶ್ನಿಸಿದರು.

"ಮುನಿಗಳ ಮನಸ್ಸು ಆ ಜನಾರ್ಧನನಿಗೇ ಅರ್ಥವಾಗಬೇಕು" ಎಂದು ಸಂದೇಹ ವ್ಯಕ್ತಪಡಿಸಿದರು ಸುನಂದರು.

"ನಿಜ ನಿಜ, ಆದರೂ....." ಅನುಮಾನದಿಂದಲೇ ಕೇಳಿದರು ನಂದರು.

"ಆದರೇನು..... ಸುನಂದ"

"ಇಂದು ನಾರದ ಮುನೀಂದ್ರರ ದರ್ಶನಭಾಗ್ಯ ಅಷ್ಟೇ ನಮ್ಮ ಭಾಗ್ಯ" ತೃಪ್ತಿ ತುಂಬಿದ ಸಂತೋಷದಿಂಧ ನುಡಿದರು ಸುನಂದರು.

ಹೀಗೆ ಒಬ್ಬರಿಗೊಬ್ಬರು ಮಾತನಾಡಿಕೊಂಡು, ಅಷ್ಟರಲ್ಲೆ ತೃಪ್ತರಾಗಿ ಪರಮಾತ್ಮನ ಸೇವೆಯಲ್ಲಿ ನಿರತರಾದರು.

ವೈಕುಂಠ ಲೋಕದ ಪಶ್ಚಿಮ ಮಹಾದ್ವಾರದತ್ತ ಬರುತ್ತಿದ್ದ ನಾರದರನ್ನು ತುಸು ದೂರದಲ್ಲಿಯೇ ಗಮನಿಸಿದ ಆ ಮಹಾದ್ವಾರದ ದ್ವಾರಪಾಲಕರಾದ .... ಬಲ - ಪ್ರಬಲರು ಅಮಿತ ಸಂತೋಷಭರಿತರಾದರು. ಆಗ ಬಲನು ಪ್ರಬಲನನ್ನು ಕುರಿತು "ಪ್ರಬಲ ಇದೇನಿದು.... ಇಂದು ನಾರದ ಮುನೀಂದ್ರರು ಇತ್ತ ಬರುತ್ತಿರುವರಲ್ಲ" ಎಂದನು ಕಾತರದ ಧ್ವನಿಯಿಂದ ಪ್ರಶ್ನಿಸಿದ.

"ಹೌದು .... ನಾರದ ಮುನಿಗಳು ಬರುತ್ತಿರುವುದು ನನಗೂ ಸಹ

ಪರಮಾಶ್ಚರ್ಯವಾಗಿದೆ .... ಬಲ" ಎಂದು ಸಂತೋಷ ತುಂಬಿಕೊಂಡೇ ಮಾತನಾಡಿದ ಪ್ರಬಲ.

"ಎಷ್ಟೇ ಆಗಲಿ ..... ಮುನಿಗಳ ದರ್ಶನ ... ಜ್ಞಾನಿಗಳ ದರ್ಶನ ಬದುಕಿನ ಸೌಭಾಗ್ಯವಲ್ಲವೆ ?' ಎಂದು ತನ್ನ ಸಂತೋಷವನ್ನು ಪ್ರಬಲನೊಡನೆ ಹಂಚಿಕೊಳ್ಳುತ್ತಾ ನುಡಿದ ಬಲ.

ಆ ವೇಳೆಗಾಗಲೆ ನಾರದರು ಅವರಿಬ್ಬರ ಸಮೀಪಕ್ಕೆ ಬಂದಿದ್ದರು.

ತಮ್ಮ ಸನಿಹಕ್ಕೆ ಆಗಮಿಸಿದ ನಾರದರಿಗೆ ತುಂಬಿದ ಭಕ್ತಿ ಸಂತೋಷದಿಂದ ನಮಿಸುತ್ತ,

"ಜಯೋಸ್ತು ನಾರದ ಮುನೀಂದ್ರ ವಿಜಯೋಸ್ತು ... ಇಂದು ತಮ್ಮ ದರ್ಶನ ಭಾಗ್ಯದಿಂದ ನಾವುಗಳು ಪುನೀತರಾದೆವು" ಎಂದು ಭಕ್ತಿಭಾವದಿಂದ ನುಡಿದರು.

ನಾರದರು ಅವರ ಆಹ್ವಾನಕ್ಕೆ ಪ್ರತಿಯಾಗಿ .....

"ನಾರಾಯಣ ನಾರಾಯಣ" ಎಂದಷ್ಟೇ ನುಡಿದು ಉತ್ತರ ದಿಕ್ಕಿಗೆ ಹೊರಟು ಹೋದರು.

ವೈಕುಂಠಾಧಿಪತಿಯನ್ನು ಪರಮ ಭಕ್ತಿಯಿಂದ ಕೊಂಡಾಡುತ್ತಾ ಸಾಗುತ್ತಿದ್ದ ನಾರದರು ಪ್ರದಕ್ಷಿಣಾ ರೂಪವಾಗಿ ಉತ್ತರ ಮಹಾದ್ವಾರದತ್ತ ಹೆಜ್ಜೆ ಹಾಕಿದರು.

ನಾರದರ ಗಾಯನದಿಂದ ಆಕರ್ಷಿತರಾದ ವೈಕುಂಠದ ಉತ್ತರ ಮಹಾ ದ್ವಾರದ ದ್ವಾರಪಾಲಕರಾದ ಕುಮುದ ಕುಮುದಾಕ್ಷರು ನಾರದರ ದರ್ಶನ ಭಾಗ್ಯದಿಂದ ಸಂತೋಷ ಪುಳಕಿತರಾದರು.

ತಮ್ಮ ಸಮೀಪಕ್ಕೆ ಆಗಮಿಸಿದ ನಾರದರನ್ನು ಭಕ್ತಿಯಿಂದ ನಮಸ್ಕರಿಸಿ ಆಹ್ವಾನಿಸುತ್ತ "ಬರಬೇಕು ನಾರದ ಮಹರ್ಷಿಗಳು ಬರಬೇಕು" ಎಂದು ನುಡಿದರು.

"ನಾರಾಯಣ ನಾರಾಯಣ" ಎಂದಷ್ಟೇ ಕುಮುದ - ಕುಮುದಾಕ್ಷರತ್ತ ನಗೆ ಮಿಂಚಿನ ನೋಟ ಬೀರಿ ಅಲ್ಲಿಯೂ ಸಹ ನಿಲ್ಲದೆ .... ಪರಮಾತ್ಮನನ್ನು ಕೊಂಡಾಡುತ್ತಾ ಹೊರಟು ಹೋದರು.

ತ್ರಿಲೋಕ ಸಂಚಾರಿಯಾದ ನಾರದರಿಗೆ ಅಡ್ಡಿ ಮಾಡುವವರು ಯಾರು ?

ನಾರದ ಮಹರ್ಷಿಗಳ ದರ್ಶನ ಭಾಗ್ಯದಿಂದ ತೃಪ್ತರಾಗಿ ಮತ್ತೆ ತಮ್ಮ ಕರ್ತವ್ಯದಲ್ಲಿ ತಲ್ಲೀನರಾದರು ಕುಮುದ-ಕುಮುದಾಕ್ಷರು.

ಅಂದು ವೈಕುಂಠವನ್ನು ಪ್ರದಕ್ಷಿಣೆ ಹಾಕಿದ ನಾರದರು ಪುನಹ

ಜಯವಿಜಯರಿರುವ ಪೂರ್ವದ್ವಾರಕ್ಕೆ ಆಗಮಿಸಿದರು.

ವೈಕುಂಠದ ಪೂರ್ವದ್ವಾರದ ಪ್ರಮುಖ ದ್ವಾರಪಾಲಕರಾದ ಜಯ-ವಿಜಯರಿಗೆ ನಾರದರು ಮತ್ತೆ ತಮ್ಮತ್ತ ಬರುತ್ತಿರುವುದನ್ನು ಗಮನಿಸಿ ಮಹದಾನಂದ ಭರಿತರಾದರು.ಸಮೀಪಕ್ಕೆ ಬಂದ ನಾರದರನ್ನು ಭಕ್ತಿತುಂಬಿದ ಹೃದಯದಿಂದ ಆಹ್ವಾನಿಸುತ್ತಾ "ಸ್ವಾಗತಂ ಸುಸ್ವಾಗತಂ" ಎಂದು ಶಿರಬಾಗಿ ವಂದಿಸಿದರು. ಆಗ ಅವರಿಬ್ಬರ ಕಣ್ಣುಗಳಲ್ಲೂ ಆನಂದಬಾಷ್ಪ ಸುರಿಯುತ್ತಿತ್ತು.

ಅದನ್ನು ಕಂಡ ನಾರದರು "ಇದೇನಿದು ನಿಮ್ಮ ಕಣ್ಣುಗಳಲ್ಲಿ ಕಣ್ಣೀರು.....?' ವಿನೋದವಾಗಿಯೇ ನುಡಿದರು ಎಲ್ಲವನ್ನು ಅರಿತ ಮಹಾಜ್ಞಾನಿಗಳಾದ ನಾರದರು.

"ಇದು ಆನಂದದ ಕಣ್ಣೀರು ಮುನೀಂದ್ರರೆ, ಮತ್ತೆ ತಮ್ಮ ದರ್ಶನಭಾಗ್ಯ ಉಂಟಾಯಿತಲ್ಲ ಎಂದು ಮಹದಾನಂದ ಪುಳಕಿತರಾಗಿದ್ದೇವೆ. ಇದು ನಾವೇ ಧನ್ಯರು" ಎಂದು ನುಡಿದು, ಭಕ್ತಿಯಿಂದ ನಾರದರಿಗೆ ಪಾದಮುಟ್ಟಿ ನಮಸ್ಕಾರ ಮಾಡಿದರು.

"ವಿಜಯೋಸ್ತು ವಿಜಯೋಸ್ತು"

"ನಾರಾಯಣ ನಾರಾಯಣ" ಎಂದು ಮಂದಹಾಸದ ವಿನೋದದ ನಗೆ ಭೀರಿ ನುಡಿದರು ನಾರದರು.

ಆಗ ಜಯ ವಿಜಯರು ಸಮೀಪಕ್ಕೆ ಬಂದು ಏನೋ ತಮ್ಮಲ್ಲಿದ್ದ ಅನುಮಾನಕ್ಕೆ ತಕ್ಕ ಪರಿಹಾರ ಯಾಚಿಸುವ ದನಿಯಲ್ಲಿ......

"ಸ್ವಾಮಿ, ಆದರೆ....." ಎಂದಷ್ಟೆ ನುಡಿದು ಇಬ್ಬರು ನಿಂತು ಬಿಟ್ಟರು.

"ಆದರೇನು ಜಯವಿಜಯರೇ......? ಓಹೋ ಅರ್ಥವಾಯಿತು, ಅರ್ಥವಾಯಿತು. ಇಂದು ನಾನು ತಡವಾಗಿ ಬಂದಿದ್ದೇನೆ. ಪರಮಾತ್ಮನ ದರ್ಶನಕ್ಕೆ ಈಗ ಅವಕಾಶವಿಲ್ಲ ಅಂತ ಹೇಳಲು ಹೊರಟಿರುವ ಹಾಗೆ ಕಾಣುತ್ತಿದೆ......" ಎಂದು ನಾರದರು ವಿನೋದದಿಂದಲೇ ಕೇಳಿದರು.

"ಶಾಂತಂ ಪಾಪಂ ಶಾಂತಂ ಪಾಪಂ...... ಆ ರೀತಿ ಏನೂ ಇಲ್ಲ ಮಹಾ ಜ್ಞಾನಿಗಳಾದ, ಪರಮಾತ್ಮನಿಗೆ ತೀರ ಸಮೀಪದವರೆ ಆದ ತಮ್ಮನ್ನು ತಡೆಯಲು ನಾವು ಯಾರು, ಆದರೆ......" ಎಂದು ಜಯ ಮತ್ತೆ ತನ್ನ ಮಾತನ್ನು ಅಷ್ಟಕ್ಕೆ ನಿಲ್ಲಿಸಿದ ಜಯ.

"ಅದೇನು ನಿಮ್ಮಂತರಂಗ ಹೇಳಬಾರದೆ. ಅದೇಕೆ ಇಂದು ಅಷ್ಟೊಂದು ಸಂಕೋಚ ನನ್ನಲ್ಲಿ" ಎಂದು ನಾರದರು ಪ್ರಶ್ನಿಸಿದರು.

"ಹಾಗೇನಿಲ್ಲ ಹಾಗೇನಿಲ್ಲ"

"ನೋಡಿದಿರಾ, ನೋಡಿದಿರಾ...... ಪುನಹ ಅದ್ಯಾವುದೋ ವಿಷಯವನ್ನು

ಬಚ್ಚಿಟ್ಟುಕೊಂಡೆ ಬಿಂಕ ಪಡುತ್ತಿದ್ದೀರಲ್ಲ...... ಹೇಳಿ ನಿಮ್ಮ ಆತಂಕ ಏನು ಹೇಳಿ'' ಒತ್ತಾಯಿಸಿ ಕೇಳಿದರು ನಾರದರು.

''ಹಾಗೇನಿಲ್ಲ ನಾರದ ಮುನೀಂದ್ರರೆ, ಅಪರೋಕ್ಷ ಜ್ಞಾನಿಗಳಾದ ನಿಮ್ಮಲ್ಲೇನು ಮುಚ್ಚುಮರೆ..... ಪ್ರತಿಬಾರಿಯೂ ತಾವು ನೇರವಾಗಿ ಪರಮಾತ್ಮನ ದರ್ಶನಕ್ಕೆ ಹೋಗುತ್ತಿದ್ದವರು ಇಂದೇಕೋ ತಮ್ಮ ಚಿತ್ತ ಎತ್ತಲೋ ಸಾಗಿ ಬಿಟ್ಟಿತಲ್ಲ......? ನಮ್ಮಿಂದ ತಮಗೆ ಏನಾದರೂ ಅಪಚಾರವಾಯಿತೆ. ಇದರಿಂದ ನಮ್ಮ ಮನಸ್ಸು ಬಹು ಭಾದೆಯಿಂದ ಪರಿತಪಿಸುತ್ತಿದೆ ಮಹಾತ್ಮರೆ.......''

''ಓ..... ಇಷ್ಟೇನಾ ನಿಮ್ಮ ಮನದ ಸಂದೇಹ? ಇತ್ತೀಚೆಗೆ ನೀವುಗಳು ಭೂಲೋಕಕ್ಕೆ ಹೋಗಿ ಅಲ್ಲಿ ಮೂರು ಜನ್ಮಗಳು ಕಳೆದು ಬಂದ ನಿಮಗೆ ಭೂಲೋಕದ ಮಾನವರಂತೆ ಅನುಮಾನಗಳು ನಿಮ್ಮನ್ನು ಕಾಡುತ್ತಿದೆ. ಈ ಜೀವಲೋಕದಲ್ಲಿ ಅದರಲ್ಲೂ ಸಮಸ್ತಲೋಕಕ್ಕೂ ಒಡೆಯನಾದ ಪರಮಾತ್ಮನ ಸನ್ನಿಧಿಯಲ್ಲಿ ಅನುಮಾನ - ಆತಂಕಗಳಿಗೆ ಆಸ್ಪದವೇ ಇಲ್ಲ. ಇಂದೇಕೊ ನನಗೆ ಜಯವಿಜಯರನ್ನು ಕಂಡು ಸಂತೋಷ ಪಡುವಂತೆ, ದಕ್ಷಿಣ ಮಹಾದ್ವಾರದ ನಂದ ಸುನಂದರನ್ನು ಪಶ್ಚಿಮ ಮಹಾದ್ವಾರದ ಬಲ ಪ್ರಬಲರನ್ನು, ಉತ್ತರ ಮಹದ್ವಾರದ ಕುಮುದ - ಕುಮುದಾಕ್ಷರನ್ನು ಶ್ರೀ ಹರಿ ಚಿತ್ತದಂತೆ ಕಾಣುವ ಬಯಕೆ ನನ್ನ ಹೃದಯದಲ್ಲಿ ಮೂಡಿತು. ಅದರಂತೆ ನಾನು ಅವರೆಲ್ಲರನ್ನು ಕಂಡು ಸಂತೋಷ ಚಿತ್ತನಾಗಿ ಇಲ್ಲಿಗೆ ಬಂದಿದ್ದೇನೆ...... ಇನ್ನು ನಾನು ಪರಮಾತ್ಮನ ದರ್ಶನಕ್ಕೆ ಹೋಗಬಹುದೇ.......'' ಎಂದು ಕೇಳಿದರು ನಾರದರು.

''ಅದಕ್ಕೆ ನಮ್ಮಿಂದ ಯಾವ ಅಡ್ಡಿಯೂ ಇಲ್ಲವಲ್ಲ......., ಎಷ್ಟೇ ಆಗಲಿ ತಾವು ಅನವರತವೂ ಪರಮಾತ್ಮನನ್ನು ಪೂಜಿಸಿ, ಸ್ತುತಿಸಿ ಕೊಂಡಾಡುವವರು. ಆ ದಯಾಮಯನಿಗೆ ತೀರ ಸಮೀಪರಾದವರು'' ಎಂದರು ಜಯವಿಜಯರು.

''ನಾರಾಯಣ, ನಾರಾಯಣ.... ಆ ಭಾಗ್ಯ ಜಗನ್ಮಾತೆಯಾದ ತ್ರಿಲೋಕ ಪೂಜ್ಯಳಾದ ಮಹಾಲಕ್ಷ್ಮಿ ದೇವಿಗೆ ಮಾತ್ರ ಲಭ್ಯ ಜಯವಿಜಯರೆ......, ನಾವಿನ್ನು ಬರುತ್ತೇನೆ. ನಾರಾಯಣ ನಾರಾಯಣ'' ಎಂದು ಹೇಳಿ ಪರಮಾತ್ಮನ ಸನ್ನಿಧಿಗೆ ಹೋಗಲು ಮುಂದಾದರು.

ಆಗ ನಾರದ ಮಹರ್ಷಿಗಳ ಆಗಮನವಾಗುತ್ತಿದ್ದಂತೆ ವೈಕುಂಠದ ರತ್ನಖಚಿತ ಪ್ರಮುಖ ಮಹಾದ್ವಾರ ತಾನೇ ತಾನಾಗಿ ತೆರೆದುಕೊಂಡಿತು.

ವೈಕುಂಠವನ್ನು ಪ್ರವೇಶಿಸಿದರು ನಾರದರು.

ನಾರದ ಮಹರ್ಷಿಗಳು ಪೂರ್ವ ಮಹಾದ್ವಾರದ ಮೂಲಕ ಶ್ರೀ ವೈಕುಂಠಲೋಕಕ್ಕೆ ಒಳ ಪ್ರವೇಶ ಮಾಡಿ ನಿರ್ಗಮಿಸಿದಂತೆ, ಇತ್ತ ವೈಕುಂಠಲೋಕದ ಕ್ಷಣಕ್ಷಣಗಳ ಆಗು

ಹೋಗುಗಳನ್ನು ಬಲ್ಲವರೆ ಆದ ಜಯವಿಜಯರಲ್ಲಿ ಮತ್ತೆ ಮಾತುಕತೆಯಾಯಿತು.

"ವಿಜಯ"

"ಏನು ಜಯ"

"ನಾರದರು ಪರಮಾತ್ಮನ ದರ್ಶನಕ್ಕೆ ಹೊರಟ ಘಳಿಗೆ ಸರಿಯಲ್ಲ ಎಂದು ನನ್ನ ಮನಸ್ಸು ನುಡಿಯುತ್ತಿದೆಯಲ್ಲ ವಿಜಯ"

"ಪರಮಾತ್ಮ ಸನ್ನಿಧಿ ಎಂದ ಮೇಲೆ ಎಲ್ಲ ಕಾಲವೂ ಎಲ್ಲ ಘಳಿಗೆಯೂ ಶುಭಕಾಲ - ಶುಭ ಘಳಿಗೆ ಶುಭ ಸಮಯ, ಎಲ್ಲ ಕಾಲವು ಪರಮಾತ್ಮನ ಲೀಲಾ ವಿನೋದದ ಕಾಲವೆಂದು ಗೊತ್ತಿಲ್ಲವೆ ಜಯ"

"ನಿಜ ನಿಜ..... ನಿನ್ನ ಮಾತು ಅಕ್ಷರಸಹ ನಿಜ...... ಯಾವ ಯಾವ ವೇಳೆಯಲ್ಲಿ ಯಾರು ಯಾರಿಗೆ ಏನೇನು ಆಗಬೇಕೊ ಅದು ಆಗಲೇ ಬೇಕು ವಿಜಯ" ಎಂದು ಒಬ್ಬರಿಗೊಬ್ಬರ ಮಾತನಾಡಿಕೊಂಡು ತಮ್ಮ ಕಾರ್ಯದಲ್ಲಿ ನಿರತರಾದರು ಜಯವಿಜಯರು.

ಶೇಷಶಯನಾಧೀಶನಾದ ಪರಮಾತ್ಮನ ವಾಸಸ್ಥಾನವಾದ ಶ್ರೀ ವೈಕುಂಠಲೋಕದ ಹೊರಗಿನ ವೈಭವವೇ ಒಂದು ರೀತಿಯಾದರೆ - ಒಳಗಿನ ವೈಬವವನ್ನು ವರ್ಣಿಸುವುದು ಮಹಾಸಾಗರವನ್ನು ಆಳೆದಂತೆ. ಸೃಷ್ಠಿ - ಸ್ಥಿತಿ, ಲಯಗಳ ಕಾರಣೀ ಭೂತನಾದ ಭಗವಂತನ ಅಪೇಕ್ಷೆಯಂತೆ ವಿಶ್ವ ವಿಶಾಲವಾದ ಕ್ಷೀರ ಸಮುದ್ರದ ಮೇಲೆ ನಿತ್ಯ ಚಿನ್ಮಯಾನಂದರೂಪನಾಗಿ ಬ್ರಹ್ಮ ರುದ್ರ ಇಂದ್ರಾದಿ ಸಕಲ ದೇವತೆಗಳ ನಿರಂತರು ಪೂಜಿತನು...... ಸ್ವಯಂ ಪ್ರಕಾಶಿತನೂ...... ಅನಂತ ಕಲ್ಯಾಣ ಗುಣ ಪರಿಪೂರ್ಣನೂ ಶಂಖ, ಚಕ್ರ, ಗಧಾ, ಪದ್ಮಾಂಕಿತ ಭೂಷಣನೂ ಶ್ರೀ ಲಕ್ಷ್ಮೀ ರಮಣನು ಆದ ಶ್ರೀಮನ್ನರಾಯಣನು ದಿವ್ಯಾಲಂಕಾರ ಭೂಷಿತನಾಗಿ ತ್ರಿಲೋಕ ಮಾತೆಯಾದ ಶ್ರೀ ಮಹಾಲಕ್ಷ್ಮೀದೇವಿಯಿಂದ ನಿರಂತರ ಸೇವೆಯನ್ನು ಪಡೆಯುತ್ತ ಏಳು ಹೆಡೆಗುಳುಳ್ಳ ಆದಿಶೇಷನ ಮೇಲೆ ಆಜಾನುಬಾಹುವಾಗಿ ಚತುರ್ಭುಜಾಲಂಕೃತನಾಗಿ ಪವಡಿಸಿದ್ದ.
ಆದಿಶೇಷನ ಮೇಲೆ ಆಜಾನುಬಾಹುವಾಗಿ ಚತುರ್ಭುಜಾಲಂಕೃತನಾಗಿ ಪವಡಿಸಿದ್ದ.

ಆದಿಶೇಷನ ಮೇಲೆ ಪವಡಿಸಿರುವ ಶ್ರೀಹರಿಯನ್ನು ಕಂಡಾಕ್ಷಣ ನಾರದ ಮಹರ್ಷಿಗಳು ಅವರ್ಣನೀಯ ಮಹಾದಾನಂದದಿಂದ ಭಕ್ತಿ ಪರವಶರಾದರು.

ದೇವಋಷಿ ನಾರದರನ್ನು ಇಚ್ಛಾಮಾತ್ರದಿಂದಲೇ ನೋಡಿದ ಪರಮಾತ್ಮನು ಮನದಲ್ಲೇ ನಕ್ಕು ನಾರದರನ್ನೆ ದಿಟ್ಟಿಸಿದ.

ಆದರೆ ಅದೇ ಸಂದರ್ಭದಲ್ಲಿ ಪರಮಾತ್ಮನ ದರ್ಶನಾಕಾಂಕ್ಷೆಯಿಂದ ಬಂದಿದ್ದ ನಾರದರ ಮುಂದೆಯೆ ಒಂದು ರೀತಿಯ ನಿಘೂಡವಾದ ನಂಬಲಾಗದಂತಹ ವಿಚಿತ್ರ

ಸಂದರ್ಭ ಜರುಗಿಹೋಯಿತು. ನಾರದ ಮಹರ್ಷಿಗಳು ಪರಮಾತ್ಮನ ಸ್ತೋತ್ರ ಮಾಡುತ್ತಿದ್ದಂತೆಯೇ ಶ್ರೀ ಹರಿಯ ಪಾದಸೇವೆ ಮಾಡುತ್ತಿದ್ದ ಮಹಾಲಕ್ಷ್ಮಿಯು ಇದ್ದಕ್ಕಿದ್ದಂತೆ ಅಂತರ್ಧಾನಳಾಗಿ ಬಿಟ್ಟಳು.

ಆಗ ನಾರದರಿಗೆ ಎಲ್ಲಿಲ್ಲದ ಪರಮಾಶ್ಚರ್ಯವಾಯಿತು. ಅಷ್ಟೇ ಅಲ್ಲದೆ..... ಒಮ್ಮೆಯೆ ನೂರಾರು ಪ್ರಶ್ನೆಗಳು ಅವರನ್ನು ದೀರ್ಘ್ಮೂಡರನ್ನಾಗಿಸಿ ಚಿಂತಾಪರವಶರಾದರು. ಕ್ಷಣಕಾಲ ಮೌನದಿಂದಿದ್ದ ನಾರದರು ಮೌನ ಮುರಿದು ಪರಮಾತ್ಮನತ್ತ ಮುಖ ತಿರುಗಿಸಿ.

"ನಾರಾಯಣ ನಾರಾಯಣ" ಎನ್ನುತ್ತಾ ತಮ್ಮ ಮನದಲ್ಲಿದ್ದ ಸಂದೇಹ ಪರಿಹಾರಕ್ಕಾಗಿ ಮತ್ತೆ ಮಾತು ಮುಂದುವರಿಸಿದರು.

"ಆಶ್ಚರ್ಯ, ಆಶ್ಚರ್ಯ, ಪರಮಾಶ್ಚರ್ಯ, ಇದೇನಿದು ಪರಮಾತ್ಮ..... ಈ ದಿನ ಲೋಕ ಮಾತೆಯಾದ ಮಹಾಲಕ್ಷ್ಮಿಯು ಇದ್ದಕ್ಕಿದ್ದಂತೆ ಅಂತರ್ಧಾನಳಾಗಿ ಬಿಟ್ಟಳಲ್ಲ.... ಇದರ ಕಾರಣವಾದರು ಏನು ? ನನ್ನಿಂದ ಏನಾದರು ಅಪಚಾರವಾಯಿತೆ ? ಈ ನನ್ನ ಪ್ರಶ್ನೆಗೆ ಉತ್ತರಿಸಬೇಕು. ದಯಾಸಾಗರ" ಎಂದು ನಾರದರು ಪ್ರಾರ್ಥಿಸಿದರು.

"ನಾರದ ಮುನೀಂದ್ರ, ಏಕೆ ಆ ರೀತಿ ವಿನಾ ಕಾರಣ ಗಾಬರಿಯಾಗಿರುವೆ, ಈ ನನ್ನ ವೈಕುಂಠದಲ್ಲಿ ಯಾವುದೇ ರೀತಿಯ ಪ್ರಮಾದಕ್ಕೂ ಅವಕಾಶವಿಲ್ಲವೆಂದು ನಿನಗೆ ತಿಳಿಯದೆ"

"ನಿಜ ಪರಮಾತ್ಮ, ಆದರೆ ನಿನ್ನ ಅನುಗ್ರಹದಿಂದ ನಾನು ಜ್ಞಾನಿಯಾದರೂ, ನನ್ನ ಜ್ಞಾನಕ್ಕೂ ಇದೀಗ ಜರುಗಿಹೋದ ಆಭಾಸಕ್ಕೂ ಒಂದಕ್ಕೊಂದು ಸಂಬಂಧವಿಲ್ಲವಲ್ಲ ಪರಮಾತ್ಮ. ನಿನ್ನ ಪಾದಕಮಲವನ್ನು ಕ್ಷಣಕಾಲವೂ ಬಿಟ್ಟಿರದ ಜಗನ್ಮಾತೆಯು ಆ ರೀತಿ ಅಂತರ್ಧಾನಳಾಗಲು ಕಾರಣವಾದರೂ ಏನು ?'

"ಚಿಂತಿಸಬೇಡ ನಾರದ, ನಿನ್ನ ಜಗನ್ಮಾತೆಯು ಇಂದು ತನ್ನ ಕರ್ತವ್ಯ ಪಾಲನೆಗಾಗಿ ಇದೀಗ ಹೋಗಿದ್ದಾಳೆ ಅಷ್ಟೇ" ಎಂದು ಪರಮಾತ್ಮನು ನಾರದರಿಗೆ ಉತ್ತರಿಸಿದರು.

ಆಗ ನಾರದರಿಗೆ ಮತ್ತಷ್ಟು ಆಶ್ಚರ್ಯವಾಯಿತು. ಆಶ್ಚರ್ಯದ ಜೊತೆಗೆ ಕುತೂಹಲವು ಉಂಟಾಯಿತು.

"ಇದೇನು ಪರಮಾತ್ಮ, ನಿನ್ನ ಚರಣಾರವಿಂದದಲ್ಲಿ ಅನವರತವೂ ಅನಂತ ಭಕ್ತಿ ಮಾರ್ಗದಿಂದ ನಿನ್ನ ಸೇವೆಯಲ್ಲಿಯೇ ತಲ್ಲೀನಳಾಗಿರುವ ಆ ಜಗನ್ಮಾತೆಗೆ ನಿನ್ನನ್ನು ಬಿಟ್ಟು ಮತ್ತಾವ ಕರ್ತವ್ಯ ತಾನೇ ಇರುವುದು ?

"ಹೇಳುತ್ತೇನೆ ಆಲಿಸು ನಾರದ.....," ಎಂದು ಹೇಳಿ ಪುನಹ ಮಾತಿಗಾರಂಭಿಸಿದರು.

"ನಾರದ ಈ ದಿನ......, ನಮ್ಮ ದೇವಲೋಕದ ದೇವರಾಜನಾದ ದೇವೇಂದ್ರನಂತೆ ಭೂಲೋಕದಲ್ಲಿನ ಭರತ ಭೂಮಿಯಲ್ಲಿ ಅಮರಾವತಿ ಪಟ್ಟಣದಂತೆ ವೈಭವವಾಗಿ ಖ್ಯಾತಿಯಿಂದ ಮೆರೆಯುತ್ತಿರುವ ಧಾರಾನಗರದಲ್ಲಿ ಮಹಾಧರ್ಮಿಷ್ಠನಾದ ಭೋಜರಾಜನ ಹುಟ್ಟಿದ ಹಬ್ಬದ ಸಂಭ್ರಮದ ವಿಶೇಷ ದಿನವಾಗಿದೆ. ಪ್ರತಿವರ್ಷದಂತೆ ಈ ದಿನವೂ ಸಹ ಹುಟ್ಟಿದ ಹಬ್ಬದ ದಿನವಾದ ಇಂದು ಆ ಮಹಾಧರ್ಮಿಷ್ಠರಾಜನ ರಾಜಸಭೆಯಲ್ಲಿ ಆಕೆಯ ಕರ್ತವ್ಯವಾದರೂ ಏನು ಎನ್ನುವುದು ತಿಳಿದಿದೆಯೇ,? ಸಿಂಹಾಸನಾ ರೂಢನಾದ ಆ ಭುವನೇಂದ್ರನಿಗೆ ಆಶೀರ್ವದಿಸುವ ಪುಣ್ಯ ಕಾರ್ಯ ಅವಳ ಪಾಲಿನದಾಗಿದೆ." ಎಂದು ಪರಮಾತ್ಮನು ನಾರದರಿಗೆ ವಿವರಿಸಿದರು.

ಆಗ ನಾರದರು ಚಕಿತರಾದರು. ಒಮ್ಮೆಯೇ ಅವರ ಪಾಲಿಗೆ ಸ್ವರ್ಗಲೋಕವೇ ಕಂಪಿಸಿದಂತಾಯಿತು.

ತಮ್ಮೆರಡು ಹಸ್ತಗಳಿಂದ ಎರಡು ಕಿವಿಗಳನ್ನು ಮುಚ್ಚಿಕೊಳ್ಳುತ್ತಾ

"ಶಾಂತಂ ಪಾಪಂ ಶಾಂತಂ ಪಾಪಂ,...... ಹೇ ಪರಮಾತ್ಮ ! ಇದೇನಿದು ಈ ನಿನ್ನ ವಿಚಿತ್ರಲೀಲೆ ನನಗೊಂದೂ ಅರ್ಥವಾಗುತ್ತಿಲ್ಲವಲ್ಲ, ಜಗನ್ಮಾತೆ ಎಂದರೇನು ? ಯಃಕಶ್ಚಿತ್ ಭೂಲೋಕದ ಒಬ್ಬ ರಾಜನೆಂದರೇನು ? ಆ ಮಹಾತಾಯಿ..... ಭೂಲೋಕಕ್ಕೆ ಹೋಗಿ ಒಬ್ಬ ಸಾಮಾನ್ಯ ರಾಜನ ಅರಮನೆ ಪ್ರವೇಶಿಸುವುದೆಂದರೇನು ? ಇದು ಇಡೀ ಈ ಸಮಸ್ತ ದೇವಲೋಕಕ್ಕೆ ಅಪಮಾನವಾದಂತಾಗಲಿಲ್ಲವೇ ? ಮಹಾಪ್ರಭು" ಎಂದು ನಾರದರು ಕೆಣಕಿ ಕೇಳಿದರು.

"ಹೌದು ನಾರದ..... ಆ ಭೋಜರಾಜನ ಪುಣ್ಯ ನನ್ನನ್ನು ಮೀರಿಸಿ ಬಿಟ್ಟಿದೆ. ಅವನು ಇದುವರೆವಿಗೆ ಪುಣ್ಯದ ರಾಶಿ ತ್ರಿಲೋಕವನ್ನು ವ್ಯಾಪಿಸಿಬಿಟ್ಟಿದೆ ನಾರದ."

"ಭೂಲೋಕದ ರಾಜನೊಬ್ಬನು ಅಖಂಡವಾಗಿ ಮಾಡಿದ ಪುಣ್ಯಕ್ಕೆ..... ಜಗನ್ಮಾತೆಗೆ ಇದು ಶಿಕ್ಷೆಯೆ ಪರಮಾತ್ಮ"

"ಶಿಕ್ಷೆ ಅಲ್ಲ ನಾರದ, ರಕ್ಷೆ, ಧರ್ಮದ ರಕ್ಷೆ...... ಶ್ರೀ ರಕ್ಷೆ....." ಎಂದು ನಾರದರನ್ನು ಕುರಿತು ನುಡಿದನು ಪರಮಾತ್ಮ.

"ನಿನ್ನ ವಿಚಿತ್ರ ಲೀಲಾವಿನೋದವೇ ನನಗರ್ಥವಾಗುತ್ತಿಲ್ಲ ಪರಮಾತ್ಮ"

"ನಿನಗೆ ಪೂರ್ಣವಾಗಿ ಅರ್ಥವಾಗಬೇಕಾದರೆ ಬ್ರಹ್ಮಲೋಕಕ್ಕೆ ಪ್ರಯಾಣ ಬೆಳಸು" ಎಂದನು ವೈಕುಂಠಾಧಿಪತಿ.

"ಹರಿ ಚಿತ್ತ - ಹರಿ ಚಿತ್ತ", ಎಂದು ಹೇಳಿ ನಾರದರು "ನಾರಾಯಣ ನಾರಾಯಣ" ಎನ್ನುತ್ತಾ ಬ್ರಹ್ಮಲೋಕಕ್ಕೆ ಪ್ರಯಾಣ ಬೆಳೆಸಿದರು.

# ಬ್ರಹ್ಮಲೋಕ

ಚತುರ್ದಶ ಲೋಕಗಳಲ್ಲಿ ಅತ್ಯಂತ ಉತ್ತುಂಗ ಸ್ಥಾನದಲ್ಲಿರುವ ಲೋಕವೇ ಬ್ರಹ್ಮಲೋಕ.

ಆ ಅದ್ಭುತ ಲೋಕದ ಸಿರಿ ಸೊಬಗಿನ ವರ್ಣನೆಯನ್ನು ಎಷ್ಟು ಬಣ್ಣಿಸುತ್ತಾ ಹೋದರು ಅದು ಸಿಂಧುವಿನಲ್ಲಿ ಬಿಂದುವಿನಂತಾದೀತು. ಆ ಲೋಕವು ಹೀಗೆಯೇ ಇದೆ ಎಂದು ವರ್ಣಿಸುವುದು ಕಲ್ಪನೆಗೂ ನಿಲುಕದಂತಹ ವಿಚಾರ. ಅಷ್ಟೊಂದು ವೈಭವದಿಂದ ಮೆರೆಯುತ್ತಿತ್ತು ಬ್ರಹ್ಮಲೋಕ.

ಸಮಸ್ತ ದೇವಲೋಕದ ಕಕ್ಷೆಯಲ್ಲಿಯೇ ಅತಿ ರಮ್ಯ ಮನೋಹರ ಕಾಂತಿಯಿಂದ ಬಹು ವಿಸ್ಮಯಕಾರಕವಾಗಿ ಸದಾ ಪ್ರಜ್ವಲಿಸುತ್ತಿರುವ ಬ್ರಹ್ಮಲೋಕವು ಅದೊಂದು ಮಾಯಾಸಾಗರದಂತೆ ಅವರ್ಣನೀಯ. ಅಲ್ಲಿ ಎಲ್ಲೆಲ್ಲೂ ನಿರಾಕಾರ ನಿರಾಧಾರ. ನಿರ್ಮಲ - ನೀರವತೆ, ಪ್ರಶಾಂತತೆ ಕಾಂತಿಯತೆಯಿಂದ ಕೂಡಿದ್ದು ಬ್ರಹ್ಮದೇವನ ಇಚ್ಛಾಮಾತ್ರದಿಂದಲೇ ಬಯಸಿದ್ದನ್ನು ಸೃಷ್ಟಿಸಬಹುದಾದ ಅದೊಂದು ಅಪೂರ್ವ ಲೋಕ. ಆದರೆ ಅಲ್ಲಿ ಅನವರತವೂ ಬ್ರಹ್ಮನ ಸೇವೆಗಾಗಿ ಸಂಚರಿಸುವ ದೇವತೆಗಳಿಗೆ ತಪೋ ಮುನಿಗಳಿಗೆ ಆ ಚತುರ್ಮುಖ ಬ್ರಹ್ಮನ ಸೇವೆ ಆರಾಧನೆ ಉಪಾಸನೆ ಇವುಗಳ ಹೊರತಾಗಿ ಯಾವುದರಲ್ಲಿಯೂ ಆಸೆ ಆಕ್ಕರೆಗಳಿರುವುದಿಲ್ಲ. ಯಾವುದೇ ವಿಧವಾದ ಆಕಾಂಕ್ಷೆ ಅಭಿಲಾಷೆ ಕಾಮನೆಗಳಿಂದ ಮುಕ್ತರಾದ ದೇವ ಮುನಿಗಳ ಪರಮ ವಾಸಸ್ಥಾನವೇ ಆಗಿತ್ತು. ಬಹು ವಿಸ್ಮಯಕಾರಕ ಕಾಂತಿಯಿಂದ ಕೂಡಿದ ಆ ಲೋಕದಲ್ಲಿ ಛಳಿಯೂ ಇಲ್ಲ, ಸೆಕೆಯೂ ಇಲ್ಲ, ಹಸಿವು ಬಾಯಾರಿಕೆಗಳಂತೂ ಮೊದಲೇ ಇಲ್ಲ. ಬ್ರಹ್ಮದೇವನ ನಿತ್ಯ ಪ್ರಾರ್ಥನೆ ನಿರಂತರ ಆರಾಧನೆಯಿಂದ ಅಮೃತಮಯವಾದ ಎಲ್ಲರೂ ನಿರಂತರ ಸುಖಿಗಳಾಗಿ ವಿರಾಜಮಾನವಾಗಿ ವಿಹರಿಸುತ್ತಿದ್ದರು.

ಆ ರಮಣೀಯ ಮನಮೋಹಕ ಬ್ರಹ್ಮಲೋಕದಲ್ಲಿ ಗೌತಮ ಭಾರದ್ವಾಜ, ಅಗಸ್ತ್ಯ, ಜಮದಗ್ನಿ ಮುಂತಾದ ತಪೋ ಮುನಿಗಳು · ದಿತಿ, ಅದಿತಿ, ಗೌತಮಿ, ಅರುಂಧತಿ, ಗಾಯತ್ರಿ, ಸಾವಿತ್ರಿ ಮುಂತಾದ ತಪಸ್ವಿನಿಯರು - ಆದಿತ್ಯರು, ವಸುಗಳು, ಸಾಧ್ಯರು, ಮರುತ್ತುಗಳು, ಪಿತೃದೇವತೆಗಳು, ವಿಶ್ವದೇವತೆಗಳು, ಅಶ್ವಿನಿ ದೇವತೆಗಳು, ಕಿನ್ನರ ಕಿಂಪುರುಷರು, ಆದಿತ್ಯಾದಿ ರುದ್ರರು, ಸ್ಥಾವರ ಜಂಗಮರು ಇಂದ್ರಾದಿ ಸಕಲ ದೇವ ಸಮೂಹಗಳು, ಸೂರ್ಯ ಚಂದ್ರರಾದಿಯಾಗಿ ಎಲ್ಲರೂ ಆ ಚತುರ್ಮುಖನ ನಿರಂತರ ಸೇವೆಯಲ್ಲಿ ನಿರತರಾಗಿದ್ದರು.

ಸಕಲ ಸೃಷ್ಟಿಗೆ ಕಾರಣ ಕರ್ತನಾದ ಬ್ರಹ್ಮ ದೇವನು ಅತ್ಯಂತ ವೈಭವದಿಂದ ಕೂಡಿದ್ದ ಸಭಾಮಂದಿರದ ಮಧ್ಯದಲ್ಲಿ ಸೂರ್ಯ ಚಂದ್ರ ಪ್ರಕಾಶವನ್ನು ಸಹ ನಾಚಿಸುವಂಥ ತೇಜಸ್ಸಿನಿಂದ ಕಮಲಾಸನದ ಮೇಲೆ ಉಪಸ್ಥಿತರಾಗಿದ್ದರು.

ಆ ಬ್ರಹ್ಮದೇವರ ಮಹಾಸಭೆಯು ಅನವರತವೂ ದೇವ ಸಮೂಹವೆಂಬ ಅತಿಥಿಗಳಿಂದ ತುಂಬಿರುತ್ತಿತ್ತು. ಅದ್ಭುತವಾದ ತೇಜಸ್ಸುಳ್ಳವನು ಪರಮಸಮರ್ಥನು

ಸದಾಮಂದಹಾಸ ಮನೋಹರನು ಜಗದ್ಕಾರಣ ಪುರುಷ ಶ್ರೇಷ್ಠನು ಆದ ಚತುರ್ಮುಖ ಬ್ರಹ್ಮದೇವರ ಬಾರ್ಯೆಯಾದ ವಿದ್ಯಾಭಿಮಾನಿ ದೇವತೆಯಾದ ಸರಸ್ವತೀ ದೇವಿಯು ಅಂದು ಒಂದೆಡೆ ಕಮಲಾಸನದಲ್ಲಿ ಆಸೀನಳಾಗಿ ತನ್ನ ದೇವ ವೀಣೆಯಿಂದ ಮಧುರ ಝೇಂಕಾರನಾದ ಮಾಡುತ್ತಾ, ಸುಶ್ರಾವ್ಯವಾಗಿ ವೀಣೆಯನ್ನು ನುಡಿಸುತ್ತಾ, ಬ್ರಹ್ಮದೇವರ ಪರಮ ಸಂತೋಷಕ್ಕೆ ಪಾತ್ರಳಾಗಿದ್ದಳು. ಗಾಯತ್ರಿ ಸಾವಿತ್ರಿಯರು ಸಹ ಆ ವಿದ್ಯಾ ಮಾತೆಗೆ ಸರಿಸಮಾನರಾಗಿ ವೀಣೆ ನುಡಿಸುತ್ತಿದ್ದರು.

ಆ ತ್ರಿವೀಣಾ ಮಧುರನಾದದ ಸ್ಪರ್ಧೆಗೆ ಇಡೀ ಲೋಕವೇ ಮೂಕವಿಸ್ಮಿತವಾಗಿ ತಲೆದೂಗುತ್ತಿತ್ತು. ಬ್ರಹ್ಮದೇವರಂತೂ ಆ ದಿನ ಎಂದಿಲ್ಲದ ಪರಮ ಸಂತೋಷದಿಂದ ಸರಸ್ವತೀ ದೇವಿಯ ವೀಣಾವಾದನಕ್ಕೆ ಮೈ ಮರೆತು ಪ್ರಸನ್ನ ಚಿತ್ತದಿಂದಲೇ ಇದ್ದನು.

ಶಾರದೆಯು ತನ್ನ ವೀಣೆ ನುಡಿಸುವುದನ್ನು ಮುಗಿಸಿ ಮಂಗಳ ಹಾಡಿದ ಸಮಯಕ್ಕೆ ಸರಿಯಾಗಿ ಶ್ರೀ ವೈಕುಂಠ ಲೋಕದಿಂದ ಅದೃಶ್ಯಳಾಗಿ ಹೊರಟಿದ್ದ ಮಹಾ ಲಕ್ಷ್ಮಿಯೂ ಸಹ ಸರಸ್ವತೀ ದೇವಿಯ ಬಳಿಗೆ ಬಂದಳು. ಹಾಗೆ ಆಕಸ್ಮಿಕವಾಗಿ ಆಗಮಿಸಿದ ಲಕ್ಷ್ಮಿ ಸರಸ್ವತಿಯರು ಅಂದಿನ ತಮ್ಮ ಕರ್ತವ್ಯವನ್ನು ಕುರಿತು ಕಣ್ಣೋಟದಲ್ಲೇ ಪರಸ್ಪರ ವಿಚಾರ ವಿನಿಮಯ ಮಾಡಿಕೊಂಡರು.

ಆ ವೇಳೆಗೆ ಸರಿಯಾಗಿ ಅಲ್ಲಿಗೆ ನಾರದ ಮಹರ್ಷಿಗಳು ಸಹ ಆಗಮಿಸಿದರು.

"ನಾರಾಯಣ, ನಾರಾಯಣ" ಎನ್ನುತ್ತ ಅಲ್ಲಿಗೆ ಪ್ರವೇಶಿಸುತ್ತಿದ್ದಂತೆ ..... ಅವರ ದೃಷ್ಟಿ ಬ್ರಹ್ಮದೇವರತ್ತ ಬೀರುವುದಕ್ಕಿಂತಲೂ ಮೊದಲಾಗಿ ಜಗನ್ಮಾತೆಯಾದ ಲಕ್ಷ್ಮೀ ಸರಸ್ವತಿಯತ್ತ ಹರಿಯಿತು. ನಾರದರನ್ನು ನೋಡಿ ಮುಗುಳ್ನಕ್ಕ ಅವರಿಬ್ಬರು ಆಶ್ಚರ್ಯವಾಗುವ ರೀತಿಯಲ್ಲಿ ಆ ಸ್ಥಳದಿಂದ ಅದೃಶ್ಯರಾಗಿ ಬಿಟ್ಟಿದ್ದರು. ಆಗ ನಾರದರಿಗೆ ಮತ್ತಷ್ಟು ಪರಮಾಶ್ಚರ್ಯವಾಯಿತು. ತಮ್ಮಷ್ಟಕ್ಕೆ ತಾವೇ ಮಾತನಾಡಿಕೊಳ್ಳುತ್ತ ಬಿಟ್ಟ ಕಣ್ಣಿಂದ ಆ ಅದೃಶ್ಯರಾದ ಸ್ಥಳವನ್ನೇ ತದೇಕ ದೃಷ್ಟಿಯಿಂದ ನೋಡುತ್ತಾ "ನಾನು ಅನೇಕ ಯುಗ ಯುಗಗಳಿಂದಲೂ ಈ ಸಮಸ್ತ ದೇವಲೋಕಗಳಲ್ಲಿ ಸಂಚರಿಸುತ್ತಿದ್ದರೂ ಸಹ ಈ ಜಗನ್ಮಾತೆಯರ ನಿಗೂಢ ಕಾರ್ಯಾಚರಣೆ, ಕಾರ್ಯಭಾರ ಒಂದೂ ಅರ್ಥವೇ ಆಗುತ್ತಿಲ್ಲವಲ್ಲಾ? ಅಲ್ಲಿ ಆ ವೈಕುಂಠದಲ್ಲಿ ಆ ತಾಯಿ ಮಹಾಲಕ್ಷ್ಮಿ ಅದೃಶ್ಯಳಾಗಿ ಬಿಟ್ಟಳು. ಇಲ್ಲಿಗೆ ಬಂದರೆ ಲಕ್ಷ್ಮೀ ಸರಸ್ವತಿಯರು ಇಬ್ಬರು ಅದೃಶ್ಯರಾಗಿ ಬಿಟ್ಟರು. ಇರಲಿ ಈ ದೇವ ರಹಸ್ಯವನ್ನು ತಿಳಿದುಕೊಳ್ಳಲು ಪ್ರಯತ್ನಿಸೋಣ" ಎಂದು ತಮ್ಮಲ್ಲೇ ಅಂದುಕೊಂಡರು.

ಆಗ ಅಲ್ಲಿದ್ದವರು ಚತುರ್ಮುಖನಾದ ಬ್ರಹ್ಮದೇವರು ಮತ್ತು ನಾರದ ಮಹರ್ಷಿಗಳು ಮಾತ್ರ.

ನಂತರ ನಾರದ ಮಹರ್ಷಿಗಳು ಚತುರ್ಮುಖ ಬ್ರಹ್ಮದೇವರನ್ನು ಕುರಿತು ಅನನ್ಯ ಭಕ್ತಿಯಿಂದ ಕೈ ಜೋಡಿಸಿ ವಂದಿಸುತ್ತ "ಹೇ ಬ್ರಹ್ಮದೇವ ಪ್ರಸನ್ನನಾಗು" ಎಂದರು.

ಅವ್ಯಕ್ತ ಸಮಸ್ಯೆಯ ಗುಂಗಿನಲ್ಲಿದ್ದ ನಾರದ ಮುನೀಂದ್ರರನ್ನು ಬ್ರಹ್ಮದೇವರು ಮಧುರ ವಾಣಿಯಿಂದ ಮಾತನಾಡಿಸುತ್ತಾ "ಏನು ನಾರದ, ಎಂದಿನಂತೆ ಇಂದು

ಮುಖದಲ್ಲಿ ಯಾವುದೇ ನಿರ್ಮಲತೆ ಸಂತೋಷ ಒಂದೂ ಕಾಣಿಸುತ್ತಿಲ್ಲವಲ್ಲ. ಯಾವುದೋ ಒಂದು ಸಮಸ್ಯೆಯನ್ನು ಹೊತ್ತು ತಂದಿರುವಂತಿದೆ?" ಎಂದು ವಿನೋದವಾಗಿ ಪ್ರಶ್ನಿಸಿದರು ಬ್ರಹ್ಮದೇವರು.

"ನಾರಾಯಣ, ನಾರಾಯಣ ಹೇ ವಿಧಾತ... ಜಗನ್ಮಾತೆಯರಾದ ಲಕ್ಷ್ಮೀ ಸರಸ್ವತಿಯರ ವಿಚಿತ್ರ ಸ್ವಭಾವವನ್ನು ನಾನು ಏನು ತಾನೆ ಹೇಳಲಿ? ಇಂದು ನಾನು ವೈಕುಂಠಕ್ಕೆ ಹೋದರೆ ಅಲ್ಲಿ ನನ್ನನ್ನು ಕಂಡದ್ದೇ ಮಹಾಲಕ್ಷ್ಮಿ ಅದೃಶ್ಯರಾಗಿ ಬಿಟ್ಟರು..... ಇದರ ಮರ್ಮವೇನು ತಂದೆ ....?" ಎಂದು ತಮ್ಮ ಆತಂಕವನ್ನು ತೋಡಿ ಕೊಂಡರು.

"ಕಾರಣ..... ತಿಳಿಯಬೇಕೆ ನಾರದರೆ?" ಹುಸಿನಕ್ಕು ಪ್ರಶ್ನಿಸಿದರು ಬ್ರಹ್ಮದೇವರು.

"ಚೆನ್ನಾಯಿತು..... ತಿಳಿದು ತಿಳಿದು ನನ್ನನ್ನೇ ಕೇಳುತ್ತೀರುವೆಯಲ್ಲ ಬ್ರಹ್ಮದೇವ........."

"ಎಷ್ಟೇ ಆಗಲಿ - ನೀನು ತ್ರಿಲೋಕ ಸಂಚಾರಿ, ಸಮಸ್ತ ಲೋಕಗಳ ದಿನನಿತ್ಯದ ಆಗು ಹೋಗುಗಳನ್ನು ನಿನ್ನ ಬಾಯಿಂದಲೇ ಕೇಳಿದರೆ ಮಾತ್ರ ನನಗೆ ಆನಂದವಾಗುವುದು. ಹೇಳು ನಾರದ.... ನಿನ್ನ ಸಮಸ್ಯೆ ಏನು ಬೇಗ ಹೇಳು"

"ಹೌದು ಹೌದು... ಆ ಸಮಸ್ಯೆಯನ್ನು ನೀನೇ ಬಗೆಹರಿಸಬೇಕು ವಿದ್ಯಾರಮಣ"

"ಶೃತಿ ಕೃತಿಯಾದರೆ ತಾನೆ..... ಸಮಸ್ಯೆಯನ್ನು ಬಗೆಹರಿಸುವುದು" ಎಂದು ಬ್ರಹ್ಮದೇವರು ವಿನೋದವಾಗಿಯೇ ಹೇಳಿದರು.

ಬ್ರಹ್ಮದೇವರು ಲಕ್ಷ್ಮೀ ಸರಸ್ವತಿಯರು ಅದೃಶ್ಯರಾದ ಬಗ್ಗೆ ವಿವರವಾಗಿ ಹೇಳಿದರು. ನಾರದರಿಗೆ ಆಶ್ಚರ್ಯವಾಯಿತು.

"ದೇವಾ...... ಇಂದು ಭೂ ಲೋಕದಲ್ಲಿ ದೇವ ಲೋಕದ ಇಂದ್ರನಿಗೆ ಸಮಾನನಾಗಿ ಸಾಕ್ಷಾತ್ ಭುವನೇಂದ್ರನಾಗಿ ಬಹು ಧರ್ಮದಿಂದ ರಾಜ್ಯಭಾರ ಮಾಡುತ್ತಿರುವ ಭೋಜರಾಜನ ಹುಟ್ಟಿದ ಹಬ್ಬವೆ? ಆ ಹುಟ್ಟಿದ ಹಬ್ಬಕ್ಕೆ ಜಗನ್ಮಾತೆಯರಾದ ಸಾಕ್ಷಾತ್ ಲಕ್ಷ್ಮಿ ಸರಸ್ವತಿಯರು ಆ ಭೋಜರಾಜನ ರಾಜಸಭಾಭವನಕ್ಕೆ ಎಲ್ಲಾ ಮಾನವರ ಎದುರಿಗೆ ಯಾವುದೇ ಆಮಂತ್ರಣವಿಲ್ಲದೆ ಸಿಂಹಾಸನಾಧಿರೂಢನಾದ ಭೋಜರಾಜನಿಗೆ ತ್ರಿಲೋಕ ಮಾತೆಯರಾದ ಲಕ್ಷ್ಮೀ ಸರಸ್ವತಿಯರು ನೇರವಾಗಿ ಆಶೀರ್ವಾದ ಮಾಡಲು ಹೋಗಿಬಿಟ್ಟಿದ್ದಾರೆ. ಎಂದ ಮೇಲೆ ನಮ್ಮ ಈ ದೇವಲೋಕ ಬ್ರಹ್ಮಲೋಕಗಳ ವೈಶಿಷ್ಟ್ಯತೆ ದಿನೇ ದಿನೇ ಯಾವ ಸ್ಥಿತಿಗೆ ಇಳಿಯುತ್ತಿದೆ? ಈ ಸಮಸ್ಯೆಯನ್ನು ಜ್ಞಾನಸಾಗರನಾದ ನೀನೇ ಬಗೆಹರಿಸಬೇಕು ಬ್ರಹ್ಮದೇವ" ಎಂದು ಆವೇಶದಿಂದಲೇ ನುಡಿದರು ನಾರದರು.

ನಾರದರ ಮಾತಿಗೆ ಬ್ರಹ್ಮ ದೇವರು ನಸುನಕ್ಕು,

"ನಾರದ........ ಜ್ಞಾನೇಂದ್ರಿಯದಲ್ಲಿ ಪರಮಾತ್ಮನಿಗೆ ಸಮಾನನಾದ ನೀನು ಸಹ ಒಮ್ಮೊಮ್ಮೆ ವಿವೇಕದಿಂದ ದೂರವಾಗಿ ವರ್ತಿಸುವೆಯಲ್ಲ........?"

"ಅಂದರೆ..........."

- ನಾರದರು ಮತ್ತೆ ಅನುಮಾನದಿಂದ ಪ್ರಶ್ನಾರ್ಥ ನೋಟ ಬೀರಿ ನುಡಿದರು.

"ನಾರದ ಈಗ ನೀನೆ ಹೇಳಿದಂತೆ ಲಕ್ಷ್ಮೀ ಸರಸ್ವತಿಯರು ತ್ರಿಲೋಕ ಮಾತೆಯರು ಎಂದ ಮೇಲೆ ಅವರು ಎಲ್ಲರಿಗೂ ಮಾತೃ ಸಮಾನರು ತಾನೆ.....?"

"ನಿಜ..... ಅಧರಲ್ಲಿ ಅನುಮಾನವೇ ಇಲ್ಲ, ಸಾಕ್ಷಾತ್ ಲಕ್ಷ್ಮೀ ಸರಸ್ವತಿಯರು ನನಗೂ ಸಹ ಮಾತೆಯರು........ ಹಾಗಂದ ಮೇಲೆ ಭೂಲೋಕದ ಮಹಾ ಧರ್ಮಿಷ್ಟ ರಾಜನಾದ ಭೋಜರಾಜನು ಸಹ ಲಕ್ಷ್ಮೀ ಸರಸ್ವತಿಯರಿಗೆ ಮಗನ ಸಮಾನವೇ ತಾನೇ?" ಮತ್ತೆ ಮುಂದುವರಿದು ಮಾತನಾಡುತ್ತಾ -

"ಮಗನ ಹುಟ್ಟಿದ ಹಬ್ಬಕ್ಕೆ ತಾಯಿಯಾದವಳು ಹೋಗುವುದರಲ್ಲಿ ಅಪರಾಧವಾದರೂ ಏನು? ಸಂಶಯವಾದರೂ ಏಕೆ?"

"ಅದೇನೋ ಸರಿ.... ಆದರೆ ಆ ಭೋಜರಾಜನು ತಾನು ಸಿಂಹಾಸನಾದಿ ರೂಢನಾಗಿ ದರ್ಪದಿಂದ ಮೆರೆಯುತ್ತಾ ಇರುವಾಗ ಆತನ ಅರಮನೆಗೆ ಹೋಗುವುದೆಂದರೆ.... ಅದು ಅನುಚಿತವಲ್ಲವೆ?"

"ನೀನು ವಿವೇಕವನ್ನು ಕಳೆದುಕೊಂಡೇ ಮಾತನಾಡುತ್ತಿರುವೆ ನಾರದ"

"ಅದು ಹೇಗೆ?" ಪ್ರಶ್ನಿಸಿದರು ನಾರದರು.

"ಯಾವ ತಾಯಿಯು ತನ್ನ ಹಸುಗೂಸನ್ನು ತೊಟ್ಟಲಿಗೆ ಹಾಕಿ ಜೋಗುಳ ಹಾಡುತ್ತ ಮಲಗಿಸಿದ ಮಾತ್ರಕ್ಕೆ ಆ ತಾಯಿಯು ಮಗುವಿನ ದಾಸಿಯಂತಾಗುತ್ತಾಳೆಯೇ ನಾರದ...........?

"ಆಹಾ, ಎಂತಹ ಸೂಕ್ಷ್ಮ ವಿಚಾರ ....... ಒಮ್ಮೊಮ್ಮೆ ಇಂತಹ ಸೂಕ್ಷ್ಮ ವಿಚಾರಗಳು ನನ್ನ ತಲೆಗೆ ಹೊಳೆಯುವುದೇ ಇಲ್ಲ... ಈಗ ನನಗೆ ಅರಿವಾಯಿತು. ಸಮಾಧಾನವೂ ಆಯಿತು. ಸಮಸ್ಯೆ ಪರಿಹಾರವಾಯ್ತು ಬ್ರಹ್ಮದೇವ. ಇನ್ನು ನನಗೆ ಹೊರಡಲು ಅಪ್ಪಣೆ ನೀಡಿ ಪ್ರಭುವೆ..... ನಾನೀಗ ಶಿವಲೋಕಕ್ಕೆ ಹೋಗಿ ಬರುತ್ತೇನೆ. ಅಲ್ಲಿ ಶಿವ ಪಾರ್ವತಿಯರನ್ನು ದರ್ಶನ ಮಾಡುವ ಅಪೇಕ್ಷೆ ಉಂಟಾಗಿದೆ."

"ಓಹೋ....... ನಾರದರ ಸಮಯೋಚಿತ ಅಪೇಕ್ಷೆ ತಿಳಿಯಿತು. ಲಕ್ಷ್ಮೀ ಸರಸ್ವತಿಯರಂತೆ ಆ ಪಾರ್ವತೀ ದೇವಿಯೂ ಸಹ ಶಿವ ಲೋಕದಿಂದ ಅದೃಶ್ಯಳಾಗಿ ಬಿಟ್ಟಿರುವಳೋ ಎಂತೋ. ಎಂಬ ಕುತೂಹಲದಿಂದ ಶಿವಲೋಕಕ್ಕೆ ಶಿವನ ದರ್ಶನ ಪಡೆಯುವ ನೆಪ ಮಾಡಿಕೊಂಡು ಹೋಗುತ್ತಿರುವಂತಿದೆ .........?"

"ಹಾಗೇನಿಲ್ಲ ಹಾಗೇನಿಲ್ಲ... ಎಲ್ಲಾ ಹರಿ ಚಿತ್ತ" ನಗುತ್ತ ನುಡಿದರು ನಾರದರು.

"ವಿಜಯೋಸ್ತು ವಿಜಯೋಸ್ತು ಹೋಗಿ ಬಾ ನಾರದ"

"ನಾರಾಯಣ ನಾರಾಯಣ".

ನಾರದರು ಬ್ರಹ್ಮ ಲೋಕದಿಂದ ನಿರ್ಗಮಿಸಿ ಶಿವಲೋಕಕ್ಕೆ ಪ್ರಯಾಣ ಮಾಡಿದರು.

# ಶಿವಲೋಕ

ಪರಮೇಶ್ವರನ ಪವಿತ್ರ ವಾಸಸ್ಥಾನವಾದ ಕೈಲಾಸ ಪರ್ವತವು ಶ್ವೇತಮಯವಾಗಿ ಅತಿಶಯವಾದ ದಿವ್ಯಕಾಂತಿಯಿಂದ ಶೋಭಾಯಮಾನವಾಗಿತ್ತು.

'ಸತ್ಯಂ ಶಿವಂ ಸುಂದರಂ' ಎಂಬ ದೇವನುಡಿಯಂತೆ ಮನೋನಿಯಾಮಕನಾದ ಮಹಾರುದ್ರ ದೇವನ ಆ ವಾಸಸ್ಥಾನದಲ್ಲಿ ಸಹಸ್ರಾರು ಮಹರ್ಷಿಗಳು, ಸಿದ್ಧಿ ಪುರುಷರು, ಸುರೂಪರು, ವಿಶ್ವರೂಪರು, ಅದ್ಭುತರೂಪರು, ಶಿರದಲ್ಲಿ ಕೊಂಬುಳ್ಳಂಥ ಶಿವಗಣಗಳು ಭೂತಗಣಗಳು, ಜಟಾಧಾರಿಗಳು ಭಸ್ಮಧಾರಿಗಳು, ವಿಚಿತ್ರ ರೂಪ ಸ್ವರೂಪರು, ಗುಡಾಣದಂತೆ ದೊಡ್ಡದಾದ ಡೊಳ್ಳು ಹೊಟ್ಟೆಯುಳ್ಳವರು, ಅಗಲವಾದ ಕಿವಿಯುಳ್ಳವರು, ಸ್ಮಶಾನವಾಸಿಯಾದ ಶಿವನಿಗೆ ಪ್ರಿಯವೋ ಎಂಬಂತೆ ರುದ್ರಭೂಮಿಯಲ್ಲಿ ಬಿದ್ದಿದ್ದ ಮುಂಡಗಳನ್ನು ಮಾಲೆ ಹಾಕಿಕೊಂಡು ಕುಣಿಯುತ್ತಿದ್ದರು. ನಾನಾ ರೀತಿಯ ಶಿವಗಣಗಳು ಜಿತೇಂದ್ರಿಯರು, ರುದ್ರಾಕ್ಷಮಾಲೆಯನ್ನು ಧರಿಸಿರುವ ಜಂಗಮರು, ವಿಭೂತಿ ಪುರುಷರು, ಸಹಸ್ರ ಸಹಸ್ರಾರು ವರ್ಷಗಳಿಂದಲೂ ಶಿವನಿಗೆ ಪ್ರಿಯವಾದ "ಓಂಕಾರ" ನಾದ ನಾಮಸ್ಮರಣೆಯಿಂದಲೆ ಆತ್ಮಶಕ್ತಿಯನ್ನು ಬೆಳೆಸಿಕೊಂಡು ಬಂದ ಧೃಡ ಸಂಕಲ್ಪಗಳು ಶಿವನನ್ನು ಭಕ್ತಿಯಿಂದ ಪೂಜಿಸುತ್ತಾ ಇದ್ದರು.

ಆ ಮನೋಹರವಾದ ಶಿವಲೋಕದ ಎಲ್ಲೆಡೆಯಲ್ಲೂ ಕೇಳಿ ಬರುತ್ತಿದ್ದ "ಓಂ ನಮಃ ಶಿವಾಯ" ಎಂಬ ಶಿವ ಪಂಚಾಕ್ಷರಿ ಮಂತ್ರವು ಕರ್ಣಾನಂದವನ್ನುಂಟು ಮಾಡುತ್ತಿತ್ತು.

ಅಂತಹ ಪ್ರಕೃತಿ ಸೌಂದರ್ಯದಿಂದ ಕೂಡಿದ ಕೈಲಾಸ ಶಿಖರದಲ್ಲಿ ಕೈಲಾಸ ಪರ್ವತವನ್ನೇ ತನ್ನ ಪೀಠವನ್ನಾಗಿ ಮಾಡಿಕೊಂಡು, ವ್ಯಾಘ್ರ ಚರ್ಮವನ್ನೇ ವಸ್ತ್ರವನ್ನಾಗಿ ಮಾಡಿಕೊಂಡು, ವಿಭೂತಿ ರುದ್ರಾಕ್ಷಿಗಳನ್ನೆ ಆಭರಣವನ್ನಾಗಿ ಮಾಡಿಕೊಂಡು, ಕೊರಳಲ್ಲಿ ಧರಿಸಿದ್ದ ನಾಗಸರ್ಪವನ್ನೆ ದಿವ್ಯ ಕಂಠಾಭರಣವನ್ನಾಗಿ ಮಾಡಿಕೊಂಡು, ಜಟೆಯಲ್ಲಿ ಗಂಗೆಯನ್ನು ಚಂದ್ರನನ್ನು ಹೊಂದಿದವನಾಗಿ ತ್ರಿಲೋಕಗಳೂ ಸಹ ತನ್ನಲ್ಲಿಯೇ ಅಡಿಗಿಹುದೋ ಎಂಬಂತೆ ದಿವ್ಯ ಶೋಭಿತನಾಗಿ ಜಗತ್ ರಕ್ಷಣೆಗಾಗಿ ಸದಾ ಬ್ರಹ್ಮಚರ್ಯೆಯನ್ನು ಪರಿಪಾಲಿಸುತ್ತಾ ನಿಶ್ಚಲ ನಿರ್ಮಲಚಿತ್ತನಾಗಿ ತ್ರಿಲೋಕಗಳಿಗೂ ಮಹಾ ಮಾಣಿಕ್ಯವೋ ಎಂಬ ಅತ್ಯಂತ ಕಾಂತಿಯುಳ್ಳವಳೇ ಆದ ಜಗನ್ಮಾತೆಯಾದ ಪಾರ್ವತಿ ದೇವಿ, ಗಣಪ ನಂದಿ ಭೃಂಗಿಯರೊಡನೆ ಸದ್ಭಕ್ತರ ಇಷ್ಟಾರ್ಥವನ್ನು ನೆರವೇರಿಸುತ್ತ ವಿರಾಜಿಸುತ್ತಿದ್ದನು - ಆ ಮಹಾಮಹಿಮಾಲೋಲನಾದ ಮಹಾದೇವನು.

ಆ ದಿನ ಶಿವನ ವಿಶೇಷ ದಿನವೇ ಆದ್ದರಿಂದ ಮಹಾದೇವನನ್ನು ಸಂತೋಷ ಪಡಿಸುವ ಸಲುವಾಗಿ ಇಂದ್ರಲೋಕದ ನಿತ್ಯ ಯೌವನೆಯರಾದ ಅಪ್ಸರೆಯರು, ಗಂಧರ್ವಲೋಕದ ಗಂಧರ್ವ ಕನ್ಯೆಯರು ನಾಗಲೋಕದ ನಾಗಕನ್ಯೆಯರು ಬಹು ಸುಂದರಾಂಗನೆಯರಾದ ಅನೇಕ ದೇವತಾ ಕನ್ಯೆಯರು ತಮ್ಮ ತಮ್ಮ ಅಲೌಕಿಕ ಸೌಂದರ್ಯಕ್ಕೆ ತಕ್ಕಂತೆ ವೈಭವ ಪೂರ್ಣವಾದ ವಸ್ತ್ರಾಭರಣವನ್ನು ಧರಿಸಿಕೊಂಡು ಶಿವಲೋಕಕ್ಕೆ ಬಂದಿದ್ದರು.

ನಾಟ್ಯಲೋಲ ನಟನಾಪ್ರಿಯರಾದ ಶಿವಪಾರ್ವತಿಯನ್ನು ಅನಂತವಾಗಿ ಸ್ತುತಿಸುತ್ತಾ ಅತ್ಯಮೋಘವಾದ ನೃತ್ಯದಿಂದಲೂ, ಸುಮಧುರವಾದ ಗಾನದಿಂದಲೂ ಶಿವನ ಮಹಿಮೆಯನ್ನು ಹಾಡುತ್ತ ಕೊಂಡಾಡುತ್ತಿದ್ದರು. ಅವರುಗಳ ಅಭೂತಪೂರ್ವ ನೃತ್ಯಗಾನಕ್ಕೆ ಶಿವಪಾರ್ವತಿಯರು ಗಣಪ ನಂದಿ ಭೃಂಗಿಯರಾದಿಯಾಗಿ ಎಲ್ಲರೂ ಸಂಪ್ರೀತರಾಗಿ ತಲೆದೂಗುತ್ತಿದ್ದರು.

ಆ ಅಮೋಘ ನೃತ್ಯಗಾನಕ್ಕೆ ಮಾರುಹೋಗಿ, ಅಲ್ಲಿಯೇ ಇದ್ದ ಗಣಪತಿ, ಕುಮಾರ ಸುಬ್ರಹ್ಮಣ್ಯ, ನಂದಿ ಭೃಂಗಿಯರೂ ಸಹ ಮೈಮರೆತು ತಾವೂ ಸಹ ಭಕ್ತಿಯಿಂದ ಕುಣಿಯಲು ಪ್ರಾರಂಭಿಸಿದ್ದರು.

ಆ ಅಮೋಘ ನೃತ್ಯವು ಜಗತ್ ಮಾತಾಪಿತೃಗಳಾದ ಪಾರ್ವತಿ-ಪರಮೇಶ್ವರರಿಗೆ ಎಂದಿಲ್ಲದ ಸಂತೋಷವನ್ನುಂಟು ಮಾಡಿತ್ತು.

ಆ ಸಮಯಕ್ಕೆ ಸರಿಯಾಗಿ ದೇವಮುನಿಗಳಾದ ನಾರದರು ಶಿವಲೋಕಕ್ಕೆ "ನಾರಾಯಣ, ನಾರಾಯಣ" ಎನ್ನುತ್ತ ಆಗಮಿಸಿದರು.

ಆಗ ನಾರದರನ್ನು ನೋಡಿದ ಪರಮೇಶ್ವರ ವಿನೋದ ಪ್ರಿಯರಾದ ಅವರನ್ನು ಕುರಿತು ವಿನೋದವಾಗಿಯೇ ಸಂಭಾಷಿಸುತ್ತ "ಓ, ಇದೇನು ನಾರದರು. ನಾರಾಯಣ, ನಾರಾಯಣ ಎನ್ನುತ್ತ ವೈಕುಂಠಲೋಕಕ್ಕೆ ಹೋಗಬೇಕಾದವರು ........, ತಪ್ಪು ಹೆಜ್ಜೆ ಹಾಕಿ ಈ ನನ್ನ ಶಿವಲೋಕಕ್ಕೆ ಬಂದಿರುವ ಹಾಗೆ ಕಾಣುತ್ತಿದೆಯಲ್ಲ" ಎಂದು ಮಂದಹಾಸದಿಂದ ನಗುನಗುತ್ತ, ನುಡಿದ.

ಆದರೆ ನಾರದರು ಶಿವನಾಡುತ್ತಿದ್ದ ಮಾತಿಗೆ ಕಿವಿಗೊಡದೆ, ಮೊದಲಾಗಿ ಆ ಜಗನ್ಮಾತೆಯಾದ ಪಾರ್ವತಿದೇವಿಯನ್ನೇ ನೋಡಿದರು. ನಂತರ ಜಗತ್ ದಂಪತಿಗಳಾದ ಇಬ್ಬರನ್ನು ಕಣ್ತುಂಬ ನೋಡುತ್ತ ಆನಂದಬಾಷ್ಪ ಹರಿಸುತ್ತಾ ಸಂತೋಷದಿಂದ, "ಪರಮೇಶ್ವರ ನಮೋನ್ನಮಃ, ಮೆಚ್ಚಿದೆ, ನೀನು 'ಅರ್ಧನಾರೀಶ್ವರ'ನೆಂಬ ಬಿರುದು ಪಡೆದಿರುವುದಕ್ಕೂ ಸಾರ್ಥಕವಾಗಿದೆ ವಿಶ್ವೇಶ್ವರ," ಎಂದು ಹೊಗಳಿಕೆಯ ಹೆಗ್ಗಳಿಕೆಯಲ್ಲಿ ಹುರಿದುಂಬಿಸಿ ನುಡಿದರು ನಾರದರು.

ನಾರದರ ಹೊಗಳಿಕೆ ಮಾತಿಗೆ ಪರಮೇಶ್ವರನು ವಿಸ್ಮಿತನಾಗದಿರಲಿಲ್ಲ.

"ಏನು ನಾರದ, ಇಂದೇಕೇ ನೀನು ವಿಚಿತ್ರವಾಗಿ ಮಾತನಾಡುತ್ತಿರುವೆ, ಬಹುಶಹ ಏನೋ ಮಹತ್ತರವಾದ ಹೊಸ ವಿಷಯ ತಂದಿರುವ ಹಾಗೆ ಕಾಣುತ್ತಿದೆಯಲ್ಲ" ಎಂದು ಪಕ್ಕದಲ್ಲಿಯೇ ಇದ್ದ ಪಾರ್ವತಿಯ ಮುಖವನ್ನೇ ನೋಡುತ್ತ ನುಡಿದ.

"ಹಾಂ, ಹೌದು. ಮಹತ್ತರರ ಮಾತ್ರವೇ ಅಲ್ಲ, ದೇವಲೋಕದ ಮರ್ಯಾದೆಯ ವಿಷಯವೆಂದೂ ಸಹ ಹೇಳಬೇಕು"

"ಅಂತಹ ಪ್ರಮಾದವಾದರೂ ಏನು ನಾರದ"

ಎಂದು ವಿನೋದವಾಗಿಯೇ ಪ್ರಶ್ನಿಸಿದನು ಆ ಲೋಕೇಶನಾದ ಈಶ.

"ಈ ನಾರದರೆ ಹೀಗೇ. ವಿಶೇಷ ವಿಷಯಗಳನ್ನು ಬೇಗ ಹೇಳೋದೇ ಇಲ್ಲ....... ಸತಾಯಿಸಿ ಸತಾಯಿಸಿ ಹೇಳುವುದೆ ಅವರ ಸ್ವಭಾವ" ಎಂದು ಮಧ್ಯೆ ಬಾಯಿಹಾಕಿ ನುಡಿದಳು ಪಾರ್ವತಿ.

"ಇಲ್ಲ ಜಗನ್ಮಾತೆ........... ಹೇಳಿ ಬಿಡುತ್ತೇನೆ. ಈ ದಿನ ಭೂಲೋಕದಲ್ಲಿ ಧಾರಾನಗರ ದೇಶವನ್ನಾಳುತ್ತಿರುವ ಭೋಜರಾಜನ, ಹುಟ್ಟಿದ ಹಬ್ಬವಂತೆ." ನಾರದರು ವಿಷಯ ವಿವರಿಸಲು ಆರಂಭಿಸಿದರು.

"ಅದೋ ವಿಷಯ ......... ಹಾಗಿದ್ದರೆ"

"ಓ ನಾರದರಿಗೆ ಭೂಲೋಕದ ಪುಷ್ಕಳ ಊಟದ ಮೇಲೆ ಬಯಕೆಯಾಗಿದೆ ಎಂದು ಕಾಣುತ್ತದೆ. ಅದಕ್ಕೆ ನಮ್ಮನ್ನು ಕರೆದಕೊಂಡು ಹೋಗಲು ಬಂದಿದ್ದಾರೋ ಏನೋ ........." ಎಂದನು ಮಹದೇವ ವಿನೋದವಾಗಿಯೇ ನಗುನಗುತ್ತ.

"ಇಲ್ಲ ದೇವಿ ಇಲ್ಲ. ನನಗೆ ಸದಾ ಕಾಲವೂ ಹರಿಹರರ ನಾಮಸ್ಮರಣೆ ಮುಂದೆ ಮತ್ಯಾವ ಊಟೋಪಚಾರಗಳು ರುಚಿಸದು. ಜಗನ್ಮಾತೆ. ಈಗ ನಾನು ಹೇಳುತ್ತಿರುವ ವಿಷಯ ಜಗನ್ಮಾತ ಪಿತೃಗಳಾದ ನೀವಿಬ್ಬರೂ ಹಿಂದೆ ಕೇಳಿಯೂ ಇಲ್ಲ, ಮುಂದೆ ಕೇಳುವುದು ಇಲ್ಲ."

"ಅದೇನು ಬೇಗ ಹೇಳು ನಾರದ."

"ಹಾಂ. ಮಹಾದೇವ. ಭೂಲೋಕದಲ್ಲಿ ಇಂದು ನಡೆಯಲಿರುವ ಆ ಭೋಜರಾಜನ ಹುಟ್ಟಿದ ಹಬ್ಬಕ್ಕೆ ಸಾಕ್ಷಾತ್ ಲಕ್ಷ್ಮೀ ಸರಸ್ವತಿಯರೂ ಹೊರಟು ಹೋಗಿದ್ದಾರೆ - ಅದರಲ್ಲೂ ಯಾವುದೆ ಆಮಂತ್ರಣವಿಲ್ಲದೆ. ಜಗನ್ಮಾತೆಯರಾದ ಲಕ್ಷ್ಮೀ ಸರಸ್ವತಿಯರೆಲ್ಲಿ? ಇದು. ನಮ್ಮ ಈ ಮೂರುಲೋಕಗಳಿಗೆ ಅವಮಾನ ಕರವಲ್ಲವೆ ಮಹಾದೇವ" ಎಂದು ಉದ್ರೇಕ ತಂದು ಕೊಂಡೇ ನುಡಿದರು ನಾರದರು. ಆಗ ಪರಮೇಶ್ವರನು ನಾರದರಿಗೆ ವಿವೇಕದ ಮಾತುಗಳಿಂದ ಹೇಳುತ್ತಾ "ಎಲೈ ನಾರದರೇ. ಭೂಲೋಕದ ಮಹಾಧರ್ಮಿಷ್ಟನು ಪುಣ್ಯಪುರುಷನೂ ಬ್ರಹ್ಮಾಂಶ ಸಂಭೂತನೂ ಆದ ಆ ಭೋಜರಾಜನ ಬಗ್ಗೆ ಅಂತಹ ಅಗೌರವವನ್ನು ತೋರಿಸಬೇಡ. ಆತ ಮಾನವನೆಂಬ ನಿನ್ನ ಕಲ್ಪನೆಯಲ್ಲವೆ? ಆ ಚಕ್ರವರ್ತಿ ಸಾರ್ವಭೌಮನಾದ, ಆ ಭೋಜರಾಜನ ಮಹಿಮೆ ಅಪಾರ, ಅಷ್ಟೇ ಅಲ್ಲ, ಆತನ ಕೀರ್ತಿ ನಮ್ಮ ತ್ರಿಲೋಕಗಳನ್ನು ವ್ಯಾಪಿಸಿದ್ದು ಅವುಗಳನ್ನು ಮೀರಿ ಚತುರ್ದಶ ಲೋಕಗಳಲ್ಲೂ ವ್ಯಾಪಿಸಿಬಿಟ್ಟಿದೆ" ಎಂದು ಕಟುವಾಗಿ ನುಡಿದನು ಆ ಓಂ ಕಾರಪ್ರಿಯನು.

"ಹಾಗಾದರೆ ಅಂತಹ ಪುಣ್ಯಪುರುಷನ, ಜನ್ಮದಿನದ ಸಮಾರಂಭಕ್ಕೆ ಲಕ್ಷ್ಮೀ ಸರಸ್ವತಿಯರು ಹೋದಂತೆ ನಾವುಗಳು ಹೋಗಬಹುದಲ್ಲ" ಎಂದು ಪಾರ್ವತಿಯು ತನ್ನ ಇನಿಯನನ್ನು ಕುರಿತು ಹೇಳಿದಳು.

ಆಗ ಮಹೇಶ್ವರನು ಪಾರ್ವತಿಯಲ್ಲಿ "ನನಗೂ ಸಹ ಆ ರೀತಿ ಪ್ರೇರಣೆಯಾಗುತ್ತಿದೆ ಮಹೇಶ್ವರಿ.ಹೇಗಿದ್ದರು ನಾನೂ ಸಹ ಭೂಲೋಕಕ್ಕೆ ಹೋಗಿ ಬಹಳ ವರ್ಷಗಳೇ ಆಗಿಹೋಯಿತು. ಭೋಜರಾಜ ವಿಷ್ಣು ಭಕ್ತನು. ಮಾತ್ರವಲ್ಲದೆ ನನ್ನ ಪರಮ ಭಕ್ತನು ಹೌದು. ಆದ್ದರಿಂದ ನಾವಿಬ್ಬರೂ ಆ ಭೋಜರಾಜನ ಹುಟ್ಟಿದ ಹಬ್ಬಕ್ಕೆ ಹೋಗಿ ಅಪೂರ್ವವಾದ ಬಳುವಳಿಯನ್ನು ಕೊಟ್ಟು ಬರೋಣ ನಡೀ" ಎಂದನು.

ಮಹದೇವನ ಮನೋಭಿಪ್ರಾಯಕ್ಕೆ ಅಡೆತಡೆ ಉಂಟೆ? ತನ್ನ ಭಕ್ತನಾದ ಭೋಜರಾಜನ ಹುಟ್ಟು ಹಬ್ಬದಲ್ಲಿ ಭಾಗವಹಿಸಲು ಅವನೂ ಆಸಕ್ತಿಯಿಂದಲೇ ಇದ್ದ.

ನಾರದರ ಮಾತಿಗೆ ಮುಂದೆ ಅವಕಾಶವೇ ಇರಲಿಲ್ಲ.

ಆದರೂ "ಬಳುವಳಿ" ಎಂಬ ಶಬ್ಧ ನಾರದರ ಕಿವಿಗೆ ಬೀಳುತ್ತಿದ್ದಂತೆ ಅವರ ಹೃದಯದಲ್ಲಿ ಒಂದು ರೀತಿಯ ಕೋಲಾಹಲವುಂಟಾಗದಿರಲಿಲ್ಲ.

ಆಗ ಪಾರ್ವತಿಯೊಡನೆ ಹೇಳುತ್ತಾ "ಹಾಂ, ಮಹಾಮಾತೆ, ಜಗನ್ಮಾತೆ, ನೀವಿಬ್ಬರೂ ಭೂಲೋಕಕ್ಕೆ ಆ ಭೋಜರಾಜನ ಅರಮನೆಗೆ ಹೋಗುವುದರಲ್ಲಿ ಅಭ್ಯಂತರವಿಲ್ಲ, ಆದರೆ........

ನಾರದರು ಅನುಮಾನಿಸುತ್ತಲೇ ಹೇಳಿದರು.

"ಆದರೇನು ನಾರದರೆ" ಪಾರ್ವತಿ ಹೇಳಿದಳು.

"ನನಗೊಂದು ಸಂದೇಹ ತಾಯಿ"

"ಏನು ಹೇಳಿ"

"ಆ ಭೋಜರಾಜನ ಹುಟ್ಟು ಹಬ್ಬಕ್ಕೆ ಹೋದಾಗ ಭಕ್ತರಿಗೆ ಕೇಳಿದ್ದನ್ನು, ಕೊಡುವ ಮಹದೇವರು, ಭೋಜರಾಜನಿಗೆ ಕೊಡುವ ಉಡುಗೊರೆ ಎಲ್ಲರಿಗಿಂತಲೂ ಉತ್ಕೃಷ್ಟವಾಗಿರಬೇಕೆಂದು ಮಹದೇವ ನಿರ್ಧರಿಸಿ ಜಗತ್ತೇ ಆಶ್ಚರ್ಯ ಪಡುವಂತಹ ವರ ನೀಡಿಬಿಟ್ಟರೆ? ಈ ಹಿಂದೆ ರಾವಣನಿಗೆ ತನ್ನ ಆತ್ಮಲಿಂಗವನ್ನು ಕೊಟ್ಟಂತೆ? "ಅದೇ ನನಗೆ ಯೋಚನೆಯಾಗಿದೆ ತಾಯಿ" ಎಂದು ನಾರದರು ತಮ್ಮ ಸಂದೇಹ ವ್ಯಕ್ತಪಡಿಸಿದರು.

ನಾರದರಲ್ಲಿ ಮಾತಿನಲ್ಲಿ ಸತ್ಯಾಂಶವಿತ್ತು, ತಮ್ಮ ಸಂದೇಹ ನಿವಾರಣೆಗಾಗಿ ಮತ್ತೆ ಪಾರ್ವತಿದೇವಿಯಲ್ಲಿ "ಎಲ್ಲಕ್ಕಿಂತ ಹೆಚ್ಚಾಗಿ, ದೇವದಾನವರ 'ಅಮೃತ ಮಥನ'ದ ಸಮಯದಲ್ಲಿ ಶಿವನು ಹಾಲಾ ಹಲವನ್ನು ಕುಡಿದವನಲ್ಲವೆ? ಹಾಗೆಯೇ ಅಲ್ಲಿ ಮಹದೇವನು ಭೋಜರಾಜನ ಭಕ್ತಿಗೆ ಮೆಚ್ಚಿ ಕೊಡುವ ಉಡುಗೊರೆ ಬಗ್ಗೆ ಎಚ್ಚರದಿಂದ ಇರಬೇಕು ತಾಯಿ" ಎಂದನು ನಾರದ.

"ಹೇಗಿದ್ದರೂ ನಾವಿಬ್ಬರು ಈಗ, ಭೋಜನ ಆಸ್ಥಾನಕ್ಕೆ ಹೊರಟಿದ್ದೇವೆ. ನಮ್ಮ ಜೊತೆಯಲ್ಲಿ ನೀವೂ ಏಕೆ ಬರಬಾರದು, ನಾರದ ಮುನೀಂದ್ರರೆ ......... ಖಂಡಿತವಾಗಿ ನೀವು ಬನ್ನಿ ........... ನನ್ನ ಈ ಪತಿದೇವರು ಏನೊಂದನ್ನೂ ಆ ಭೋಜರಾಜನಿಗೆ ಕೊಡದ ಹಾಗೆ ನೋಡಿಕೊಳ್ಳಿ" ಎಂದು ಮುಗುಳ್ನಗುತ್ತಾ, ಹೇಳಿದಳು ಆ ಜಗನ್ಮಾತೆ.

"ಸರಿಹೊಯ್ತು.... ನಿಮ್ಮಿಬ್ಬರ ಮಧ್ಯೆ ನಾನು ...... ಅದೇನೋ ಭೂಲೋಕದಲ್ಲಿ ಹೇಳುತ್ತಾರಲ್ಲ .......... 'ಶಿವಪೂಜೆ ಮಧ್ಯೆ .............' ಎಂದು ಶಿವನನ್ನೇ ನೋಡುತ್ತ ಹೇಳಿದರು ನಾರದರು.

ಅನಂತರ ನಾರದರು ತಮ್ಮ ಮನದ ಇಂಗಿತವನ್ನು ಹೀಗೆ ವ್ಯಕ್ತಪಡಿಸಿದರು.

"ಸರಿಸರಿ ನಿರ್ಬಂದವೇನೂ ಇಲ್ಲ .......... ಆದರೆ.......... ಹೇಳುತ್ತೇನೆ. ನೀವಿಬ್ಬರೂ ಈ ನಿಮ್ಮ ನಿಜರೂಪವನ್ನು ತ್ಯಜಿಸಿ ಸುಂದರ ಯೌವನ ಭರಿತ ತೇಜಸ್ವಿ ನಾಟ್ಯ ದಂಪತಿಗಳಾಗಿ ಸಭೆಗೆ ಹೋಗಬೇಕು" ಎಂದು ಸಲಹೆ ನೀಡಿದರು ನಾರದರು.

ಆಗ ಪರಮೇಶ್ವರನು ನಾರದರನ್ನು ಕುರಿತು ಹೇಳುತ್ತ,

"ಅಮೋಘ ನಾಟ್ಯವೇನೋ ನನ್ನಿಂದ ಅಲ್ಲಿ ಸಾಧ್ಯವಾಗಬಹುದು. ಆದರೆ ನನ್ನ ನಾಟ್ಯಕ್ಕೆ ನಿನ್ನ ಸಂಗೀತ ಮತ್ತು ನಟ್ಟುವಾಂಗ ಜೊತೆಗೂಡಲೇ ಬೇಕು ನಾರದ."

"ಆದರೆ ನಾನೂ ಸಹ ನಿಮ್ಮ ಜೊತೆಯಲ್ಲಿ ಬರಲೇಬೇಕೆ ಪರಮೇಶ್ವರಾ"?

ಎಂದು ವಿನೋದದಿಂದಲೇ ನಾರದರು ಪ್ರಶ್ನಿಸಿದರು.

ಮಹದೇವನು "ಹೌದು........" ಎಂದು ತಲೆ ಅಲ್ಲಾಡಿಸಿದ.

ಕ್ಷಣಾರ್ಧದಲ್ಲಿ ಶಿವಪಾರ್ವತಿಯರು, ನಾರದರು, ಆ ಸ್ಥಳದಿಂದ ಅಂತರ್ಧಾನರಾಗಿದ್ದರು.

# ಧಾರಾನಗರ

ಆರ್ಯಾವರ್ತದ ಪವಿತ್ರ ಭಾರತ ದೇಶದ ಬಹು ಧರ್ಮಿಷ್ಠ ರಾಜನೆನಿಸಿ, .... ಮೇರುಕೀರ್ತಿಗೆ ಪಾತ್ರನಾಗಿದ್ದ ಭೋಜರಾಜನ ನವರತ್ನ ಖಚಿತ ಬಂಗಾರದ ಅರಮನೆಯು, ದೇವಲೋಕದ ಅಮರಾವತಿ ಪಟ್ಟಣದ ಇಂದ್ರದೇವನ ಅರಮನೆಗಿಂತಲೂ ಅತಿಶಯವಾದ ವೈಭವದಿಂದ ಕಂಗೊಳಿಸುತ್ತಿತ್ತು. ಅಷ್ಟೇ ಏಕೆ? ಮೂರು ಲೋಕದಲ್ಲೂ ಸಹ ಅಂತಹ ಅರಮನೆ ಇನ್ನೊಂದಿಲ್ಲ ಎನ್ನುವುದರಲ್ಲಿ ಅತಿಶಯೋಕ್ತಿ ಇರಲಿಲ್ಲ.

ಆ ರಮಣೀಯ ಮನಮೋಹಕ ವೈಭವದ ಅರಮನೆಯೊಳಗೆ ಪ್ರವೇಶ ಮಾಡುತ್ತಿದ್ದಂತೆ. "ಇದೇನು! ಸಾಕ್ಷಾತ್ ಕುಬೇರನ ರಾಜಸಭಾ ಭವನವೋ" ಎಂಬಂತೆ ಭಾಸವಾಗಿತ್ತು.

ಆ ವಿಶಾಲ ಸಭಾಂಗಣದ ನಾಲ್ಕು ದಿಕ್ಕುಗಳಲ್ಲೂ ನಾಲ್ಕು ಚಿನ್ನದ ಬಾಗಿಲುಗಳು. ಆ ಸಭಾ ಭವನದ ಮಹಾದ್ವಾರವು ಸುಂದರ ತೋರಣಗಳಿಂದಲೂ ಸುಗಂಧವನ್ನು ಹೊರಸೂಸುವ ಬಗೆಬಗೆಯ ಪುಷ್ಪಹಾರಗಳಿಂದಲೂ ಶೃಂಗಾರಮಯವಾಗಿ ಅಲಂಕರಿಸಲ್ಪಟ್ಟಿತ್ತು.

ಆ ಸಭಾಭವನವು - ಸುಮಾರು ಇಪ್ಪತ್ತು ಯೋಜನೆ ಉದ್ದ ಐದು ಯೋಜನೆ ಅಗಲಉಳ್ಳ ಮಹಾಕಾಂತಿಯಿಂದ ಕೂಡಿತ್ತು. ವಜ್ರಖಚಿತವಾದ ಒಂದು ಸಾವಿರ ಬಂಗಾರದ ಕಂಬಗಳಿಂದಲೂ, ಅವುಗಳಿಗೆ ಹೊಂದಿಕೊಂಡಂತೆ ಐದು ನೂರು ಬಂಗಾರದ ಪ್ರಭಾವಳಿಗಳಿಂದಲೂ ನಿರ್ಮಾಣವಾಗಿತ್ತು. ಅಪೂರ್ವ ವಾಸ್ತು ಶಿಲ್ಪ ಕಲಾವೈಭವದಿಂದ ಕೂಡಿದ ಚೌಕಾಕಾರದ ಒಂದೊಂದೂ ಬಂಗಾರದ ಕಂಬಗಳು ಸಹ, ಅವುಗಳನ್ನು ನಿರ್ಮಾಣಮಾಡಿದ ಚಿನ್ನದ ಕೆಲಸದ ರೂವಾರಿಗಳು, ಒಬ್ಬರಿಗೊಬ್ಬರು ಸ್ಪರ್ಧಿಸಿ ತಮ್ಮ ತಮ್ಮ ಕರಕುಶಲತೆಯ ನೈಪುಣ್ಯತೆಯನ್ನು ಪಣವಾಗಿಟ್ಟು ನಿರ್ಮಾಣ ಮಾಡಿರುವರೋ ಎಂಬಂತೆ ತೋರುತ್ತಿತ್ತು. ಯಾವುದೇ ಎರಡು ಕಂಬಗಳ ನಡುವೆ ಕೂದಲೆಳೆಯಷ್ಟೂ ಸಹ ವ್ಯತ್ಯಾಸವಿಲ್ಲದ ರೀತಿಯಲ್ಲಿ ಕುಸುರಿ ಕೆಲಸಗಳಿಂದ ಬಹು ರಂಜನೀಯವಾಗಿ ಹೊಳೆಯುತ್ತಿತ್ತು. ಕಂಭಗಳ ಸುತ್ತಲೂ ಬಗೆ ಬಗೆಯ ಹೂ, ಎಲೆ ಬಳ್ಳಿಗಳ ಅಪೂರ್ವ ವೈವಿಧ್ಯಮಯ ವಿನ್ಯಾಸಗಳ ಸೊಬಗು ನೋಡುಗರನ್ನು ಮಾಯಾ ಲೋಕಕ್ಕೆ ಕೊಂಡೊಯ್ಯುವಂತೆ ಚಿತ್ತಾಕರ್ಷಕವಾಗಿತ್ತು

ಬಗೆಬಗೆಯ ಆಕರ್ಷಕ ಚಿತ್ರಗಳನ್ನು ಬಿಡಿಸಿದ, ಆನಂದವನ್ನು ಉಂಟುಮಾಡುವ ಮೆತ್ತನೆ ಕಂಬಳಿಯನ್ನು ಸಭಾಭವನದ ಉದ್ದಕ್ಕೂ ಹಾಸಲಾಗಿತ್ತು. ಸಭಾಂಗಣಕ್ಕೆ ಪೂರ್ವಾಭಿಮುಖವಾಗಿ ದುಂಡುದುಂಡಾದ ಕಲಾತ್ಮಕವಾದ ಇಪ್ಪತ್ತೆಂಟು ಬಂಗಾರದ ಕಂಬಗಳ ಆದಾರದಿಂದ ಕೂಡಿದ, ಗೋಮೇಧಕ, ವಜ್ರ ವೈಡೂರ್ಯ ಪುಷ್ಪರಾಗ

ಮುಂತಾದವುಗಳಿಂದ ಕೂಡಿದ ಚಿನ್ನದ ಪ್ರಭಾವಳಿಗಳಿಂದ ಶೋಭಾಯಮಾನವಾದ ರಾಜವೇದಿಕೆ ವೈಭವದಿಂದ ಬೆಳಗುತ್ತಿತ್ತು.

ಕಣ್ಮನ ತಣಿಸುವ ಸಾಲು ಮೆಟ್ಟಿಲುಗಳು ಹಾಲುಬಣ್ಣದ ಅಮೃತಶಿಲೆಯಿಂದ ನಿರ್ಮಾಣಗೊಂಡಿದ್ದು, ರಾಜವೇದಿಕೆಯ ವೈಭವಕ್ಕೆ ಮತ್ತಷ್ಟು ಆಕರ್ಷಣೆ ತಂದಿತ್ತು. ಆ ವಿಶಾಲ ಸಾಲು ಮೆಟ್ಟಿಲುಗಳ ಅಡಿಯಿಂದ ವೇದಿಕೆಯವರೆಗೂ ಕೆಂಪು ಅಂಚಿನ ಗಿಣಿ ಹಸಿರು ಬಣ್ಣದ ರತ್ನಗಂಬಳಿಯು ರಾಜ ಸಿಂಹಾಸನದವರೆಗೂ ಅಲಂಕಾರಮಯವಾಗಿ ಹಾಸಲ್ಪಟ್ಟಿತ್ತು.

ದೇವಶಿಲ್ಪ ವಿಶ್ವಕರ್ಮನು ಭೋಜರಾಜನಿಗೋಸ್ಕರ , ಅತುಳೈಶ್ವರ್ಯ ಭಂಡಾರವೆನಿಸಿದ ಮೈನಾಕ ಪರ್ವತದಿಂದ ಅಪೂರ್ವ ನೀಲಮಣಿ - ನವರತ್ನ ವಜ್ರವೈಡೂರ್ಯಾದಿ ಸುವರ್ಣಭಂಡಾರವನ್ನೇ ಹೋತ್ತು ತಂದು ಬಹುಕಲಾತ್ಮಕವಾಗಿ ನಿರ್ಮಿಸಿದನೋ ಎಂಬಂತೆ ಭೋಜರಾಜನ ಸಿಂಹಾಸನವು ಅದ್ಭುತವಾಗ ಹೊಳೆಯುತ್ತಿತ್ತು.

ದೇವರಾಜನಾದ ಇಂದ್ರದೇವನು ಒಂದು ವೇಳೆ ಭೂಲೋಕಕ್ಕೆ ಬಂದು ಭೋಜರಾಜನ ಈ ಅರಮನೆ ಸಿಂಹಾಸನಗಳ ವೈಭವ ವೈಖರಿಯನ್ನು ಕಂಡಿದ್ದೇ ಆದರೆ, ತನ್ನ ಇಂದ್ರ ಪದವಿಯನ್ನೇ ಧಿಕ್ಕರಿಸಿ ಭೋಜರಾಜನ ಆ ಸ್ಥಾನದಲ್ಲಿ ಶಾಶ್ವತವಾಗಿ ಇದ್ದು ಬಿಡುತ್ತಿದ್ದನೋ ಎಂಬಂತೆ ಭಾಸವಾಗುತ್ತಿತ್ತು.

ಹಾಗೆ ವೈಭವದಿಂದ ಕೂಡಿದ ನವರತ್ನ ಭೂಷಿತವಾದ ಆ ರಾಜಸಭಾ ಭವನದ ಖ್ಯಾತಿ ತ್ರಿಲೋಕಗಳಲ್ಲಿಯೂ ಸಹ ವ್ಯಾಪಿಸಿತ್ತು.

ಸಭಾಭವನದ ವೈಭವವು ಈ ರೀತಿಯದಾದರೆ ಇನ್ನು ಭೋಜರಾಜನ ಅರಮನೆಯ ಹೊರನೋಟ ಅತ್ಯಂತ ಆಹ್ಲಾದವನ್ನುಂಟು ಮಾಡುತ್ತಿತ್ತು. ಬಹು ಯೋಜನಾ ವಿಸ್ತೀರ್ಣ ವಿಶಾಲವಾದ ವನಸಿರಿ. ತೇಗ, ಗಂಧ ಮುಂತಾದ ಗಗನ ಚುಂಬಿ ಮರಗಳಿಂದಲೂ, ಬಾಳೆ, ಸೀಬೆ, ಸೀತಾಫಲ, ಮಾವು ಮುಂತಾದ ಫಲಗಳಿಂದಲೂ, ಮಲ್ಲಿಗೆ, ಜಾಜಿ, ತಾಳೆ, ಸೇವಂತಿಗೆ, ಸ್ಪಟಿಕ, ಸಂಪಿಗೆ ಮುಂತಾದ ಪುಷ್ಪಗಳಿಂದಲೂ, ಶೋಭಿಸುತ್ತಿತ್ತು. ಆ ಪುಷ್ಪಗಳ ಸುಮಾಸನೆ ಆ ಸ್ಥಳವನ್ನೆಲ್ಲ ಆವರಿಸಿ ನೋಡುಗರನ್ನು ಮತ್ತರನ್ನಾಗಿ ಮಾಡಿತ್ತು.

ಅರಮನೆಯ ಮತ್ತೊಂದು ಪಾರ್ಶ್ವದ ರಮಣೀಯ ವಿಶಾಲ ಸರೋವರ ಒಂದರಲ್ಲಿ ಮರಿ ಆನೆಗಳ ಜೊತೆ ಭಾರೀ ಗಾತ್ರದ ಆನೆಗಳು ಒಟ್ಟಾಗಿ ಗುಂಪುಗೂಡಿಕೊಂಡು ಆ ಸರೋವರದಲ್ಲಿ ನೀರು ಕುಡಿಯುತ್ತಿರುವ ದೃಶ್ಯ ಕಾಣುತ್ತಿತ್ತು. ಆದರೆ ಹತ್ತಿರ ಹತ್ತಿರ ಹೋದಂತೆ ಅದೊಂದು ಕೃತಕ ಸರೋವರವಾಗಿದ್ದು ಕೃತಕ ಆನೆಗಳಾಗಿದ್ದುವೆ ಹೊರತು ಅವು ನಿಜದ ಆನೆಗಳಾಗಿರಲಿಲ್ಲ. ಅಷ್ಟೊಂದು ಸಹಜವಾಗಿ ಕಲಾಕಾರ ತನ್ನ ಪ್ರತಿಭೆಯಿಂದ ಅವುಗಳನ್ನು ನಿರ್ಮಿಸಿದ್ದ.

ಮತ್ತೊಂದೆಡೆ ಸಾಗಿ ಬಂದಂತೆ ದಷ್ಟ ಪುಷ್ಟವಾದ ನೂರಾರು ಸುಂದರ ಕುದುರೆಗಳ ಮೇಲೆ ಬಿಚ್ಚುಗತ್ತಿ, ಗುರಾಣಿ ಹಿಡಿದು ಸವಾರಿ ಮಾಡುತ್ತ ಮುನ್ನುಗ್ಗಿ ಬರುತ್ತಿದ್ದ ಶಕ್ತಿವಂತ ರಾಜಭಟರುಗಳು. ಆ ನೋಟ ಯಾವುದೋ ಶತ್ರುಗಳನ್ನು ಹಿಮ್ಮೆಟ್ಟಿಸಿ ಸದೆ ಬಡಿಯಲು ವೀರಾವೇಶದಿಂದ ಮುನ್ನುಗ್ಗಿ ಬರುತ್ತಿರುವಂತೆ ತೋರುವ ಅದ್ಭುತ ನೋಟ.... ಹತ್ತಿರ ಹತ್ತಿರ ಸಾಗಿದಂತೆ ಅವುಗಳು ಕೃತಕ ಕುದುರೆ ಗುಂಪಾಗಿ ಕೃತಕರಾದ ಭಟರುಗಳಾಗಿ ಪ್ರೇಕ್ಷಕರನ್ನು ಮೂಕ ಪ್ರೇಕ್ಷಕರನ್ನಾಗಿ ಮಾಡುವ ರೀತಿ ಚಮತ್ಕಾರ ಅವಿಸ್ಮರಣೀಯವಾಗಿತ್ತು.

ಹೀಗೆ ಒಂದಲ್ಲ ಎರಡಲ್ಲ ಹತ್ತು ಹಲವಾರು. ಪ್ರೇಕ್ಷಕರನ್ನು ಭ್ರಾಂತಿ ಲೋಕಕ್ಕೆ ಕರೆದೊಯ್ಯುವ ಮಾಯಾಮೋಡಿ ಮಾಡುವಂಥ ಮನ ಮೋಹಕ ನೋಟಗಳು. ಪ್ರೇಕ್ಷಕರ ಮನದಾಳದಲ್ಲಿ ಎಂದೆಂದೂ ಮರೆಯಲಾಗದ ಭೋಜರಾಜನ ವೈಭವಕ್ಕೆ ಮತ್ತೊಂದು ರೀತಿಯ ಸಾಕ್ಷಿ ನೋಟವಾಗಿತ್ತು.

ಭೋಜರಾಜನ ಸಂಭ್ರಮದ ಇಪ್ಪತ್ತೈದನೇ ವರ್ಷದ ಹುಟ್ಟಿದ ಹಬ್ಬಕ್ಕೆ ದೂರದೂರದ ಎಲ್ಲ ದೇಶಗಳ, ಸಾಮಂತರಾಜರುಗಳಿಗೆ ಆಹ್ವಾನ ಪತ್ರಿಕೆಯನ್ನು ಕಳುಹಿಸಿಕೊಟ್ಟು, ಪ್ರತಿ ಉತ್ತರ ತರಲು ದೀರ್ಘಕಾಲಾವಧಿ ಬೇಕಾದುದರಿಂದ ಅರಮನೆಯ ಮಹಾಮಂತ್ರಿಯು ಆ ಶುಭ ದಿನಕ್ಕೆ ಎರಡು ತಿಂಗಳು ಮುಂಚಿತವಾಗಿಯೆ ಎಲ್ಲ ರಾಜರುಗಳಿಗೆ ಸೂಕ್ತವಾದ ರೀತಿಯಲ್ಲಿ ರಾಜದೂತರ ಮೂಲಕ ರಾಜಮುದ್ರೆಯನ್ನೊಳಗೊಂಡ ರಾಯಸವನ್ನು ಮತ್ತು ಆಹ್ವಾನದ ಕರೆಯೋಲೆಯನ್ನು ಎಲ್ಲ ದೇಶದ ರಾಜರುಗಳಿಗೂ ರವಾನಿಸಿದ್ದರು.

ಉತ್ಸಾಹಿ ತರುಣ ರಾಜಧೂತರು ಆರೋಗ್ಯವಂತ, ಸುಂದರವಾದ ವಾಯುವೇಗದಲ್ಲಿ ಓಡುವ ಕುದುರೆಗಳನ್ನೇರಿ ದೇಶದೇಶಗಳಿಗೆ ಪ್ರಯಾಣ ಬೆಳೆಸಿದ್ದರು.

ಸಕಾಲಕ್ಕೆ ಸರಿಯಾಗಿ ಎಲ್ಲ ದೇಶದ ಸಾಮಂತರಾಜರುಗಳಿಗೆ ಆಹ್ವಾನ ಪತ್ರಿಕೆ ಕೈ ಸೇರಿತ್ತು.

ಶ್ರೀ ಕೃಷ್ಣನ ದ್ವಾರಕೆಯಂತೆ ಸುಂದರ ಪಟ್ಟಣವಾದ ಭೋಜನಗರಿಗೆ ಅದರಲ್ಲೂ ಭೋಜರಾಜನ ಅಭೂತ ಪೂರ್ವ ವೈಭವದ ಹುಟ್ಟಿದ ಹಬ್ಬಕ್ಕೆ ಹೊರಟು ಬರುವುದೆಂದರೆ ಆರ್ಯಾವರ್ತದ ರಾಜಮಹಾರಾಜರುಗಳಿಗೆ, ದೇವಲೋಕದ ಅಮರಾವತಿ ಪಟ್ಟಣಕ್ಕೆ ಇಂದ್ರ ಸಭೆಗೆ ಹೋಗುತ್ತಿರುವೆವೊ ಎಂಬಂತೆ ಅಮಿತಾನಂದಭರಿತರಾದರು.

ಪ್ರತಿಯೊಬ್ಬ ರಾಜನೂ ಆಹ್ವಾನ ಪತ್ರಿಕೆಯನ್ನು ಅತ್ಯಂತ ಸಂತೋಷದಿಂದ ಸ್ವೀಕರಿಸಿ - ತಾವು ಆ ಶುಭ ದಿನಕ್ಕೆ ಬರಲು ಒಪ್ಪಿಗೆಯನ್ನು ಸೂಚಿಸಿ, ಧಾರಾನಗರದಿಂದ ಬಂದಿದ್ದ ರಾಜಧೂತರ ಮೂಲಕ ಹೇಳಿ ಕಳುಹಿಸಿದ್ದರು.

ರಾಜಧೂತರು ಅಷ್ಟೇ ವಾಯುವೇಗದಿಂದ ಎಲ್ಲ ರಾಜರುಗಳ ಉತ್ತರ ಪತ್ರವನ್ನು ಗೊತ್ತು ಪಡಿಸಿಕೊಂಡಿದ್ದ ದಿನಕ್ಕೆ ಎಂಟು ದಿನ ಮುಂಚಿತವಾಗಿಯೆ ಮಹಾ ಮಂತ್ರಿಯ ಕೈ ಸೇರುವಂತೆ ಮಾಡಿದರು.

ಇದನ್ನರಿತ ಭೋಜರಾಜನು ಹರ್ಷಚಿತ್ತನಾದನು.

ಅಭೂತಪೂರ್ವವಾಗಿ ಜರುಗುವ ಭೋಜರಾಜನ ಹುಟ್ಟಿದ ಹಬ್ಬದ ಸಂಭ್ರಮದ ಅಂಗವಾಗಿ ಧಾರಾನಗರಕ್ಕೆ ಬರುವ ಅರವತ್ತನಾಲ್ಕು ದೇಶಗಳ ರಾಜರುಗಳ ಯೋಗಕ್ಷೇಮದ ಪೂರ್ವಸಿದ್ಧತೆಯು ಒಂದು ಮಾಸದ ಮುಂಚಿನಿಂದಲೇ ಆರಂಭವಾಗಿತ್ತು.

ಭವ್ಯ ಅರಮನೆಯ ವಿಶಾಲ ಆವರಣದಲ್ಲಿ ಸ್ವಲ್ಪವೂ ಹಳ್ಳ- ದಿಣ್ಣೆಗಳಿಲ್ಲದೆ ಒಂದೇ ಸಮನಾಗಿ ನೆಲವನ್ನು ಸಮ ಮಾಡಲಾಯಿತು. ವಿಶಾಲ ಸ್ಥಳದಲ್ಲಿ ಎದುರುಬದರಾಗಿ ಸಾಲುಸಾಲಾಗಿ ರಾಜಬಿಡಾರವನ್ನು ನಿರ್ಮಾಣ ಮಾಡಿಸಿದ್ದರು. ಒಂದೊಂದು ಸಾಲಿನಲ್ಲಿ ಐವತ್ತು ಬಿಡಾರದಂತೆ ಎದರು ಬದರಿನ ಎರಡು ಸಾಲುಗಳಲ್ಲೂ ಒಂದು ನೂರು ಬಿಡಾರವನ್ನು ನಿರ್ಮಿಸಿದ್ದರು.

ಭೋಜರಾಜನ ಅಪೇಕ್ಷೆಯಂತೆ ಮಹಾಮಂತ್ರಿಗಳ ಚಾಣಾಕ್ಷತನದಿಂದಾದ ಆ ಸುಂದರ ರಾಜ ಬಿಡಾರಗಳು ಬೆಳಗಿನ ಎಳೆಬಿಸಿಲಿನ ಕಾಂತಿಗೆ ಚಿನ್ನದ ಬಿಡಾರದಂತೆ ಆತ್ಯಾಕರ್ಷಕವಾಗಿ ಕಂಗೊಳಿಸುತ್ತಿತ್ತು.

ಒಂದೊಂದು. ರಾಜ ಬಿಡಾರದ ಮೇಲ್ತುದಿಯಲ್ಲೂ ಆಯಾ ದೇಶದ ಪ್ರತಿಷ್ಠಿತವಾದ ರಾಜ ಲಾಂಛನ ಬಾವುಟಗಳು ಹಾರಾಡುತ್ತಿದ್ದವು. ಪ್ರತಿಯೊಂದು ರಾಜಬಿಡಾರಡ ಮುಂದೆ ಅಲ್ಲಲ್ಲೆ ಅಂದಮಯವಾದ ಬಗೆಬಗೆಯ ಹೂವಿನ ಗಿಡಗಳ ಕುಂಡಗಳನ್ನು ಅಣಿಮಾಡಿ ಇಡಲಾಗಿತ್ತು.

ಒಂದೊಂದು ರಾಜ ಬಿಡಾರದಲ್ಲೂ ರಾಜಾರ್ಹತೆಗೆ ಯಾವುದೆ ಕುಂದು ಕೊರತೆ ಇಲ್ಲದ ಹಾಗೆ ಬಿಡಾರದ ಒಳಗೆ ಸಿಂಹಾಸನೋಪಾದಿಯ ರಾಜ ಪೀಠಗಳು, ಹಂಸ ತೂಲಿಕ ಮಂಚಗಳು. ವಿಶಾಲವಾದ ಚಿನ್ನದ ನಕಾಸೆಗಳಿಂದ ಶೋಭಿತವಾದ ದುಂಡು ಮೇಜುಗಳು. ದುಂಡು ಮೇಜಿನ ಮೇಲೆ ಬಂಗಾರದ ತಟ್ಟೆಗಳಲ್ಲಿ ಬಗೆ ಬಗೆ ಹಣ್ಣು ಹಂಪಲುಗಳು. ರತ್ನ ಖಚಿತವಾದ ಅಂದವಾದ ಬಂಗಾರದ ಹೂಜಿಗಳಲ್ಲಿ ಪಾನೀಯಗಳು. ಸುಗಂಧ ಪುಷ್ಪಗಳು ಸಜ್ಜುಗೊಳಿಸಲಾಗಿತ್ತು.

ಸುಮಾರು ಹತ್ತು ಅಡಿ ಎತ್ತರದ ಐದು ಅಡಿ ಅಗಲಉಳ್ಳ ಬೃಹತ್ ನಿಲುವು ಗನ್ನಡಿ. ಆ ನಿಲುವು ಗನ್ನಡಿಯ ಮುಂದೆ ಸುಗಂಧಿತವಾದ ಬಗೆ ಬಗೆಯ ತೈಲಗಳು. ಘಮ ಘಮಿಸುವ ಪರಿಮಳ ಅತ್ತರು ಎಲ್ಲವು ಅಣಿಯಾಗಿದ್ದವು.

ಬಿಡಾರದ ಒಳಗಿನ ಅಂದವನ್ನು ಮತ್ತಷ್ಟು ಹೆಚ್ಚಿಸುವ ದೃಷ್ಟಿಯಿಂದ ಅಲ್ಲಲ್ಲಿ ಚೌಕನೆ ಬೆಳ್ಳಿಯ ಕುಂಡಗಳಲ್ಲಿ ಬಗೆ ಬಗೆಯ ಬಣ್ಣ ಬಣ್ಣ ಸುಗಂಧ ಪುಷ್ಪಗಳ ಹೂವಿನ ಗಿಡಗಳು. ನಯನಮನೋಹರವಾದ ಹಚ್ಚಹಸಿರಿನಿಂದ ಕೂಡಿದ ಲತಾಗುಲ್ಮಗಳು ಎಲ್ಲವೂ ಪೂರ್ವಸಿದ್ಧತೆಯಾಗಿ ಅಣಿಯಾಗಿದ್ದವು.

ಬರುವ ಸಾಮಂತ ರಾಜರುಗಳ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳಲು ವಿನಯ ಭೂಷಣರಾದ ಪ್ರಮುಖ ರಾಜ ಸೇವಕರು. ಹದಿಹರೆಯದ ಸುಂದರ ತರುಣಿಯರು ಒಂದೊಂದು ರಾಜ ಬಿಡಾರದಲ್ಲೂ ಸಿದ್ಧರಿದ್ದರು.

ಸುವ್ಯವಸ್ಥಿತ ರಕ್ಷಣೆಗಾಗಿ ಸದ್ವಿನಯಗಳಿಂದ ಕೂಡಿದ ರಾಜಭಟರುಗಳು, ರಾಜ ಸೇವಕರುಗಳು ಅಲ್ಲಲ್ಲೆ ಸಾಲು ಸಾಲಾಗಿ ಈಟಿಗಳನ್ನು ಹಿಡಿದು ನಿಂತಿದ್ದರು. ಕೆಲವರು ಮೇಲ್ವಿಚಾರಕ ರಾಜಭಟರುಗಳು ಅತ್ತಿಂದಿತ್ತ ಇತ್ತಿಂದತ್ತ ಕುದುರೆ ಸವಾರಿ ಮಾಡುತ್ತ ಅಲ್ಲಿನ ಸುವ್ಯವಸ್ಥೆಗೆ ಯಾವುದೇ ಕುಂದಾಗದಂತೆ ಗಮನಿಸುತ್ತಿದ್ದರು.

ಸಾಲು ಬಿಡಾರಗಳ ಸುತ್ತಲು ವಿಶೇಷವಾಗಿ ಬೆಳ್ಳಿಯ ಸಾಲು ಕಂಬಗಳಿಂದ ಕೂಡಿದ ತಳಿರುತೋರಣಗಳಿಂದಲೂ, ಸಾಲು ಬಾವುಟಗಳಿಂದಲೂ ಅತಿಶಯವಾದ ರೀತಿಯಲ್ಲಿ ಶೃಂಗಾರ ಮಯವಾಗಿ ಅಲಂಕರಿಸಲಾಗಿತ್ತು.

ಇತ್ತ ಭೋಜರಾಜನ ಬಂಗಾರದ ಅರಮನೆಯ ಹೊರಭಾಗದ ಸುತ್ತಲು ಸಾಲು ಬೆಳ್ಳಿ ಕಂಬಗಳಿಂದಲೂ ರತ್ನಖಚಿತ ಸಾಲು, ಹಸಿರು ತೋರಣಗಳಿಂದಲೂ, ಮಣಿ ಮಾಣಿಕ್ಯಗಳ ಹಾರಗಳಿಂದಲೂ ಭವ್ಯವಾಗಿ ಅಲಂಕರಿಸಿದ್ದರು. ಸಮವಸ್ತ್ರ ಧರಿಸಿದ್ದ ಆಜಾನುಬಾಹು ಸುಂದರ ರಾಜಭಟರುಗಳ, ರಾಜ ಸೇವಕರುಗಳ ಸಂಭ್ರಮ ಸಡಗರ ಉತ್ಸಾಹ ಪ್ರತಿಯೊಬ್ಬರಲ್ಲೂ ತುಂಬಿ ತುಳುಕಾಡುವಂತಿತ್ತು. ಮೇಲು ಉತ್ಸುವಾರಿಗಾಗಿ ನೇಮಿಸಿದ್ದ ಅನುಭವೀ ರಾಜಸೇವಕರು ಸುಂದರವಾದ ಎತ್ತರವಾದ ಕುದುರೆಗಳಲ್ಲಿ ಕುಳಿತು ಅರಮನೆಯ ಅಲಂಕಾರ ಸೊಬಗನ್ನು ಗಮನಿಸುತ್ತ ಎಲ್ಲಿಯಾದರೂ ಯಾವುದೇ ಕುಂದು ಕೊರತೆಯಾಗದಂತೆ ಬಹು ಸೂಕ್ಷ್ಮರೀತಿಯಲ್ಲಿ ಗಮನಿಸುತ್ತಿದ್ದರು.

ಭೋಜರಾಜನ ರಾಜ ಸೇವಕರು ಸಹ ಪ್ರತಿಯೊಬ್ಬರು ಸುಂದರ ರೂಪಉಳ್ಳವರಾಗಿಯೂ, ಆಗಿನ ಕಾಲದ ಬೆಳವಣಿಗೆಯಂತೆ ಎಂಟು ಅಡಿ ಎತ್ತರವಾಗಿಯೂ, ಆಕರ್ಷಕ ಶರೀರವುಳ್ಳ ಧೃಡಕಾಯರಾಗಿಯೂ, ಸುಂದರವಾದ ಸಮವಸ್ತ್ರಗಳಿಂದ 'ಪುರುಷ ಸಿಂಹರಿವರು' ಎಂಬಂತೆ ಅವರವರ ಮುಖಲಕ್ಷಣಕ್ಕೆ ತಕ್ಕಂತೆ ಪುರುಷ ಲಕ್ಷಣವನ್ನು ಮತ್ತಷ್ಟು ಎದ್ದು ಕಾಣುವ ಹಾಗೆ ಎಲ್ಲರೂ ಮೀಸೆ ಬಿಟ್ಟಿದ್ದರು. ರಾಜಾಜ್ಞೆಯೋ ಎಂಬಂತೆ ಮೀಸೆ ಇಲ್ಲದ ರಾಜಸೇವಕರೇ ಕಾಣದಾಗಿತ್ತು ಆ ಅರಮನೆಯಲ್ಲಿ.

ನಾನಾ ದೇಶ ವಿದೇಶಗಳಿಂದ ಬಂದಿಳಿದಿದ್ದ, ಅವರೇನು ಅಪ್ಸರ ಕನ್ನೆಯರೋ ಎಂಬಂತೆ ಭಾಸವಾಗುವ ಹಾಗೆ ಬಗೆಬಗೆಯ ಆಕರ್ಷಕ ಉಡಿಗೆ ತೊಡಿಗೆಯ ಶೃಂಗಾರ ಮಯ ಹದಿಹರೆಯದ ಸುರಸುಂದರ ತರುಣಿಯರ ಸಂಭ್ರಮ ಸಡಗರಗಳ ಓಡಾಟವು ಅಸಂಖ್ಯ ಪ್ರೇಕ್ಷಕರಿಗೆ ಒಂದು ರೀತಿಯ ಭವ್ಯ ವಿಹಂಗಮ ನೋಟವಾಗಿತ್ತು. ಆ ತರುಣೀಮಣಿಯರ ಅಂದ ಚೆಂದ ಹಾವ ಭಾವವನ್ನು ಕಂಡು ಆನಂದ ಪುಳಕಿತರಾಗುತ್ತಿದ್ದರು.

ಅದೇ ರೀತಿಯಾಗಿ ಆಜಾನುಬಾಹುಗಳಾದ ಪುರುಷರು ಸಹ ಬಗೆ ಬಗೆ ಪುರುಷ ಪೋಷಾಕಿನಿಂದ ಹೊಳೆಯುತ್ತಿದ್ದರು. ಸ್ತ್ರೀಯರಲ್ಲಿಯೇ ಆಗಲಿ ಪುರುಷರಲ್ಲಿಯೇ ಆಗಲಿ ಎಲ್ಲರಲ್ಲೂ ಸದ್ಭಾವನೆ ಸಾಕ್ಷಾತ್ಕರ ಕಣ ಕಣದಲ್ಲೂ ಹರಿದಿತ್ತು.

ಪ್ರತಿಯೊಬ್ಬ ಪ್ರಜೆಯು ಸಹ ಭೋಜರಾಜನನ್ನು ಪ್ರತ್ಯಕ್ಷವಾಗಿ ಕಾಣುವ ಸುಯೋಗದ ಘಳಿಗೆಯನ್ನು ಕಾಯುತ್ತಿದ್ದರು.

ಧಾರಾನಗರದ ಬೀದಿ ಬೀದಿಗಳನ್ನು ತಳಿರು ತೋರಣಗಳಿಂದಲೂ ಅಲಂಕರಿಸಿದ್ದರು. ಅಷ್ಟೇ ಅಲ್ಲದೆ ಆನೆ ಅಂಬಾರಿ ಹೊರಟು ಬರುವ ವಿಶಾಲವಾದ ಪ್ರಮುಖ ರಾಜಬೀದಿಯ ಉದ್ದಕ್ಕೂ ಇಕ್ಕೆಡೆಯಲ್ಲೂ ಆನೆ ಅಂಬಾರಿಗೆ ಅಡಚಣೆಯಾಗದ ರೀತಿಯಲ್ಲಿ ಬಹು ಎತ್ತರವಾಗಿ ಬಣ್ಣ ಬಣ್ಣದ ಸಾಲು ಕಂಬಗಳನ್ನು ನೆಟ್ಟು, ಕಂಬಗಳಿಗೆ ಹೊಂದಿಕೊಂಡಂತೆ ರಸ್ತೆಯುದ್ದಕ್ಕೂ ದಟ್ಟವಾದ ಹಸಿರು ಮಾವು ತಳಿರು ತೋರಣಗಳಿಂದಲೂ ಗೊನೆ ಬಾಳೆ ಕಂಬಗಳಿಂದಲೂ, ಬಣ್ಣ ಬಣ್ಣದ ಸಾಲು ಭಾವುಟಗಳಿಂದಲೂ ಅಲಂಕರಿಸಿದ್ದರು ಉತ್ಸಾಹೀ ನಾಗರಿಕರು.

ಭೋಜರಾಜನ ವೈಭವವನ್ನು ಪ್ರತ್ಯಕ್ಷವಾಗಿ ನೋಡಿ ಆನಂದಿಸಲು ದೇಶದ ಮೂಲೆ ಮೂಲೆಗಳಿಂದ ಜನ ಕೋಟಿ ಸಮುದ್ರದೋಪಾದಿಯಲ್ಲಿ ತುಂಬಿ ನೆರೆದಿದ್ದರು.

ಅಂದು ನಗರದ ಎಲ್ಲೆಡೆಯಲ್ಲೂ ಪಟ್ಟಣಿಗರ ಸಂಭ್ರಮ ಸಡಗರ ಉತ್ಸಾಹಗಳು ಹೇಳತೀರದಷ್ಟು ಅವರ್ಣನೀಯವಾಗಿತ್ತು. ಸ್ವರ್ಗ ಸಂತೋಷದಿಂದ ನಕ್ಕುನಲಿದಾಡುತ್ತಿದ್ದರು ಪ್ರಜೆಗಳು.

ಭೋಜರಾಜನ ಇಪ್ಪತ್ತೈದನೆ ವರ್ಷದ ಹುಟ್ಟಿದ ಹಬ್ಬದ ಅಂಗವಾಗಿ ಸಕಾಲಕ್ಕೆ ಸರಿಯಾಗಿ ಭಾರತದ ಅರವತ್ತನಾಲ್ಕು ದೇಶಗಳಿಂದ ಆಗಮಿಸಿದ್ದ ಸಾಮಂತರಾಜರು, ಆಸ್ಥಾನದ ಮಹಾ ಮಂತ್ರಿಗಳು ಉಪ ಮಂತ್ರಿಗಳು ಸೇನಾಧಿಪತಿ, ಕೋಶಾಧಿಪತಿ, ದಂಡನಾಯಕರು, ರಾಜ ಪುರೋಹಿತರು, ಕುಲ ಪುರೋಹಿತರು, ಪ್ರಮುಖ ದೇವಾಲಯಗಳ ಧರ್ಮದರ್ಶಿಗಳು, ವೇದ ಘೋಷ ಮಾಡುವ ಬ್ರಾಹ್ಮಣ ಸಮೂಹ, ರಾಜ ಪರಿಹಾರದವರು, ಅಷ್ಟದಿಗ್ಗಜ ಕವಿ ವಿದ್ವನ್ಮಣಿಗಳಾದ, ದಂಡಿ, ಡಿಂಡಿಮ, ಭಟ್ಟಾಚಾರ್ಯ, ಬಾಣ, ಭಟ್ಟಾಕರ, ಬಾಸ, ಭವಭೂತಿ ಮುಂತಾದ ಕವಿ ಸಾರ್ವಭೌಮರುಗಳು ಹಾಗೂ ವ್ಯಾಖ್ಯಾನಕಾರರು, ಗಣಿತ ಶಾಸ್ತ್ರಜ್ಞರು, ತರ್ಕ ವೇದಶಾಸ್ತ್ರ, ಅರ್ಥಶಾಸ್ತ್ರ ನಿಪುಣರು, ಬಗೆಬಗೆಯ ಕಲಾವಿದರು, ನೃತ್ಯಕಾರರು, ನಾಟ್ಯಕಾರರು ಸಂಗೀತ ವಿಶಾರದರು, ಪ್ರಮುಖ ಪ್ರಜೆಗಳು, ಎಲ್ಲದರಾದಿಯಾಗಿ ಸಾಗರದೋಪಾದಿಯಲ್ಲಿ ತುಂಬಿ ನೆರೆದಿದ್ದರು.

ಆ ಹುಟ್ಟಿದ ಹಬ್ಬದ ಮಹೋತ್ಸವದ ವೈಭವದ ಸಂಭ್ರಮ ಸಮಾರಂಭಕ್ಕೆ ಆಗಮಿಸದಿದ್ದ ಗಣ್ಯ ವ್ಯಕ್ತಿಗಳೇ ಇರಲಿಲ್ಲ.

ಪೂರ್ವಭಾವಿಯಾಗಿ ಕ್ರಮವಾಗಿ ಅಣಿಗೊಂಡಂತೆಯೇ ಸಭಾಂಗಣದ ಮಹಾದ್ವಾರದಿಂದ ರಾಜವೇದಿಕೆಯವರೆವಿಗೂ ಇಕ್ಕೆಡೆಯಲ್ಲೂ ಉದ್ದಕ್ಕೂ ಹಾಸಲ್ಪಟ್ಟಿದ್ದ ರತ್ನಗಂಬಳಿಯ ಮೇಲೆ ಎದುರು ಬದಿರಾಗಿ ಸಾಲಾಗಿ ಹಾಕಲ್ಪಟ್ಟಿದ್ದ ಸಿಂಹಾಸನೋಪಾದಿಯ ರತ್ನಖಚಿತ ರಾಜ ಪೀಠಗಳಲ್ಲಿ ಅರವತ್ತನಾಲ್ಕು ದೇಶಗಳ ರಾಜಮಹಾರಾಜರು, ಸಾಮಂತರಾಜರು ರಾಜಗಾಂಭೀರ್ಯದಿಂದ ಉಪಸ್ಥಿತರಾಗಿದ್ದರು. ಅವರೆಲ್ಲರೂ ಭೋಜರಾಜನ ಬರುವಿಕೆಯನ್ನು ಎದುರು ನೋಡುತ್ತಿದ್ದರು.

ಆ ರಾಜ ಮಹಾರಾಜರುಗಳಾದರೂ ಇತರ ರಾಜರಿಗಿಂತ ತಾವು ಸುಂದರವಾಗಿ ಕಾಣಬೇಕು ಎಂಬ ಹೆಬ್ಬಯಕೆಯಿಂದ ಒಬ್ಬರಿಗಿಂತ ಮತ್ತೊಬ್ಬರು ತಮ್ಮ ತಮ್ಮ

ಯೋಗ್ಯತೆಗಿಂತಲೂ ಮಿಗಿಲಾದ ರತ್ನಖಚಿತವಾದ ಆಭರಣಗಳಿಂದಲೂ ಶೋಭಿತರಾಗಿದ್ದರು.

ಹಾಗೆ ಬಂದಿದ್ದ ರಾಜರುಗಳಲ್ಲಿ ಹೆಚ್ಚಾಗಿ ತಾರುಣ್ಯ ತುಂಬಿದ ಹಾಗೂ ಕಿಶೋರ ರಾಜಕುಮಾರರಾಗಿದ್ದರಿಂದ ಅವರೆಲ್ಲರೂ ಗಂಧರ್ವಲೋಕದ ಗಂಧರ್ವ ಪುರುಷರೋ ಎಂಬಂತೆ ಭಾಸವಾಗುತ್ತಿತ್ತು.

ಇದಲ್ಲದೆ ರಾಜ ಒಡ್ಡೋಲಗದ ಸಿಂಹಾಸನದ ಬಲಗಡೆ ಉಪ್ಪರಿಗೆಯ ಮೇಲೆ ರಾಜಮನೆತನದ ಮಹಾರಾಣಿಯರು, ರಾಜಮಾತೆಯರು, ರಾಜಕುಮಾರಿಯರು ಮುಂತಾದ ರಾಜಪರಿವಾರದ ಮಹಿಳಾ ವರ್ಗದವರಿಗೆ ಪ್ರತ್ಯೇಕವಾಗಿ ಜಾಲಂದರದ ಮೂಲಕ ವೀಕ್ಷಿಸಬಹುದಾದ ರೀತಿಯಲ್ಲಿ ಸುವ್ಯವಸ್ಥೆ ಮಾಡಲಾಗಿತ್ತು. ಅಲ್ಲಿಯೂ ಸಹ ರಾಜಾರ್ಹವಾದ ರತ್ನಖಚಿತ ರಾಜಪೀಠವನ್ನು ಸಜ್ಜುಗೊಳಿಸಲಾಗಿತ್ತು. ಅವರೆಲ್ಲರೂ ಉಪಸ್ಥಿತರಾಗಿದ್ದರು. ಎಲ್ಲರೂ ಭೋಜರಾಜನ ವೈಭವವನ್ನು ಬೆರಗುಗಣ್ಣುಗಳಿಂದ ನೋಡುತ್ತ ಪ್ರತಿಯೊಬ್ಬರು ಮನದಲ್ಲೆ ಗುಣಗಾನ ಮಾಡುತ್ತಿದ್ದರು. ಎಲ್ಲರೂ ಭೋಜರಾಜನ ಬರುವಿಕೆಗಾಗಿ ಎದುರು ನೋಡುತ್ತಿದ್ದರು.

ಸಭಾಭವನ ಪ್ರವೇಶಿಸಿದ್ದ ಪ್ರಮುಖ ಪ್ರಜೆಗಳು ಸಹ ರಾಜಾರ್ಹತೆಗೆ ತಕ್ಕಂತೆ ಒಳ್ಳೊಳ್ಳೆಯ ಬಣ್ಣ ಬಣ್ಣದ ಆಕರ್ಷಕ ಉಡುಪಿನಿಂದಲೂ ಬೆಲೆಬಾಳುವ ಆಭರಣಗಳಿಂದಲೂ ಅಲಂಕೃತರಾಗಿ ಅರಮನೆಯ ಸಭಾ ಮಂದಿರವನ್ನು ಪ್ರವೇಶ ಮಾಡಿದ್ದರು.

ಈ ಎಲ್ಲ ಶೃಂಗಾರಮಯ ಅಲಂಕಾರ ವೈಭವಗಳಿಂದ ಕೂಡಿದ ಅಂದಿನ ಭೋಜರಾಜನ ರಾಜಸಭೆಯು ಹೇಳತೀರದಷ್ಟು ಅವರ್ಣನೀಯವಾಗಿತ್ತು.

# ಭೋಜರಾಜನ ಸಭೆ

ರಾಜಸಭೆಯಲ್ಲಿ ಬ್ರಹ್ಮವರ್ಚಸ್ಸಿನಿಂದ ಕೂಡಿದ ರಾಜಾಧಿರಾಜ ಚಕ್ರವರ್ತಿ ಸಾರ್ವಭೌಮನಾದ ಭೋಜರಾಜನು ತನ್ನ ಪಟ್ಟ ಮಹಿಷಿಯಾದ ಲೀಲಾವತಿ ದೇವಿಯೊಂದಿಗೆ ತ್ರಿಲೋಕಗಳಲ್ಲೂ ದುರ್ಲಭವೆನಿಸಿದ್ದ ಭವ್ಯವಾದ 'ರತ್ನ ಸಿಂಹಾಸನ' ದಲ್ಲಿ ಅಲಂಕೃತನಾಗಿದ್ದನು.

ಆಗ ರಾಜಸಭೆಯಲ್ಲಿದ್ದ ಮಹಾ ಮಂತ್ರಿಗಳು, ರಾಜಪುರೋಹಿತರು, ವಂಧಿ ಮಾಗಧರು ದೇವ ಸ್ವರೂಪರಾದ ಬ್ರಾಹ್ಮಣೋತ್ತಮರು ಹಾಗೂ ತುಂಬಿ ನೆರೆದಿದ್ದ ಲಕ್ಷೋಪಲಕ್ಷ ಜನರಿಂದ ಒಕ್ಕೊರಳ ಏಕಕಂಠದಿಂದ ನಭೋ ಮಂಡಲವನ್ನೇ ಭೇದಿಸುವಂತೆ ಜಯಕಾರ ಮಾಡಿದರು.

"ರಾಜಾಧಿರಾಜ ಚಕ್ರವರ್ತಿ ಸಾರ್ವಭೌಮ ಬೋಜರಾಜರಿಗೆ ಜಯವಾಗಲಿ, ವಿದ್ವನ್ಮಣಿ ತಿಲಕ ರಾಜ ಭೋಜರಾಜರಿಗೆ ಜಯವಾಗಲಿ" - ಈ ಜಯಕಾರ ನಾಲ್ಕು ದಿಕ್ಕಿನಲ್ಲೂ ಪ್ರತಿಧ್ವನಿಸಿತು.

"ಪ್ರಜಾ ಪರಿಪಾಲಕ ಧರ್ಮದುದ್ಧಾರಕ ಭೋಜರಾಜರಿಗೆ ಜಯವಾಗಲಿ" ಎಂದು ಮತ್ತೆ ಮತ್ತೆ ಜಯಕಾರ ಧ್ವನಿಗಳು ಮೊಳಗಿದವು.

ಅದೇ ಶುಭ ವೇಳೆಯಲ್ಲಿ ಗಗನ ಮಂಡಲದಲ್ಲೂ ಸಹ ಬ್ರಹ್ಮಾದಿ ಸಕಲ ದೇವತೆಗಳು ನೆರೆದಿದ್ದರು. ಹಾಗೆ ನೆರದಿದ್ದ ಎಲ್ಲ ದೇವಾನುದೇವತೆಗಳು ಭೋಜರಾಜನ ವೈಭವವನ್ನು ವೀಕ್ಷಿಸುತ್ತಾ, ಅತ್ಯಂತ ಸಂತೋಷ ಚಿತ್ತರಾಗಿ ಪುಷ್ಪವೃಷ್ಟಿಗೆರೆದು ಜಯಕಾರ ಹಾಕುತ್ತಿದ್ದರು.

ಭೋಜರಾಜನು ರತ್ನ ಸಿಂಹಾಸನವನ್ನು ಅಲಂಕರಿಸಿ ಕುಳಿತಂತೆ, ಅದೇ ಸಮಯಕ್ಕೆ ಸರಿಯಾಗಿ ಶ್ರೀ ವೈಕುಂಠ ಲೋಕ - ಬ್ರಹ್ಮ ಲೋಕದಿಂದ ಅದೃಶ್ಯರಾಗಿ ಬಂದಿದ್ದ ಲೋಕ ಮಾತೆಯರಾದ ಲಕ್ಷ್ಮೀ ಸರಸ್ವತಿಯರು ಸಿಂಹಾಸನದ ಎಡಭಾಗ ಮತ್ತು ಬಲಭಾಗದಲ್ಲಿ ಕಮಲಾಸನಗಳಲ್ಲಿ ಕುಳಿತು ಮಹಾರಾಜನಿಗೆ ಶುಭ ಕೋರಿದರು.

[ಭೋಜರಾಜನು ತಾನು ಮಾಡಿದ ಅಖಂಡ ಪುಣ್ಯ ರಾಶಿಯ ಫಲವಾಗಿ ಆ ಪುಣ್ಯ ಪ್ರಭಾವದಿಂದ ಲಕ್ಷ್ಮೀ ಸರಸ್ವತಿಯರು ವಿಶೇಷ ರಾಜಸಭೆಗಳಲ್ಲಿ ದೇವಲೋಕದಿಂದ ಆಗಮಿಸಿ ತಾಯಿಯು ತನ್ನ ಮಗುವಿನ ತೊಟ್ಟಿಲು ತೂಗುತ್ತಾ ಜೋಗುಳ ಹಾಡುವಂತೆ ಅಷ್ಟೇ ಸಂತೋಷದಿಂದ ಚಾಮರ ಬೀಸುತ್ತಿದ್ದರು ಎಂದು ಕೆಲವು ಪಂಡಿತರಿಂದ ತಿಳಿದು ಬಂದಿತ್ತು. ಆದರೂ ಸಹ ಅದಕ್ಕೆ ಯಾವುದೇ ಆಧಾರ ವಿಲ್ಲದಿರುವುದರಿಂದ ಆ ವಿಷಯವನ್ನು ಕೈ ಬಿಟ್ಟಿದ್ದೇನೆ. ಪರಂತು ಲೋಕ ಮಾತೆಯರು ಆದ ಲಕ್ಷ್ಮೀ ಸರಸ್ವತಿ ಪಾರ್ವತಿಯರು ಭೋಜರಾಜನ ಆಸ್ಥಾನಕ್ಕೆ ಬಂದು ಅಗೋಚರವಾಗಿ ಆಶೀರ್ವಾದ ಮಾಡಿ ಹೋಗುತ್ತಿದ್ದರು ಎಂಬುದರಲ್ಲಿ ಯಾವುದೇ ಸಂದೇಹವಿರಲಿಲ್ಲ ಎಂಬುದು ನನ್ನ ಅನಿಸಿಕೆ]

ಭೋಜರಾಜನ ಒಡ್ಡೋಲಗದಲ್ಲಿ ಸದಾಕಾಲವು ವಿಜೃಂಭಿಸುತ್ತಿದ್ದ ಆಸ್ಥಾನ ಕವಿಗಳೆಂದೇ ಖ್ಯಾತಿ ಪಡೆದಿದ್ದ ಅಷ್ಟ ದಿಗ್ಗಜಗಳಾದ ಹಾಗೂ ವಿದ್ವನ್ಮಣಿಗಳಾದ ದಂಡಿ, ಡಿಂಡಿಮ, ಭಾಸ, ಬಾಣ, ಭವಭೂತಿ, ಭಟ್ಟಾರಕ, ಬಿಲ್ಲಣ, ಭಾರವಿ ಮುಂತಾದವರು ಯಥೋಚಿತವಾದ ಪೀಠದಲ್ಲಿ ಉಪಸ್ಥಿತರಾಗಿದ್ದರು. ಅವರುಗಳು ಮಾತ್ರವಲ್ಲದೆ ಭೋಜರಾಜರಿಂದ ರಾಜಾಶ್ರಯ ಪಡೆದಿದ್ದ ಒಂಭೈನೂರು ಸಂಸ್ಕೃತ ಪಂಡಿತರು ಅಲ್ಲಿದ್ದರು.

ಅಭೂತ ಪೂರ್ವ ಭೋಜರಾಜನ ಹುಟ್ಟಿದ ಹಬ್ಬಕ್ಕಾಗಿ ದೇಶ ವಿದೇಶಗಳಿಂದ ಬಂದು ನೆರೆದಿದ್ದ ವಿವಿಧ ಕಲಾವಿದರ ಗುಂಪಿನಲ್ಲಿ ಶಿವ, ಪಾರ್ವತಿ, ನಾರದರೂ ಸಹ ಒಂದೆಡೆ ಉಪಸ್ಥಿತರಿದ್ದರು. ಹಾಗೆ ಕುಳಿತಿದ್ದ ಅವರು ಎಲ್ಲಾ ಕಲಾವಿದರಿಗಿಂತಲೂ ಅತಿಶಯವಾದ ತೇಜಸ್ಸಿನಿಂದ ಶೋಭಿಸುತ್ತಿದ್ದರು. ವಯಸ್ಸಿನಲ್ಲೂ ಅಷ್ಟೇ, ಹದಿನೆಂಟು ಇಪ್ಪತ್ತು ವರ್ಷ ಹರೆಯದ ನವ ತಾರುಣ್ಯದಿಂದ ಕೂಡಿದವರಾಗಿ ಎಲ್ಲರ ಮನವನ್ನು ಸೂರೆಗೊಳ್ಳುವಂತೆ ಅತಿಶಯ ಕಾಂತಿಯಿಂದ ಕೂಡಿದ್ದರು. ಅದರಂತೆ ಮಾರು ವೇಷಧಾರಿ ನಾರದ ಮಹರ್ಷಿಗಳು ಸಹ ನಲವತ್ತು ವರ್ಷಗಳಿಗೆ ಮೀರಿದ ಧೃಡಕಾಯ ಆಜಾನುಬಾಹು ಶರೀರ ಉಳ್ಳವರಾಗಿ ಅತಿಶಯವಾದ ತೇಜಸ್ಸಿನಿಂದ ಶೋಭಿಸುತ್ತಿದ್ದರು.

ಆ ಕಲಾವಿದರ ಗುಂಪಿನಲ್ಲಿದ್ದ ಎಲ್ಲರೂ ಅಲೌಕಿಕ ಸೌಂದರ್ಯದಿಂದ ಕೂಡಿದ ಮಾರು ವೇಷಧಾರಿ ಶಿವ ಪಾರ್ವತಿಯರನ್ನು ನಾರದರನ್ನು ಅತ್ಯಂತ ಕುತೂಹಲದಿಂದ ಮನದಣಿಯ ನೋಡುತ್ತ ತಮ್ಮ ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಾ "ಆಹಾ! ಏನು ರೂಪು! ಎಂಥ ಸೌಂದರ್ಯ! ಇಂತಹ ರೂಪನ್ನು ಪಡೆದಿರುವ ಇವರು ಅದೆಷ್ಟು ಪುಣ್ಯವಂತರು" ಎಂದು ನಾನಾ ರೀತಿಯಲ್ಲಿ ಗುಣಗಾನ ಮಾಡುತ್ತಿದ್ದರು.

ಭೋಜರಾಜನ ಇಪ್ಪತ್ತೈದನೇ ವರ್ಷದ ಹುಟ್ಟಿದ ಹಬ್ಬದ ಅಂಗವಾಗಿ ಅಂದು ವಿಶೇಷ ರೀತಿಯಲ್ಲಿ ಹಾಗೂ ಅತ್ಯಂತ ಅದ್ದೂರಿಯಾಗಿ ನಡೆಯಬೇಕಾದ ಮಹಾಸಭೆಯ ಕಾರ್ಯಕ್ರಮವನ್ನು ವಂದಿ ಮಾಗಧರು ಎಲ್ಲರಿಗೂ ಕೇಳಿಸುವ ಹಾಗೆ ಓದುತ್ತಾ, "ಈ ಮಹಾಸಭೆಯಲ್ಲಿ ಸಮಸ್ತರಿಗೂ ತಿಳಿಸುವುದೇನೆಂದರೆ, ಮಹಾ ಪ್ರಭುಗಳ ವಿಶ್ವಾಸನೀಯ ಆಜ್ಞಾನುಸಾರ ರಾಜಗುರುಗಳ ಹಾಗೂ ಮಹಾ ಮಂತ್ರಿಗಳ ಆದೇಶಾನುಸಾರವಾಗಿ ಇಂದು ಈ ಆರ್ಯಾವರ್ತದ ಅಖಂಡ ಸಾಮ್ರಾಜ್ಯ ವೈಭವ ಪುರುಷ ಶ್ರೇಷ್ಠರಾದ ಈ ಧಾರ ನಗರದ ಮಹಾ ಪಟ್ಟಣದ ಮಹಾ ಸಾರ್ವಭೌಮರಾದ ವಿದ್ವನ್ಮಣಿ ತಿಲಕನಾದ ಪ್ರಜಾ ಪ್ರೇಮಿ, - ಪ್ರಜಾ ಪರಿಪಾಲಕರಾದ - ಧರ್ಮದುರಂಧರರಾದ - ಮಹಾರತ್ನ ಸಿಂಹಾಸನಾದೀಶ್ವರರಾದ ರಾಜಾಧಿರಾಜ ಚಕ್ರವರ್ತಿ ಸಾರ್ವಭೌಮರಾದ ರಾಜ ಭೋಜರಾಜರು ...........

ಮೊದಲಾಗಿ ರಾಜಗುರುಗಳಿಂದ ಈ ರತ್ನ ಸಿಂಹಾಸನವನ್ನಲಂಕರಿಸಿ ಏಳು ವರ್ಷ ಹಾಗೂ ಪ್ರಭುಗಳು ಇಪ್ಪತ್ತೈದನೆಯ ವರ್ಷದ ಹುಟ್ಟಿದ ಹಬ್ಬದ ಅಂಗವಾಗಿ ಮಹಾ ಪ್ರಭುಗಳ ಬಗ್ಗೆ ನಾಲ್ಕು ಮಾತು. ಆ ನಂತರ ಧಾರಾ ನಗರದ ಪ್ರಜೆಗಳ ಪರವಾಗಿ ರಾಜ ಕುಲಗುರುಗಳ ಆಶೀರ್ವಚನ ಪೂರಕ ಕನಕಾಭಿಷೇಕ ಕಾರ್ಯಕ್ರಮ ಜರುಗಲಿದೆ. ಅನಂತರ ಅಷ್ಟದಿಗ್ಗಜಗಳಲ್ಲಿ ಒಬ್ಬರಾದ ಕವಿ ಶ್ರೇಷ್ಠರಾದ ದಂಡಿ ಇವರಿಂದ ಸಾರ್ವಭೌಮರ ಬಗ್ಗೆ ಕವಿ ಪ್ರಶಂಸನೆ ನಡೆಯಲಿದೆ. ಅನಂತರ ಧಾರಾನಗರದ ರಾಜ ನರ್ತಕಿಯವರಿಂದ ಅಮೋಘ ಭರತ ನಾಟ್ಯ ವೈಭವ ನಡೆಯಲಿದೆ.

ಅನಂತರ ನಮ್ಮ ಆರ್ಯಾವರ್ತದ ಎಲ್ಲಾ ಚಪ್ಪನ್ನಾರು ದೇಶಗಳ ರಾಜರುಗಳು ಸಾರ್ವಭೌಮರಿಗೆ ಒಪ್ಪಿಸಿದ ಅಪೂರ್ವ ಕಪ್ಪ ಕಾಣಿಕೆಗಳ ವಿವರಣೆಯನ್ನು ಸಭೆಯ ಮುಂದೆ ಮಂಡನೆ.

ಅನಂತರ ಅರಮನೆ ಹೊರಗೆ ರಾಜದರ್ಶನಕ್ಕಾಗಿ ಕಿಕ್ಕಿರಿದು ಕಾದಿರುವ ಲಕ್ಷಲಕ್ಷೋಪ ಪ್ರಜೆಗಳಿಗೆ ರಾಜದರ್ಶನ ಕೊಡಲು ಪ್ರಭುಗಳು ಬಯಸುತ್ತಾರೆ.

ಅನಂತರ ಇಲ್ಲಿ ನೆರೆದಿರುವ ಸಮಸ್ತರಿಗೂ ಪುಷ್ಕಳರಾಜ ಭೋಜನ. ರಾಜಭೋಜನವು ಈ ರಾಜಸಭೆಯಲ್ಲಿ ನೆರೆದಿರುವವರಿಗೆ ಮಾತ್ರವೇ ಅಲ್ಲದೆ. ಧಾರಾ ನಗರದ ಸಮಸ್ತ ಪ್ರಜೆಗಳು ಸೇರಿದಂತೆ ಧಾರಾ ನಗರಕ್ಕೆ ಆಗಮಿಸಿದ ಪ್ರತಿಯೊಬ್ಬ ಪ್ರಜೆಗಳಿಗೂ ಸಹ ಊಟೋಪಚಾರಗಳು. ಇದು ಇಂದಿನ ಮಹಾ ಸಭೆಯ ವಿಶೇಷ ಕಾರ್ಯಕ್ರಮಗಳು - " ಎಂದು ಸಭಿಕರಿಗೆ ತಿಳಿಸಲಾಯಿತು.

ನಂತರ ವಂಧಿ ಮಾಗಧರು ಪುನಹ ಆ ಮಹಾ ರಾಜಸಭೆಯನ್ನುದ್ದೇಶಿಸಿ ಎಲ್ಲರಿಗೂ ಕೇಳುವ ಹಾಗೆ ತಮ್ಮ ಕಂಚಿನ ಕಂಠದಿಂದ ನಿರರ್ಗಳವಾಗಿ ಮಾತನಾಡುತ್ತಾ "ಈ ಧಾರಾನಗರದ ರತ್ನ ಸಿಂಹಾಸನಾಧೀಶ್ವರರಾದ ಚಕ್ರವರ್ತಿ ಸಾರ್ವಭೌಮರಾದ ರಾಜಾಧಿರಾಜ ಭೋಜರಾಜರಿಗೆ ಸಾಷ್ಟಾಂಗ ವಂದನೆಗಳು. ಇಂದು ಈ ಮಹಾ ರಾಜಸಭೆಯಲ್ಲಿ ತುಂಬಿ ನೆರೆದಿರುವ ಎಲ್ಲಾ ಸಭಿಕರಿಗೂ ಸಾರ್ವಭೌಮರ ಪರವಾಗಿ ವಂದನೆಗಳು. ಈ ನಮ್ಮೆಲ್ಲರನ್ನು ಆಳುತ್ತಿರುವ ಮಹಾಪ್ರಭುಗಳು ರತ್ನ ಸಿಂಹಾಸನವನ್ನಲಂಕರಿಸಿ ಇಂದಿಗೆ ಏಳು ವರ್ಷಗಳು ತುಂಬಿ ಎಂಟನೇ ವರ್ಷಕ್ಕೆ ಬಿಜಯಿಸುತ್ತಿದ್ದಾರೆ. ಹಾಗೂ ಇಂದು ಅವರ ಇಪ್ಪತ್ತೈದನೇ ವರ್ಷ ಹುಟ್ಟಿದ ಹಬ್ಬದ ಮಹಾ ಸುದಿನವೂ ಆಗಿದೆ.

ಅಧಿಕಾರಾರೂಢರಾಗಿ ವಿಜೃಂಭಿಸುತ್ತಿರುವ ಅವರ ಆಳ್ವಿಕೆಯನ್ನು ಹಿಂದೆಂದೂ ಕಾಣದ ಸುವರ್ಣಯುಗ ವೆಂದು ಘೋಷಿಸಲ್ಪಟ್ಟಿದೆ.

ಪ್ರಭುಗಳು ಮೊಟ್ಟಮೊದಲಾಗಿ ಪ್ರತಿಯೊಬ್ಬ ಮಾನವನಿಗೂ ಅತ್ಯಗತ್ಯವಾದ ವಿದ್ಯೆಯನ್ನು ಅದರಲ್ಲೂ ಸಂಸ್ಕೃತಕ್ಕೆ ಹೆಚ್ಚಿನ ಮಹತ್ವಕೊಟ್ಟು ಅದು ಎಲ್ಲರಿಗೂ ಲಭ್ಯವಾಗುವಂತೆ ವ್ಯವಸ್ಥೆ ಮಾಡಿ ವಿಶ್ವಕ್ಕೆ ಮಾದರಿಯಾದ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದಿರುವುದನ್ನು ತಮ್ಮ ಅವಗಾಹನೆಗೆ ತಿಳಿಸಲು ಸಂತೋಷ ಪಡುತ್ತೇವೆ. ಪ್ರಭುಗಳ ಆಳ್ವಿಕೆಯ ಪೂರ್ವದಲ್ಲಿ ನಮ್ಮ ಆರ್ಯಾವರ್ತ ಪ್ರಜೆಗಳು ವಿದ್ಯಾಹೀನರಾಗಿಯೂ ಜ್ಞಾನಹೀನರಾಗಿಯೂ ಪುರುಷ ಸಾಧನೆಗೆ ವಂಚಿತರಾಗಿದ್ದರು.

ವಿಶ್ವದ ಎಲ್ಲಾ ಭಾಷೆಗಳಲ್ಲಿಯೇ ಅತೀ ಶ್ರೇಷ್ಠವಾದ ಭಾಷೆ ದೇವನಾಗರಿ ಭಾಷೆಯಾದ ಸಂಸ್ಕೃತ ಭಾಷೆಗೆ ಈ ಪ್ರಭುಗಳು ಕೊಟ್ಟಿರುವ ಔದಾರ್ಯತೆ ಹಿಂದೆಂದೂ ಯಾರೊಬ್ಬರೂ ಕೊಟ್ಟಿರಲಿಲ್ಲ. ಅದಕ್ಕೆ ಪ್ರತ್ಯಕ್ಷ ಸಾಕ್ಷಿಯಾಗಿ ಈ ರಾಜಸಭೆಯಲ್ಲಿ ಉಪಸ್ಥಿತರಾಗಿರುವ ಆಸ್ಥಾನ ಮಹಾಕವಿಗಳೆಂದೇ ಖ್ಯಾತಿ ಪಡೆದಿರುವ ಹಲವಾರು ಕವಿ ಶ್ರೇಷ್ಠರು ಇಲ್ಲಿರುವುದೇ ನಿದರ್ಶನವಾಗಿದೆ. ಅದಲ್ಲದೆ ಈ ರಾಜ ಸಭೆಯಲ್ಲಿ ಉಪಸ್ಥಿತರಾಗಿರುವ ಒಂಭೈನೂರು ಸಂಸ್ಕೃತ ಕವಿಗಳಿಗೆ ಆಶ್ರಯಧಾತರಾಗಿದ್ದಾರೆ. ಅವರುಗಳ ಮೂಲಕ ಆರ್ಯಾವರ್ತದ ಅನೇಕ ಪಟ್ಟಣ ಊರು ಹಳ್ಳಿ ಹಳ್ಳಿಗಳಲ್ಲೂ

ಸಂಸ್ಕೃತ ಅಭ್ಯಾಸ ಮಾಡಲು ಗುರುಕುಲಗಳನ್ನು ಸ್ಥಾಪಿಸಿರುತ್ತಾರೆ. ಇದರಿಂದ ಎಲ್ಲ ಪ್ರಜೆಗಳು ಸಂಸ್ಕೃತ ವಿದ್ಯೆಯಲ್ಲಿ ಬಹು ಆಸಕ್ತಿಯುಳ್ಳವರಾಗಿದ್ದಾರೆ. ಮನೆ ಮನೆಗಳಲ್ಲೂ ಸಂಸ್ಕೃತ ಭಾಷೆ ತಾಂಡವಾಡುತ್ತಿದೆ. ಪುಟ್ಟ ಪುಟ್ಟ ಮಕ್ಕಳು ಸಹ ಸಂಸ್ಕೃತದಲ್ಲಿ ನಿರರ್ಗಳವಾಗಿ ಮಾತನಾಡಲು ಪ್ರಾರಂಭಿಸಿರುವುದು ಈ ಪ್ರಭುಗಳ ಬಹು ಆಧಾರಣೀಯ ಪ್ರಜ್ಞಾಗುಣಗಳ ವೈಶಿಷ್ಟ್ಯತೆಗೆ ತಿಲಕಪ್ರಾಯವಾಗಿದೆ.

ಇವರ ಕಾಲದಲ್ಲಿ ಹಲವಾರು ಕಪಟ ಪಂಡಿತರು ಸ್ವಾರ್ಥಕ್ಕೋಸ್ಕರವಾಗಿ ಬಹುಶ್ರೇಷ್ಠವಾದ ಶಿವ ಪುರಾಣ ಮತ್ತು ಮಾರ್ಕಂಡೇಯ ಪುರಾಣಗಳನ್ನು ತಮಗೆ ಮನ ಬಂದಂತೆ ಸಮಾಜ ಘಾತುಕತನದ ದೃಷ್ಟಿಯಿಂದ ಬರೆದಿರುತ್ತಾರೆ. ಇಂತಹ ಕಪಟ ಕವಿಗಳನ್ನು ಹೇಳ ಹೆಸರಿಲ್ಲದಂತೆ ನಿರ್ಮೂಲ ಮಾಡಿರುತ್ತಾರೆ.

ಇಷ್ಟೇ ಅಲ್ಲದೆ, ರತ್ನ ಸಿಂಹಾಸನವನ್ನಲಂಕರಿಸಿರುವ ಮಹಾಪ್ರಭುಗಳು ಹಿಂದೆಂದೂ ಯಾವೊಬ್ಬ ರಾಜ ಮಹಾರಾಜರು ಪ್ರೋತ್ಸಾಹಿಸದೆ ತಳ್ಳಿ ಹಾಕಿದ್ದ ವಿಜ್ಞಾನಿಗಳಿಗೆ ಇವರು ಎಲ್ಲ ರೀತಿಯಲ್ಲೂ ಪ್ರೋತ್ಸಾಹಿಸುತ್ತಿದ್ದಾರೆ. ಅದರ ಪರಮ ಸಾಕ್ಷಿಯಾಗಿ ಪ್ರಭುಗಳ ಅನಂತ ಪ್ರೋತ್ಸಾಹದಿಂದ ವಿಜ್ಞಾನಯಂತ್ರ ತಜ್ಞರಾದ ಐದು ಜನ ಯಂತ್ರ ತಜ್ಞರು ತಮ್ಮ ಅಪಾರ ಬುದ್ಧಿ ಶಕ್ತಿಯಿಂದ ಇಪ್ಪತ್ತೇಳೂವರೆ ಕೋಷಗಳು ವೇಗವಾಗಿ ಭೂಮಿಯಲ್ಲೂ ಅಂತರಿಕ್ಷದಲ್ಲೂ ಗಾಳಿರೂಪದಲ್ಲಿ (ವಿಮಾನದಂತೆ) ಓಡಬಲ್ಲ 'ಯಂತ್ರಾಶ್ವ' (ಯಂತ್ರದ ಕುದುರೆ) ಮತ್ತು ಬಿಸಿಲು ತಾಪವನ್ನು ತಂಪಾಗಿರಿಸುವ (ಶೆಕೆ) ಗಾಳಿಯಂತ್ರವನ್ನು ತಯಾರು ಮಾಡಿರುವುದು ಮಹಾದಾಶ್ಚರ್ಯದ ಸಂಗತಿ" ಎಂದಾಗ.... ಎಲ್ಲ ಸಭಿಕರು ಪರಮಾಶ್ಚರ್ಯ ಚಕಿತರಾದರೂ ಅಷ್ಟೇ ದಿಘ್ಮೂಢರಾಗಿ ಬಿಟ್ಟಿದ್ದರು.

ಆ ಅಪೂರ್ವ ಯಂತ್ರವನ್ನು ನೋಡಲೇ ಬೇಕೆಂಬ ಕುತೂಹಲದಿಂದ ಎಲ್ಲರೂ ಒಕ್ಕೊರಲಿನಿಂದ "ಉಘೆ, ಉಘೆ.... ಆ ಯಂತ್ರಗಳನ್ನು ಈ ರಾಜ ಸಭೆಯಲ್ಲಿ ಪ್ರದರ್ಶಿಸಬೇಕು" ಎಂದು ಮತ್ತೆ ಮತ್ತೆ ಅಲ್ಲಿ ನೆರೆದಿದ್ದ ಸಮಸ್ತರು ಸಿಂಹಾಸನಾಧೀಶನಾದ ಭೋಜರಾಜನನ್ನು ಭಿನ್ನವಿಸಿಕೊಂಡರು.

ಆಗ ಆ ಯಂತ್ರ ತಯಾಕರನ್ನು ಕೂಡಲೆ ಕರೆಸಿ, ಅಂಥ ಅಪೂರ್ವ ಯಂತ್ರವನ್ನು ವಿಶಾಲ ಸಭೆ ಮುಂದೆ ಹಾಜರು ಪಡಿಸಿದರು.

ಆ ಯಂತ್ರ ತಯಾರಿಸಿದವರಲ್ಲಿ ಒಬ್ಬರು ಯಂತ್ರ ಕುದುರೆಯ ಮೇಲೆ ಕುಳಿತು, ಅದಕ್ಕೆ ಅಳವಡಿಸಿದ್ದ ಯಂತ್ರವನ್ನು ತಿರುಗಿಸಿದನು. ಕೂಡಲೆ ಅದು ಎಲ್ಲರಿಗೂ ಆಶ್ಚರ್ಯವನ್ನುಂಟು ಮಾಡುವಂತೆ ಆ ವಿಶಾಲ ರಾಜಸಭಾಭವನವನ್ನು ಸುತ್ತು ಹಾಕಿ ಮಹಾದ್ವಾರದ ಮೂಲಕ ಗಗನ ಮಾರ್ಗವಾಗಿ ಹಾರಾಡಿತು. ನಂತರ ಯಂತ್ರ ಚಾಲಕನ ಕೈಚಳಕದಂತೆ ಮತ್ತೆ ಸ್ವಸ್ಥಾನಕ್ಕೆ ಬಂದು ನಿಂತಿತು.

ಅದರಂತೆ ಗಾಳಿಯಂತ್ರವನ್ನು ಪ್ರಯೋಗಿಸಿ ತೋರಿಸಿದರು.

ಇದರಿಂದ ಅಲ್ಲಿ ನೆರೆದಿದ್ದ ಎಲ್ಲರೂ ಮಂತ್ರಮುಗ್ಧರಾದರು.

ಅನಂತರ ಮುಂದುವರಿದ ವಂಧಿ ಮಾಗಧರು ಭೋಜರನ್ನು ಇನ್ನೂ ಅನೇಕ ರೀತಿಯಲ್ಲಿ ಗುಣಗಾನ ಮಾಡಿದರು.

ಅನಂತರ ಕವಿಗೋಷ್ಠಿ ನಡೆಯಿತು. ಕವಿಗಳಲ್ಲಿ ಶ್ರೇಷ್ಠನಾದ ದಂಡಿಯು ಭೋಜರಾಜನ ಆಳ್ವಿಕೆಯನ್ನು ಪ್ರಶಂಸಿಸುತ್ತ ಸಂತೋಷ ಪಡಿಸಿದನು.

ಈ ವೈಭವ ಸಂಭ್ರಮವನ್ನು ನೋಡುತ್ತಾ ಮನದಲ್ಲೆ ಆನಂದ ಪಡುತ್ತಿದ್ದ ಪಾರ್ವತಿ ಪರಮೇಶ್ವರರು ಭೋಜರಾಜನ ವ್ಯವಸ್ಥೆಗೆ ಸಂಪ್ರೀತರಾಗಿದ್ದರು. ಆದರೆ ಪಾರ್ವತಿಗೇಕೋ ಮನಸ್ಸಿನಲ್ಲಿ ಏನೋ ಒಂದು ಬಗೆಯ ಕಾತರ ಆತಂಕ. ಪಕ್ಕದಲ್ಲೆ ಕುಳಿತಿದ್ದ ಪತಿಯ ತೊಡೆ ಚಿವುಟುತ್ತಾ, "ರೀ, ಈ ರಾಜ ಸಭೆಯಲ್ಲಿ ನರ್ತನ ಮಾಡಬೇಕು ಅಂತ ಲೋಕ ಬಿಟ್ಟು ಈ ಲೋಕಕ್ಕೆ ಬಂದಿದ್ದೀರಲ್ಲ, ಇಲ್ಲಿ ನಿಮಗೆ ಸಿಗೋದು ಬರಿ ಊಟ ಮಾತ್ರ, ಬೇಗ ಯಾವುದಾದರೂ ಒಂದು ಉಪಾಯ ಮಾಡ್ರೀ" ಎಂದಳು.

ಆಗ ಪರಮೇಶ್ವರನು ಮುಗುಳ್ನಕ್ಕು ಹೇಳುತ್ತ "ದೇವಿ ಇದೋ..... ನಿನ್ನಿಚ್ಛೆಯಂತೆಯೇ ಆಗಲಿ" ಎಂದನು. ತನ್ನ ದಿವ್ಯ ದೃಷ್ಟಿಯಿಂದ ಓರ್ವ ಶಿವಗಣನನ್ನು ಬರಮಾಡಿಕೊಂಡನು. ಆತ ಶಿವನ ಆಜ್ಞೆಯಂತೆ ಪ್ರಮುಖ ಸಮವಸ್ತ್ರಧಾರಿ ರಾಜಧೂತನ ವೇಷ ಧರಿಸಿದವನಾಗಿ ಸಭೆ ನಡೆಯುತ್ತಿದ್ದ ಒಡ್ಡೋಲಗಕ್ಕೆ ಬಂದು, ಸಿಂಹಾಸನಾರೂಢನಾಗಿದ್ದ ಭೋಜರಾಜರಿಗೆ ಕೇಳಿಸುವಂತೆ ವಿನಯ ಭೂಷಣನಾಗಿ ಹೇಳುತ್ತಾ,

"ಅಖಂಡ ಸಾಮ್ರಾಜ್ಯ ಚಕ್ರವರ್ತಿ ಸಾರ್ವಭೌಮರಿಗೆ ಜಯವಾಗಲಿ, ತಮ್ಮಲ್ಲಿ ಒಂದು ಭಿನ್ನಹ.... ಆರ್ಯಾವರ್ತದ ಉತ್ತರ ಭಾಗವಾದ ಕಾಶೀ ಪಟ್ಟಣದಲ್ಲಿ ಬಹು ವಿಖ್ಯಾತರಾದ ಭರತ ನಾಟ್ಯ ಕಲಾವಿದ ದಂಪತಿಗಳು ಇಲ್ಲಿಗೆ ಬಂದಿದ್ದಾರೆ. ಅವರು ತಮ್ಮ ರಾಜ ಸಭೆಯಲ್ಲಿ ಭರತ ನಾಟ್ಯವನ್ನು ಪ್ರದರ್ಶಿಸಲು ಬಂದಿದ್ದಾರೆ. ಅವಕಾಶ ಮಾಡಿಕೊಡಬೇಕೆಂದು ಕೇಳುತ್ತಿದ್ದಾರೆ." ಎಂದನು.

ಆ ಮಾತು ಕೇಳುತ್ತಲೇ ಭೋಜರಾಜನು ಮಂತ್ರಿಯ ಕಡೆ ಮುಖ ತಿರುಗಿಸಿದ.

ಆಗ ಮಹಾಮಂತ್ರಿಯೂ ಪ್ರಭುಗಳೊಡನೆ ಭಿನ್ನವಿಸುತ್ತ "ಪ್ರಭುಗಳು ಮನ್ನಿಸಬೇಕು. ಈಗಾಗಲೇ ವೇಳೆಯಾಗಿರುವುದರಿಂದಲೂ - ಇನ್ನೂ ಅನೇಕ ಕಾರ್ಯಕ್ರಮಗಳು ಇರುವುದರಿಂದಲೂ - ಸಮಯದ ಅಭಾವವಿರುವುದರಿಂದಲೂ ಈ ಭರತ ನಾಟ್ಯ ಕಲಾವಿದರಿಗೆ ಅವಕಾಶ ಕೊಡಲು ಸಾಧ್ಯವಾಗದು..... ಇನ್ನು ಪ್ರಭುಗಳ ಚಿತ್ತ' ಎಂದನು ಮಂತ್ರಿ.

"ಸರಿ, ಭರತನಾಟ್ಯ ಪ್ರದರ್ಶಿಸಲು ಬಂದಿರುವ ನಾಟ್ಯ ದಂಪತಿಗಳಿಗೆ, ಮುಂದಿನ ರಾಜಸಭೆಯಲ್ಲಿ ಅವಕಾಶ ಮಾಡಿಕೊಡುವುದಾಗಿ ತಿಳಿಸಿ ಬಿಡಿ" ಎಂದು ಆಜ್ಞೆ ಮಾಡಿ ಬಿಟ್ಟರು ಭೋಜರಾಜರು.

ಮಾರು ವೇಷಧಾರಿ ಶಿವಗಣನು ಆ ಸ್ಥಳದಿಂದ ನಿರ್ಗಮಿಸಿದನು.

ಆಗ ವೇಷಧಾರಿ ನಾರದರು ಶಿವ ಪಾರ್ವತಿಯರೊಡನೆ ಸಂಭಾಷಿಸುತ್ತಾ "ನೋಡಿದೆಯಾ ಶಂಕರ. ಈ ಭೂಲೋಕದಲ್ಲಿ ಅದರಲ್ಲೂ ಈ ಭೋಜರಾಜನ ಆಸ್ಥಾನದಲ್ಲಿ ನಮ್ಮ ಆಟ ಏನೇನೂ ನಡೆಯದು. ಇಲ್ಲಿ ಭೋಜರಾಜನು ಹೇಳಿದ್ದೇ ವೇದ ವಾಕ್ಯ...... ನಡೆಯಿರಿ. ನಮ್ಮ ಲೋಕವೇ ನಮಗೆ ಪರಮ ಲೇಸು" ಎಂದು ನುಡಿದರು ನಾರದರು.

ಆಗ ಶಿವನು ಪಾರ್ವತಿಯನ್ನು ಕುರಿತು "ದೇವಿ ಈಗ ನೀನೇ ಏನಾದರೊಂದು ಉಪಾಯ ಮಾಡಬೇಕು" ಎಂದನು.

ಆಗ ಪಾರ್ವತಿಯು ತನ್ನ ದಿವ್ಯದೃಷ್ಟಿಯಿಂದ ಆ ಧಾರಾನಗರವನ್ನೊಮ್ಮೆ ನೋಡಿದಳು. ಹಾಗೆ ನೋಡುತ್ತಿದ್ದ ಅವಳ ದಿವ್ಯದೃಷ್ಟಿ ನೇರವಾಗಿ ಆ ಧಾರಾನಗರದ ಒಂದೆಡೆ ಪುಟ್ಟ ಅರಮನೆಯೋಪಾದಿಯಲ್ಲಿ ಸುಂದರವಾಗಿದ್ದ ಒಂದು ಮನೆಯತ್ತ ಹರಿಯಿತು.

ಆ ಮನೆಯೇ ರಾಜ ನರ್ತಕಿಯ ಮನೆಯಾಗಿತ್ತು.

ರಾಜನರ್ತಕಿಯನ್ನು ರಾಜಸಭೆಗೆ ನರ್ತಿಸಲು ಸಲುವಾಗಿ ಕರೆದುಕೊಂಡು ಹೋಗಲು ಮನೆಯ ಮುಂದೆ ಚಿನ್ನದ ಮೇನಾ ಸಿದ್ಧವಾಗಿತ್ತು. ರಾಜಭಟರು, ಭೋಯಿಗಳು ಅವಳಿಗಾಗಿ ಕಾಯುತ್ತಿದ್ದರು.

ಆಗ ದೇವಿಯು ಒಂದು ಉಪಾಯ ಹೂಡಿದರು.

ಸರ್ವಾಂಗ ಸುಂದರಳಾದ ರಾಜನರ್ತಕಿಯೂ ತನ್ನ ಏಕಾಂತ ಅಲಂಕಾರ ಕೋಣೆಯಲ್ಲಿ ತನ್ನ ಆಪ್ತ ಸಖಿ.... ನರ್ಮದಾಳೊಂದಿಗೆ ಆಳೆತ್ತರದ ನಿಲುವು ಗನ್ನಡಿಯ ಮುಂದೆ ವಿಶೇಷವಾಗಿ ಅಲಂಕಾರ ಮಾಡಿಕೊಳ್ಳುತ್ತಾ, ತುಂಬಿದ ಉತ್ಸಾಹದಿಂದ "ಇಂದು ಚಕ್ರವರ್ತಿ ಸಾರ್ವಭೌಮನಾದ ಭೋಜರಾಜರ ಮುಂದೆ ಎಂದಿಲ್ಲದ ಅಮೋಘ ಭರತನಾಟ್ಯ ಪ್ರದರ್ಶಿಸಬೇಕು. ಭಾರೀ ಮೊತ್ತದ ಬಹುಮಾನ ಪಡೆಯಬೇಕು" ಎಂದು ತನ್ನ ಮನದಾಶೆಯನ್ನು ತಿಳಿಸಿದಳು. ನಾಟ್ಯಕ್ಕೆ ತಕ್ಕ ಉಡುಗೆ ತೊಡುಗೆ ದಿವ್ಯ ರತ್ನಾಭರಣಗಳಿಂದ ಭರತನಾಟ್ಯಕ್ಕೆ ಸರಿ ಹೊಂದುವಂತೆ ವಿಶೇಷವಾಗಿ ಸಿಂಗರಿಸಿಕೊಂಡಳು. ಸೌಂದರ್ಯದಲ್ಲಿ ಸಾಕ್ಷಾತ್ ರಂಭೆ ತಿಲೋತ್ತಮೆಯರನ್ನೂ ಮೀರಿಸುವಂತೆ ಕಾಣುತ್ತಿದ್ದಳು.

ಅವಳ ಅಂದಚಂದವನ್ನು ಗಮನಿಸಿದ ಪಾರ್ವತಿ ದೇವಿಯೂ ಸಹ ಆಶ್ಚರ್ಯ ಚಕಿತಳಾದಳು."ಹೌದು ಇವಳಿಗಿಂತಲೂ ಅತಿಶಯವಾದ ದೇಹ ಸೌಂದರ್ಯದಿಂದ ಪತಿಯೊಡನೆ ನಾಟ್ಯ ಪ್ರದರ್ಶಿಸಬೇಕು" ಎಂದು ಮತ್ತೊಮ್ಮೆ ಛಲ ತೊಟ್ಟಳು.

ಪಾರ್ವತಿಯಾದರೂ ಬರೀ ಛಲದಲ್ಲಿ ಕಾಲಹರಣ ಮಾಡುತ್ತಿದ್ದಾಳೆಯೇ ಹೊರತು, ಮುಂದೇನು ಮಾಡಬೇಕೆಂಬುದೇ ತಿಳಿಯದಾದಳು.

ಸರ್ವಾಲಂಕಾರ ಭೂಷಿತಳಾದ ರಾಜ ನರ್ತಕಿಯು ನಿಲುವುಗನ್ನಡಿಯಲ್ಲಿ ಮತ್ತೊಮ್ಮೆ ನಖಶಿಖಾಂತವಾಗಿ ತನ್ನ ಅತಿಶಯವಾದ ಶೃಂಗಾರ ರೂಪದ

ಪ್ರತಿಬಿಂಬವನ್ನು ಮತ್ತೊಮ್ಮೆ ನೋಡಿಕೊಳ್ಳುತ್ತಾ ತೃಪ್ತಿಯ ನಗೆ ಬೀರಿ, ಆಪ್ತ ಸಖಿಯೊಡನೆ ಆ ಅಲಂಕಾರ (ಏಕಾಂತ) ಕೋಣೆಯಿಂದ ಹೊರಟು ಬಂದಳು.

ಮನೆ ಹೊರಗಡೆ ಅವಳಿಗಾಗಿ ಬೋಯಿಗಳು ರಾಜಭಟರು ಕಾದಿದ್ದರು.

ಆಗ ಪಾರ್ವತಿ ದೇವಿಗೆ ಸಮಯೋಚಿತವಾದ ಒಂದು ಉಪಾಯ ಹೊಳೆಯಿತು. "ಹೌದು, ಈ ಭೂಲೋಕದ ನಾರಿಯರು ಪ್ರತಿ ಮಾಸದಲ್ಲೂ 'ರಜಸ್ವಾಲೆ' ಯಾಗುವುದು ಪ್ರಕೃತಿ ನಿಯಮ. ಆ ಸಂದರ್ಭದಲ್ಲಿ ಸ್ತ್ರೀಯರು ಯಾವುದೇ ಶುಭ ಕಾರ್ಯಗಳಿಗೂ ಹೋಗರು. ಮೈಲಿಗೆಯಿಂದಾಗಿ ಏನೊಂದನ್ನು ಸ್ಪರ್ಶಿಸುವುದೂ ಇಲ್ಲ." ಎಂದರಿತ ಪಾರ್ವತಿ, ಆ ಕ್ಷಣವೇ ಮಾಯಾ ಜಾಲವೋ ಎಂಬಂತೆ ಅಪೂರ್ವ ಅಗೋಚರ ಶಕ್ತಿಯೊಂದು, ಸಖಿ ನರ್ಮದಾಳೊಂದಿಗೆ ಮೇನೆಯತ್ತ ಹೋಗುತ್ತಿದ್ದ ರಾಜನರ್ತಕಿಯ ಉದರದಲ್ಲಿ ಹೊಕ್ಕೇ ಬಿಟ್ಟಿತು.

ಆಗ ರಾಜನರ್ತಕಿಗೆ ಒಂದು ರೀತಿಯ ಗುಪ್ತಬಾಧೆ ಉಂಟಾಗಿ ನರ್ಮದಾಳೊಂದಿಗೆ ಹೇಳುತ್ತಾ"ನರ್ಮದಾ, ನೀನು ಇಲ್ಲೇ ನಿಂತಿರು. ಇದೋ ಬಂದು ಬಿಡುತ್ತೇನೆ" ಎಂದು ಸ್ನಾನ ಗೃಹಕ್ಕೆ ಹೊರಟು ಬಂದು ಬಾಗಿಲು ಹಾಕಿಕೊಂಡಳು. ಕ್ಷಣಹೊತ್ತು ಕಳೆದಂತೆ ಸ್ನಾನದ ಮನೆ ಬಾಗಿಲು ತೆರೆದಳು.

ಆಗ ಅವಳಲ್ಲಿದ್ದ ಉತ್ಸಾಹವೆಲ್ಲಾ ಉಡುಗಿ ಹೋಯಿತು. ಖಿನ್ನ ಮನಸ್ಕಳಾಗಿ "ಥೂ, ಈ ಸಂದರ್ಭದಲ್ಲಿಯೇ ಹೀಗಾಗಬೇಕೆ ನಾಚಿಕೆ ಕೇಡು" ಎಂದು ತನ್ನನ್ನು ತಾನೇ ನಿಂದಿಸಿಕೊಂಡಳು. ಹಾಗೆ ನಿರುತ್ಸಾಹಳಾಗಿ ಸಖಿ ನರ್ಮದಾ ಬಳಿಗೆ ಬಂದು ಅವಳೊಡನೆ ತನ್ನ ಸ್ಥಿತಿಯನ್ನು ಹೇಳುತ್ತಾ "ನರ್ಮದಾ ನಾನು ಇಂದು ಭರತನಾಟ್ಯ ಪ್ರದರ್ಶಿಸಲು ಬರುವಂತಿಲ್ಲ" ಎಂದಳು ಅತ್ಯಂತ ದುಃಖದಿಂದ.

"ಏಕೆ ಅಕ್ಕ ಏನಾಯಿತು ಈಗ?" ನರ್ಮದ ಗಾಬರಿಯಿಂದ ಕೇಳಿದಳು.

"ಇನ್ನೇನು ಈ ಹೆಂಗಸರಿಗೆ ಪ್ರತಿ ತಿಂಗಳು ಇದ್ದೇ ಇದೆಯಲ್ಲ ಹಾಳು ಗೋಳು. ನಾನು ಈಗ'ರಜಸ್ವಲೆ' ಯನ್ನು ಅನುಭವಿಸುತ್ತಿದ್ದೇನೆ" ಎಂದು ಕಿವಿ ಮಾತನ್ನು ಹೇಳಿ, ಮತ್ತೆ ಮುಂದುವರಿದು ನುಡಿಯುತ್ತ "ನೀನು ಈ ಕೂಡಲೇ ನನಗಾಗಿ ಕಾಯುತ್ತಿರುವ ರಾಜ ಸಭೆಗೆ ಈ ವಿಷಯವನ್ನು ತಿಳಿಸಿ ಬಿಡು" ಎಂದಳು.

ಆಗ ರಾಜ ನರ್ತಕಿಯ ಸಖಿಯು ಆ ರೀತಿ ರಾಜಸಭೆಗೆ ಮಹಾಮಂತ್ರಿಯ ಮೂಲಕ ವಿಷಯವನ್ನು ತಿಳಿಸಲು ಮೇನಾದಲ್ಲಿ ಕುಳಿತು ಹೊರಟಳು.

ಸಭೆ ಪ್ರಾರಂಭವಾದಂತೆ ಪ್ರಥಮವಾಗಿ ಬ್ರಹ್ಮಜ್ಞಾನಿಗಳಾದ ರಾಜಕುಲಗುರುಗಳು ಆ ಮಹಾ ಸಭೆಯನ್ನು ಉದ್ದೇಶಿಸಿ ಮಾತನಾಡುತ್ತಾ "ಈ ಆರ್ಯಾವರ್ತದ ಸಮಸ್ತ ದೇಶಗಳ ಅಧಿಪತಿಯಾದ, ಎಲ್ಲ ಸಾಮಂತ ರಾಜರುಗಳಿಗೆ ಅಜಾತಶತ್ರುವೆನಿಸಿ ಜಗತ್ತಿಗೆ ಏಕಮೇವ ಸೂರ್ಯನಂತೆ ಸುಪ್ರಕಾಶ ಮಾನವಾಗಿ ಬೆಳಗುತ್ತಿರುವ ನಮ್ಮನ್ನೆಲ್ಲರನ್ನು ಆಳುತ್ತಿರುವ ರಾಜಾಧಿರಾಜ ಚಕ್ರವರ್ತಿ ಸಾರ್ವಭೌಮರಾದ ಭೋಜರಾಜರು ಅಸಾಧಾರಣ ಪ್ರತಿಭೆಯಿಂದಲೂ ತಮ್ಮ ಅನಂತ ಮಯವಾದ ರಾಜಧರ್ಮ ರಾಜನೀತಿ ಇವುಗಳೇ ಮುಂತಾದ ಧರ್ಮ ಸೂತ್ರದಿಂದ ಇಡೀ ವಿಶ್ವಕ್ಕೆ ಆದರ್ಶರಾಜರಾಗಿ,

ಚಕ್ರವರ್ತಿ ಸಾರ್ವಭೌಮರಾಗಿ - ಪ್ರಜಾಕೋಟಿಯರನ್ನು ಪರಿಪಾಲಿಸುತ್ತಿರುವುದು ನಮ್ಮೆಲ್ಲರ ಭಾಗ್ಯ. ಇಂತಹ ಆದರ್ಶ ರಾಜರ ಆಳ್ವಿಕೆಯಲ್ಲಿ ಈ ದೇಶದ ಪ್ರಜೆಗಳಾಗಿರುವ ನಾವುಗಳು ನಿಜಕ್ಕೂ ಪರಮ ಧನ್ಯರು." ಎಂದು ಪ್ರಶಂಸೆಯ ಮಾತುಗಳನ್ನಾಡಿದರು.

"ತಮ್ಮ ಆಳ್ವಿಕೆಯ ಸುವರ್ಣಯುಗವಾದ ಈ ಕಾಲದಲ್ಲಿ ಸಮಸ್ತ ದೇಶಗಳು ಸುಭಿಕ್ಷದಿಂದಿದೆ. ಪ್ರಜೆಗಳೆಲ್ಲರೂ ಸ್ವರ್ಗೀಯ ಸುಖ ಸಂತೋಷದಿಂದ ಸಂತೃಪ್ತರಾಗಿದ್ದಾರೆ."ಎಂದು ನಾನಾರೀತಿಯಾಗಿ ಭೋಜರಾಜನನ್ನು ಗುಣಗಾನ ಮಾಡಿದರು - ವಿದ್ವನ್ಮಣಿಗಳು ಕವಿಗಳು ಮುಕ್ತ ಕಂಠದಿಂದ ಹೊಗಳಿದರು.

ರಾಜ ನರ್ತಕಿಯಿಂದ ಅಮೋಘ ನೃತ್ಯ ಪ್ರಾರಂಭವಾಗುವುದರಲ್ಲಿತ್ತು.

ಆಗ ಯಾರೊಬ್ಬರು ಅರಿಯಲಾಗದ ಹಾಗೆ ಮಾರುವೇಷದಾರಿ ಶಿವಪಾರ್ವತಿಯರಿಂದ ಒಂದು ಪವಾಡವು ನಡೆದು ಹೋಗಿತ್ತು.

ಆ ರಾಜ ಸಭೆಯಲ್ಲಿ ನೆರೆದಿದ್ದ ಸಮಸ್ತರು ರಾಜನರ್ತಕಿಯ ಬರುವಿಕೆಯನ್ನೇ ಎದುರು ನೋಡುತ್ತಿದ್ದರು.

ರಾಜ ನರ್ತಕಿಗೆ ನಾಟ್ಯವಾಡಲು ಅಡ್ಡಿಯಾದ ವಿಷಯ ಅವಳ ಸಖಿ ನರ್ಮದಾ ಮೂಲಕ ಮಹಾಮಂತ್ರಿಗೆ ತಿಳಿಯಿತು.

ತಡ ಮಾಡದೆ ಮಹಾಮಂತ್ರಿಯೂ ಅತ್ತ ಸಿಂಹಾಸನದ ಹಿಂಬದಿಯ ಮೂಲಕ (ಸಭೆಯು ನಡೆಯುತ್ತಿರುವಾಗ ಯಾರೊಬ್ಬರು ಮುಂದೆ ಬರುವಂತಿರಲಿಲ್ಲ) ಭೋಜರಾಜನ ಬಳಿಗೆ ಬಂದು ಶಿರಬಾಗಿ ಕಿವಿ ಮಾತನ್ನು ಹೇಳುತ್ತ ವಿಷಯ ತಿಳಿಸಿದರು.

ಆಗ ಭೋಜರಾಜನು "ಬಂದಿರುವ ನೃತ್ಯ ದಂಪತಿಗಳಿಂದ ಭರತ ನಾಟ್ಯ ಕಾರ್ಯಕ್ರಮ ಜರುಗಲಿ" ಎಂದು ಆಜ್ಞಾಪಿಸಿದನು.

ತನ್ನ ಭಗವದ್ಭಕ್ತರಿಗೆ ಕೇಳಿದ ವರವನ್ನು ಹಿಂದು ಮುಂದು ನೋಡದೆ ಕ್ಷಣಾರ್ಧದಲ್ಲಿ 'ತಥಾಸ್ತು' ಎಂದು ಕೊಟ್ಟು ಬಿಡುತ್ತಿದ್ದ 'ವರಧಾತ'ನೆಂದೇ ನಾಮಾಂಕಿತನಾದ ಶಿವನಿಗೆ ಅಂದು ಶಿವತಾಂಡವ ನೃತ್ಯಕ್ಕಾಗಿ ರಾಜಾಜ್ಞೆಯನ್ನು ಕಾಯಬೇಕಾದ ಪರಿಸ್ಥಿತಿ ಒದಗಿಬಂದಿತ್ತು.

ಶಿವತಾಂಡವ ನೃತ್ಯ ಮಾಡಲು ಭೋಜರಾಜನಿಂದ ಕರೆ ಬಂದಂತೆ "ಸಧ್ಯ, ನಾವು ಭೂಲೋಕಕ್ಕೆ ಬಂದಿದ್ದಕ್ಕೂ ಸಾರ್ಥಕವಾಯಿತು" ಎಂದು ತೃಪ್ತಿಯ ನಗೆ ಬೀರಿದ್ದರು ಶಿವ ಪಾರ್ವತಿಯರು.

ನಾರದರೂ ಸಹ ಯಾವುದೋ ಬಂಧನದಿಂದ ವಿಮೋಚನೆಯಾದಂತೆ ಆನಂದ ಪುಳಕಿತರಾದರು.

ಆಗ ಆ ಮೂವರಲ್ಲೂ ಉತ್ಸಾಹದ ಚಿಲುಮೆ ಉಕ್ಕಿ ಹರಿಯುತ್ತಿತ್ತು.

ಅವರು ಶಿವತಾಂಡವ ನೃತ್ಯಮಾಡಲು ಯಾವುದೊಂದು ವಸ್ತ್ರಾಭರಣಗಳನ್ನು ತಂದಿರಲಿಲ್ಲವಾದರೂ ಬಯಸಿದ್ದು ನಿಮಿಷ ಮಾತ್ರದಲ್ಲಿ ಬಂದೊದಗುವ ಆ ಮಹಾಮಹಿಮರಿಗೆ ಏನೊಂದನ್ನೂ ಹೊತ್ತು ತರಬೇಕಾದ ಅಗತ್ಯವಿರಲಿಲ್ಲ.

ಭರತನಾಟ್ಯ ಎಷ್ಟು ಹೊತ್ತಿಗೆ ಪ್ರಾರಂಭವಾಗುವುದೋ ಎಂಬ ಕುತೂಹಲ ಸಾಮಂತರಾಜರುಗಳಾದಿಯಾಗಿ ಪ್ರತಿಯೊಬ್ಬರಲ್ಲೂ ಮೂಡಿತ್ತು.

ವೈಭವದಿಂದ ಕೂಡಿದ ಆ ರಾಜಸಭೆಯಲ್ಲಿ ನೃತ್ಯ ನಾಟ್ಯಕ್ಕಾಗಿಯೇ ಪ್ರತ್ಯೇಕವಾದ ಸ್ಥಳ ಸಜ್ಜುಗೊಳಿಸಲಾಗಿತ್ತು.

ನಾಟ್ಯವೇದಿಕೆಯೂ ಅತ್ಯಂತ ಸುಂದರವಾದ ಚಿತ್ರಚಿತ್ರಿತವಾದ ಆಕರ್ಷಕ ಬಣ್ಣದ ರತ್ನಖಚಿತ ರತ್ನಗಂಬಳಿಯಿಂದ ರಂಜಿಸುತ್ತಿತ್ತು.

ಮಹಾ ತೇಜಸ್ವಿಗಳಾದ ನಾರದರು ನಟ್ಟುವಾಂಗ ಹೇಳುವ ವೇಷಧಾರಿಯಾಗಿ ಕಂಚಿನ ತಾಳದೊಂದಿಗೆ ನಾಟ್ಯವೇದಿಕೆಗೆ ಬಂದು ಒಂದೆಡೆ ಕುಳಿತರು.

ಆಗ ನಾರದರು ತಮ್ಮ ಸಂಗೀತದ ಸಹಪಾಟಿಯೇ ಆದ ತುಂಬುರನನ್ನು ಮನದಲ್ಲೆ ಸ್ಮರಿಸಿಕೊಂಡರು. ಕ್ಷಣಮಾತ್ರದಲ್ಲಿ ತುಂಬುರರು ಸಹ ತಮ್ಮ ದೇವವೀಣೆಯೊಂದಿಗೆ ಬಂದು ನಾರದರಿಗೆ ಕಾಣಿಸಿಕೊಂಡರು. ಆಗ ನಾರದರು ಪರಮ ಸಂತೋಷಚಿತ್ತರಾದರು.

ಇದನ್ನರಿತ ಶಿವನೂ ಸಹ ತನ್ನ ಲೋಕದಿಂದ ಶಿವತಾಂಡವ ನೃತ್ಯಕ್ಕೆ ತಕ್ಕ ಸಮಸ್ತ ಪಕ್ಕ ವಾದ್ಯ ತಂಡದವರನ್ನು ಬರಮಾಡಿಕೊಂಡನು.

ಕೊಂಚ ಹೊತ್ತು ಕಳೆದಂತೆ ಜೋಡಿ ಮೃದಂಗ, ಘಟ, ಕೊಳಲು, ಮುಂತಾದ ಅನೇಕ ರೀತಿಯ ನಾಟ್ಯ ಸಮಂಜಸವಾದ ಪಕ್ಕ ವಾದ್ಯಗಾರರ ತಂಡವು ತಮ್ಮ ತಮ್ಮ ವಾದ್ಯದೊಂದಿಗೆ ಸಾಲಾಗಿ ಬಂದು ವೇದಿಕೆಯಲ್ಲಿ ಅಲಂಕರಿಸಿದರು.

ಅದರಲ್ಲಿ ಘಟ ನುಡಿಸುವವನಂತೂ ಎಲ್ಲರೂ ಬಿದ್ದು ಬಿದ್ದು ನಗುವ ಹಾಗೆ ಅತ್ಯಂತ ಗಿಡ್ಡನಾಗಿ,'ಘಟ' ದಂತೆ ಡೊಳ್ಳು ಹೊಟ್ಟೆಯುಳ್ಳವನಾಗಿ, ದಪ್ಪದಾದ ತಲೆ, ಸಣ್ಣ ಕತ್ತು, ಪುಟ್ಟ ಬಾಯಿ, ದುಂಡನೆಯ ಕಪ್ಪು ಕಣ್ಣುಗಳು, ಆನೆ ಕಿವಿ, ತಲೆಯ ಮುಂಭಾಗವು ಕೂದಲು ರಹಿತ ಬೋಳು ಬೋಳಾದರೆ, ಹಿಂದಕ್ಕೆ ಕತ್ತಿನಿಂದ ಭುಜದವರೆಗೂ ಇಳಿಬಿಟ್ಟ ಜಡೆಗೂದಲು... ಅದೊಂದು ಪುರುಷಾಕೃತಿಯ ವಿಚಿತ್ರ ಪ್ರಾಣಿಯೋ ಎಂಬಂತೆ ನೋಡಿದರೆ ನಗು ಬರುವಂತಿದ್ದನು.

ಬಹುಶಹ ಸಭೆಯಲ್ಲಿ ಎಲ್ಲರು ನಗುವಂತಾಗಲಿ ಎಂದು ಶಿವನು ಅಂತಹ ವಿಚಿತ್ರ ಶಿವಗಣನನ್ನು ಕರೆಸಿದ್ದನೊ ಎಂಬಂತೆ ಭಾಸವಾಗುತ್ತಿತ್ತು.

ಪಕ್ಕವಾದ್ಯದವರು ಎಲ್ಲರೂ ಸಿದ್ಧರಾಗಿದ್ದು, ನಾಟ್ಯ ದಂಪತಿಗಳು ಬರುವುದನ್ನೆ ಎದರು ನೋಡುತ್ತಿದ್ದರು.

ಭವ್ಯಾಲಂಕೃತವಾಗಿದ್ದ ನಾಟ್ಯದ ಉಡುಗೆಯೊಡನೆ ನಾಟ್ಯವೇದಿಕೆಗೆ ಬಂದರು. ಮಾರು ವೇಷದಲ್ಲಿದ್ದ ಶಿವಪಾರ್ವತಿಯರು.

ಜಗತ್ತಿನ ಸಕಲ ಸೌಂದರ್ಯಗಳಲ್ಲಿ ಅತಿಶಯವಾದ ಸೌಂದರ್ಯ ಶಿವಸೌಂದರ್ಯ.

ಪಾರ್ವತಿ ಪರಮೇಶ್ವರರು ಮಾರುವೇಷದಲ್ಲಿ ಬಂದಿದ್ದ ಮಾತ್ರಕ್ಕೆ ಅವರ ಸೌಂದರ್ಯ ಮರೆ ಮಾಚಿರಲಿಲ್ಲ.

ಅತಿ ವೈಭವದಿಂದ ಕೂಡಿದ ಆ ರಾಜಸಭೆಯಲ್ಲಿ ತುಂಬಿ ನೆರೆದಿದ್ದ ಸಮಸ್ತರು ನಾಟ್ಯದಂಪತಿಗಳ ಆಗಿನ ಅಲೌಕಿಕ ಅದ್ಭುತ ಸಿರಿ ಸೌಂದರ್ಯವನ್ನು ಪ್ರತ್ಯಕ್ಷವಾಗಿ ಕಂಡು, ಎಲ್ಲರೂ ಮಂತ್ರಮುಗ್ಧರಾಗಿ ಬಿಟ್ಟಿದ್ದರು.

ಸಿಂಹಾಸನದ ಮೇಲೆ ಪತ್ನಿಸಮೇತನಾಗಿ ಕುಳಿತಿದ್ದ ಭೋಜರಾಜನು ಸಹ ಆ ಸೌಂದರ್ಯಕ್ಕೆ ಅತಿಶಯ ರೀತಿಯಲ್ಲಿ ಆಶ್ಚರ್ಯಪಟ್ಟನು.

"ಇಂತಹ ಅವರ್ಣನೀಯ ಚೆಲುವ - ಚೆಲುವೆಯರಾದ ಈ ನಾಟ್ಯ ದಂಪತಿಗಳು ಬಹುಶಹ ಮಾನವ ಲೋಕದವರು ಅಲ್ಲವೇ ಅಲ್ಲ - ದೇವಲೋಕದವರೇ ಇರಬಹುದು - ಅಥವಾ ಗಂಧರ್ವ ಲೋಕದಿಂದ ಬಂದಿರಬಹುದು" ಎಂದು ನಾನಾ ರೀತಿಯಲ್ಲಿ ಊಹಿಸಿಕೊಂಡು ಮೂಕವಿಸ್ಮಿತನಾಗಿದ್ದನು....... ರತ್ನಸಿಂಹಾಸನದಲ್ಲಿ ವಿರಾಜಿಸುತ್ತಿದ್ದ ಭೋಜರಾಜನು.

ಮಾರುವೇಷಧಾರಿಗಳಾದ ಶಿವಪಾರ್ವತಿಯವರನ್ನು ಆಶ್ಚರ್ಯ ತುಂಬಿದ ಕಣ್ಣುಗಳಿಂದ ಮತ್ತೊಮ್ಮೆ ನೋಡುತ್ತ ಅವ್ಯಕ್ತ ಅನುಭವವನ್ನು ಮನಸ್ಸಿನಲ್ಲೆ ತರ್ಕಿಸುತ್ತ "ಬಹುಶಹ ಇವರು ಈ ಹಿಂದಿನ ಜನ್ಮದಲ್ಲಿ ನನಗೆ ತೀರ ಹತ್ತಿರದ ಬಂಧುಗಳೋ ಅಥವಾ ಆತ್ಮೀಯ ಗೆಳೆಯರೇ ಆಗಿದ್ದರೂ ಆಗಿರಬಹುದು: ಈಗ ಇವರನ್ನು ಈ ರೀತಿಯಾಗಿ ನೋಡುತ್ತಿದ್ದೇನೆ" ಎಂದು ಅವ್ಯಕ್ತರೀತಿಯಲ್ಲಿ ಚಿತ್ತ ಚಂಚಲನಾಗಿದ್ದ ಭೋಜರಾಜ.

ಸಕಲ ವಿದ್ಯಾವಿಶಾರದನು, ಬ್ರಹ್ಮಜ್ಞಾನಿಯೂ ಆದ ಭೋಜರಾಜನು ಅಕ್ಷರಸಹ ಬ್ರಹ್ಮಾಂಶ ಸಂಭೂತನೇ ಆಗಿದ್ದು, ಕಾಲಾನುಗುಣವಾಗಿ ಭಗವಂತನ ಪ್ರೇರಣಾನುಸಾರವಾಗಿ ಈ ಭೂಲೋಕದಲ್ಲಿ ಭೋಜರಾಜನಾಗಿ ಜನ್ಮ ತಳೆದು ಬಂದಿರುವುದರಿಂದ ಆ ಹಿಂದಿನ ಜನ್ಮದ (ದೇವಲೋಕದ) ಸ್ಮೃತಿ......, ತ್ರಿಮೂರ್ತಿಗಳ ಗುಂಪಿನವರೇ ಆದ ಬ್ರಹ್ಮ - ಶಿವರ ಹತ್ತಿರದ ದೇವತಾ ಸಂಬಂಧವೆ ಆ ರೀತಿಯಾಗಿ ಭೋಜರಾಜನಲ್ಲಿ ಅವಿಸ್ಮರಣೆ ಉಂಟಾಗಲು ಕಾರಣವಾಗಿತ್ತು.

ತ್ರಿಭುವನ ಪಾಲಕನಿಗೆ ನೆಪ ಮಾತ್ರಕ್ಕೆ ನಾಟ್ಯಾಚಾರ್ಯರಾಗಿ ಗುರು ಪೀಠವನ್ನಲಂಕರಿಸಿ ಸ್ವತಹ ತಾಳ ಹಿಡಿದು ಕುಳಿತಿದ್ದ ನಾರದರು, ವಿನೋದ ನೋಟದಿಂದ ಎಲ್ಲಾ ಪಕ್ಕವಾದ್ಯದವರನ್ನು ಒಮ್ಮೆ ನೋಡಿ, ನಂತರ ನಾಟ್ಯ ಭಂಗಿಯಲ್ಲಿ ಸಿದ್ಧರಾಗಿದ್ದ

ಶಿವಪಾರ್ವತಿಯರನ್ನು ಭಕ್ತಿ ತುಂಬಿದ ಮನಸ್ಸಿನಿಂದ ಆಪಾದಮಸ್ತಕವಾಗಿ ನೋಡಿ ಮನಸ್ಸಿನಲ್ಲಿಯೇ ಕೋಟಿ ನಮಸ್ಕಾರ ಹಾಕುತ್ತ "ಆಹಾ! ಎಲ್ಲ ಶಿವ ಲೀಲೆ" ಎಂದು ಮನದಲ್ಲಿಯೇ ಸ್ಮರಿಸಿಕೊಂಡರು.

ನಂತರ ಸಿಂಹಾಸನಾರೂಢನಾಗಿದ್ದ ಮಹಾ ವೈಭವ ಸುಂದರ ಪುರುಷ ಚಕ್ರವರ್ತಿ ಸಾರ್ವಭೌಮನಾದ ಭೋಜರಾಜನನ್ನೊಮ್ಮೆ ನೋಡುತ್ತ ಕಂಚಿನ ತಾಳದಿಂದ ಮಿಂಚಿನ ಭರದಲ್ಲಿ 'ಠಣ್' ಎಂದು ಅಮೋಘವಾಗಿ ಶಬ್ದಗೈದರು.

ಆ ರೀತಿ ಶಬ್ದಗೈದ ಮಧುರನಾದಕ್ಕೆ ಭೋಜರಾಜನ ಹೃದಯವನ್ನು ತಟ್ಟಿ ಎಬ್ಬಿಸಿದಂತೆ ಭಾಸವಾಯಿತು.

ಮರು ಕ್ಷಣದಲ್ಲಿಯೇ ಇಡಿ ರಾಜ ಸಭೆಯೇ ಚಕಿತಗೊಂಡಿತು.

ನಟ್ಟುವಾಂಗದಿಂದ ಎಲ್ಲರ ಮನಸ್ಸನ್ನು ಸೂಜಿಗಲ್ಲಿನಂತೆ ಸೂರೆಗೊಂಡು ಬಿಟ್ಟಿದ್ದರು ನಾರದರು.

ನಟ್ಟುವಾಂಗ ಹೇಳುತ್ತಿದ್ದ ಮಾತ್ರಕ್ಕೆ, ಪುಂಗೀನಾದಕ್ಕೆ ನಾಗಸರ್ಪವು ಹೆಡೆ ಬಿಚ್ಚಿ ನರ್ತಿಸುವಂತೆ ರಾಜ ಮಹಾರಾಜರುಗಳು ಸಾಮಂತರು ಪಂಡಿತರು ಅಷ್ಟದಿಗ್ಗಜ ವಿದ್ಮಣಿಗಳು, ಸಕಲ ಕಲಾವಿದರು, ರಾಜಕುಲಗುರುಗಳು, ಮಹಾ ಮಂತ್ರಿ, ಮುಂತಾದ ಪ್ರಮುಖ ಪ್ರಜೆಗಳಾದಿಯಾಗಿ ತುಂಬಿ ನೆರೆದಿದ್ದ ಎಲ್ಲರೂ ಕ್ಷಣಾರ್ಧದಲ್ಲಿ ಮಂತ್ರಮುಗ್ಧರಾಗಿ ಬಿಟ್ಟಿದ್ದರು.

ನಟ್ಟುವಾಂಗದಲ್ಲಿ, ಸಂಗೀತದಲ್ಲಿ ಸಾಹಿತ್ಯದಲ್ಲಿ ನಾರದರು ಸಾಕ್ಷಾತ್ ಸರಸ್ವತಿಗೆ ಸರಿಸಮಾನರಂತೆ - ಎಂದಿಲ್ಲದ ಅಭೂತಪೂರ್ವವಾದ ನಾಟ್ಯ ಕೀರ್ತನೆ - ನಟ್ಟುವಾಂಗ ಮೂಲಕ ಎಲ್ಲರ ಮನಸ್ಸನ್ನು ಸೆಳೆದುಕೊಂಡು ಬಿಟ್ಟಿದ್ದರು.

ನಾಟ್ಯಲೋಲನಾದ ಸಾಕ್ಷಾತ್ ಶಿವನೇ ತನ್ನ ಸತೀಮಣಿಯಾದ ಪಾರ್ವತಿಯೊಂದಿಗೆ ನಾಟ್ಯವಾಡುತ್ತಿದ್ದಾನೆ ಎಂದ ಮೇಲೆ ಇನ್ನು ಆ ಅದ್ಭುತ ನಾಟ್ಯ ವೈಭವವನ್ನು ಕೃತಿಯಲ್ಲಿ ವರ್ಣಿಸಲು ಸಾಧ್ಯವಿಲ್ಲವೆಂಬಂತೆ ಅಂದಿನ ಆ ಅಮೋಘ ನೃತ್ಯ ನೈಪುಣ್ಯತೆ ವೈಶಿಷ್ಟ್ಯತೆ ಎಲ್ಲರಿಗೂ ಸಾಗರ ಸಂತೋಷವನ್ನುಂಟು ಮಾಡಿತ್ತು.

ಬಣ್ಣಿಸಲಾಗದ ಅತ್ಯಮೋಘ ಶಿವತಾಂಡವ ನೃತ್ಯವನ್ನು ನೇತ್ರಾನಂದಮಯವಾಗಿ ಕುತೂಹಲದಿಂದ ನೋಡುತ್ತಿದ್ದ ಪ್ರೇಕ್ಷಕರು ಆಗಾಗ ಚಪ್ಪಾಳೆಯ ಸುರಿಮಳೆಯೇ ಹರಿಯಿತು.

ಭೋಜರಾಜನ ಹುಟ್ಟಿದ ಹಬ್ಬದ ಸಲುವಾಗಿ ವೈಕುಂಠಲೋಕ ಬ್ರಹ್ಮಲೋಕದಿಂದ ಆಗಮಿಸಿದ್ದು, ಭೋಜರಾಜನಿಗೆ ಹರಸಿ ಶುಭಕೋರಿ ಪುನಹ ದೇವಲೋಕಕ್ಕೆ ಹೋಗಿ ಬಿಡಬೇಕಾಗಿದ್ದ ಲಕ್ಷ್ಮೀ ಸರಸ್ವತಿಯರು ಸಹ, ಸಾಕ್ಷಾತ್ ಶಿವನಿಂದಲೇ ಶಿವ ತಾಂಡವ ನೃತ್ಯ ಎಂದರಿತ ಅವರುಗಳೂ ಸಹ ತಮ್ಮ ತಮ್ಮ ಲೋಕವನ್ನು ಮರೆತು ಭೋಜರಾಜನ ಸಿಂಹಾಸನದ ಎಡಬಲದಲ್ಲಿ ತಮ್ಮದೇ ಆದ

ಕಮಲ - ಹಂಸ ಪೀಠದಲ್ಲಿ ಕುಳಿತು ಆ ಶಿವ - ತಾಂಡವ ನೃತ್ಯ ವೈಭವ ವೈಖರಿಯನ್ನು ಮೈಮರೆತು ವೀಕ್ಷಿಸುತ್ತ ಪಾರ್ವತಿ ಪರಮೇಶ್ವರರ ಆ ತಾಂಡವ ಲೀಲಾ ವಿನೋದಕ್ಕೆ ಮೂಕ ವಿಸ್ಮಿತರಾಗಿ ಬಿಟ್ಟಿದ್ದರು (ಅಗೋಚರ).

ಆ ವಿದ್ಯಾಭಿಮಾನಿ ದೇವತೆಯಾದ ಸರಸ್ವತಿಗಂತೂ, ತಾನೂ ಸಹ ತನ್ನ ವೀಣೆಯೊಡನೆ ಪಕ್ಕ ವಾದ್ಯದವರ ಜೊತೆಗೂಡಿ ವೀಣೆಯನ್ನು ನುಡಿಸುತ್ತ ನಾಟ್ಯಲೋಲನಾದ ಪರಮೇಶ್ವರನಿಗೆ ಮತ್ತಷ್ಟು ಸಂತೋಷಗೊಳಿಸಲೆ' ಎಂದು ಅವಳ ಮನಸ್ಸು ಮಿಡಿಯುತ್ತಿತ್ತು. ಆದರೆ ಹಾಗೆ ಮಾಡಲಿಲ್ಲ.

'ಭೂಲೋಕದಲ್ಲಿ ಭೋಜರಾಜನ ಆಸ್ಥಾನದಲ್ಲಿ ಶಿವಪಾರ್ವತಿಯರಿಂದ ಅಮೋಘ ಭರತನಾಟ್ಯ ನಡೆಯುತ್ತಿದೆ' ಎಂದರಿತ ದೇವಲೋಕದ ಇಂದ್ರಾದಿ ಸಕಲ ದೇವತೆಗಳು ಸಹ ಗಗನ ಮಂಡಲದಲ್ಲಿ ತುಂಬಿ ನೆರೆದರು. ಆ ಅತಿಶಯವಾದ ಶಿವತಾಂಡವ ನೃತ್ಯವನ್ನು ಎಂದಿಲ್ಲದ ಪರಮ ಸಂತೋಷದಿಂದ ವೀಕ್ಷಿಸುತ್ತಿದ್ದರು.

ಎಲ್ಲ ಪಕ್ಕವಾದ್ಯದವರು, ತಮ್ಮ ತಮ್ಮ ಮೇರು ಅನುಭವದಿಂದ ನೃತ್ಯಕ್ಕೆ ತಕ್ಕ ಹಾಗೆ ನುಡಿಸುತ್ತ ಜನಮನವನ್ನು ಸೂರೆ ಗೊಂಡಿದ್ದರು.

ಜೊತೆಗೆ ಹಾಸ್ಯದ ಸವಿಯೂ ಇದೆ ಎಂಬಂತೆ ಘಟ ಬಾರಿಸುತ್ತಿದ್ದ ಗಿಡ್ಡನ ಡೊಳ್ಳು ಹೊಟ್ಟೆಯ ವಿಚಿತ್ರ ಪುರುಷನು ತನ್ನ ವಿಕಟ ವಿಚಿತ್ರ ಹಾವಭಾವದಿಂದ ಅಲ್ಲಿದ್ದ ಎಲ್ಲರನ್ನು ನಕ್ಕನಗಿಸುತ್ತಿದ್ದನು.

ಮಧುರವಾದ ಸಂಗೀತ, ಅಮೋಘವಾದ ನೃತ್ಯದ ಜೊತೆಗೆ ನಗೆ ಬುಗ್ಗೆಯೂ ಸಾಗರದಂತೆ ಸಂತೋಷ ತಂದಿತ್ತು ಎಲ್ಲರಲ್ಲೂ.

ಬಹುಶಹ ಪರಮೇಶ್ವರನು ತನ್ನ ನಾಟ್ಯದ ಮಧ್ಯೆ ಪ್ರೇಕ್ಷಕರು ನಕ್ಕು ನಗಲಿ ಎಂದೇ ಆ ರೀತಿಯ ಶಿವಗಣನೊಬ್ಬನನ್ನು ಆರಿಸಿ ಬರಮಾಡಿಕೊಂಡಿರಬೇಕು ಎಂಬಂತೆ ಊಹೆಯನ್ನುಂಟು ಮಾಡಿತ್ತು.

ಶಿವಶಿವೆಯರ ನೃತ್ಯವೈಖರಿಯ ಮೃದಂಗದ ತಾಳಕ್ಕೆ ತಕ್ಕ ಹಾಗೆ ಆ ಇಬ್ಬರ ಕಾಲ್ಗೆಜ್ಜೆಯ ಝುಣಕ್ಕರನಾದ ಪ್ರತಿಯೊಬ್ಬ ಪ್ರೇಕ್ಷಕರ ಹೃದಯದಲ್ಲೂ ಆ ತಾಳಶಬ್ಧಗಳು ಧ್ವನಿಗೂಡಿ - ಎಲ್ಲರನ್ನು ದಿಘ್ಮೂಡರನ್ನಾಗಿ ಮಾಡಿತ್ತು. ಅದರಂತೆ ಎಲ್ಲ ಪಕ್ಕವಾದ್ಯದವರ ವಾದ್ಯಗಳೂ ಸಹ ಪ್ರೇಕ್ಷಕರನ್ನೂ ಸಂಗೀತಲೋಕಕ್ಕೆ ಕರೆದೊಯ್ದು ಬಿಟ್ಟಿತ್ತು.

ಸಿಂಹಾಸನಾದೀಶನಾಗಿದ್ದ ಭೋಜರಾಜನಿಗಂತೂ ಆ ಶಿವತಂಡದ ನೃತ್ಯದ ಅಮೋಘ ವೈಖರಿಯು ಅಮೃತಪಾನಮಾಡಿದಂತೆ ಆಗಿ ಅವಿಸ್ಮರಣೀಯವಾಗಿತ್ತು. ಅತಿಶಯವಾದ ಸುಖವನ್ನನುಭವಿಸುತ್ತಿದ್ದನು.

'ಇವರನ್ನು ನನ್ನ ಆಸ್ಥಾನದಲ್ಲಿಯೇ ಇಟ್ಟುಕೊಂಡುಬಿಡೋಣ. ಇವರಿಗಾಗಿ ಒಂದು ಪ್ರತ್ಯೇಕವಾದ ಬಹುಸುಂದರವಾದ ಅರಮನೆಯನ್ನು ನಿರ್ಮಾಣ

ಮಾಡಿಬಿಡೋಣ. ನನ್ನ ದೇಶದಲ್ಲಿ ಸದಾ ಎಲ್ಲರಲ್ಲೂ ತುಂಬಿತುಳುಕಾಡುತ್ತಿರುವ ಸಂಸ್ಕೃತ ಪಾಂಡಿತ್ಯದ ಜೊತೆಗೆ ಸಂಗೀತ ಪಾಂಡಿತ್ಯವೂ ಸಹ ಎಲ್ಲೆಡೆಯಲ್ಲಿ ವ್ಯಾಪಿಸಲಿ. ದೇಶದ ಎಲ್ಲ ಪ್ರಜೆಗಳು ಸಂಗೀತಗಾರರಾಗಲಿ' ಎಂದು ಕುಳಿತಲ್ಲೆ ಸವಿಗನಸನ್ನನುಭವಿಸುತ್ತಿದ್ದ ಮಹಾ ರಸಿಕನಾದ ಭೋಜರಾಜ.

ಆ ರೀತಿಯಾಗಿ ಅಂದು ಭೋಜರಾಜನ ಆಸ್ಥಾನದಲ್ಲಿ ಆತನು ಮಾಡಿದ ಅಗಣಿತ ಪುಣ್ಯ ಫಲದಿಂದ ಸಾಕ್ಷಾತ್ ಶಿವಪಾರ್ವತಿಯರಿಂದಲೇ ಅಭೂತ ಪೂರ್ವವಾದ ಶಿವತಾಂಡವ ನೃತ್ಯವು ನಡೆಯುವಂತಹ ಮಹಾಭಾಗ್ಯ ಅವನ ಪಾಲಿನದಾಗಿತ್ತು.

ನೃತ್ಯಮುಗಿಯುತ್ತಿದ್ದಂತೆ ತನ್ನಿಂದ ತಡೆದುಕೊಳ್ಳಲಾಗದಂತಹ ಅಗಾಧವಾದ ಉನ್ಮಾದ ಸಂತೋಷದಿಂದ ತಾನು ಪತ್ನೀಸಮೇತನಾಗಿ ಕುಳಿತಿದ್ದ ಸಿಂಹಾಸನದಿಂದ ಇಳಿದುಬಂದು ವೇಷಧಾರಿ ಶಿವನನ್ನು ಅತಿಶಯ ಉನ್ಮಾದ ಸಂತೋಷದಿಂದ ಬಿಗಿದಪ್ಪಿಯೇ ಬಿಟ್ಟನು ಭೋಜರಾಜ.

ಅಂದು ಭೋಜರಾಜನ ಎಲ್ಲ ವೈಭವಕ್ಕಿಂತ ನಾಟ್ಯ ವೈಭವದಿಂದ ಮರೆಯಲಾಗದ ಮಹಾಸುದಿನವಾಗಿತ್ತು.

ನೃತ್ಯ ಕಾರ್ಯಕ್ರಮ ಮುಗಿಯುತ್ತಿದ್ದಂತೆ ನಾರದರ ಮನಸ್ಸಿನಲ್ಲಿ ಅನೇಕ ವಿಚಾರಗಳ ಸಮರವೇ ಆಯ್ತು. ಇಂತಹ ಮಹಾವ್ಯಕ್ತಿತ್ವವಿರುವ ಚಕ್ರವರ್ತಿ ಭೋಜರಾಜನ ಬಗ್ಗೆ ಬ್ರಹ್ಮ ವಿಷ್ಣು ಮಹೇಶ್ವರರಿಗೆ ಏಕಿಷ್ಟು ಮಮತೆ? ಆ ರಾಜನ ಪೂರ್ವ ಜನ್ಮದ ಕತೆಯಾದರೂ ಏನು? ಇದನ್ನು ತಿಳಿಯುವ ಬಗ್ಗೆ ಅವರ ಆಸಕ್ತಿ ಹೆಚ್ಚಿತು. ಅದನ್ನು ತಿಳಿಯಲು ಕಾಲಹರಣ ಮಾಡದೆ, ಪುನಹ ನೇರವಾಗಿ ವೈಕುಂಠಕ್ಕೆ ಹೋಗಲು ನಿರ್ಧರಿಸಿದರು.

ಸಭೆಯಲ್ಲಿದ್ದ ಸಾಮಂತ ರಾಜರು, ಮಹಾ ಮಹಾ ಪಂಡಿತರು, ಬ್ರಾಹ್ಮಣೋತ್ತಮರು, ಪ್ರಜೆಗಳಾದಿಯಾಗಿ ಎಲ್ಲರೂ ಆ ಶಿವ ತಾಂಡವ ನೃತ್ಯಕ್ಕೆ ಸೂಜಿಕಲ್ಲಿನಂತೆ ಮೈಮರೆತು ಆನಂದ ಪರವಶರಾಗಿ ಬಿಟ್ಟಿದ್ದರು.

ಆ ನೃತ್ಯ ದಂಪತಿಗಳನ್ನು ಬಗೆ ಬಗೆಯಾಗಿ ಗುಣಗಾನ ಮಾಡುತ್ತಿದ್ದರು.

ಶಿವ ತಾಂಡವ ನೃತ್ಯ ಮುಗಿಯಿತು.

ಸ್ವತಃ ಕಲಾ ಪ್ರೇಮಿಯಾದ ಭೋಜರಾಜನು ಸಹ ಆ ಶಿವ ತಾಂಡವ ನೃತ್ಯದಿಂದ ಎಂದಿಲ್ಲದ ರೀತಿಯಲ್ಲಿ ಆನಂದ ಪರವಶನಾಗಿ ಬಿಟ್ಟಿದ್ದನು.

ಅವನನ್ನು ಮುಕ್ತ ಕಂಠದಿಂದ ಹೊಗಳಿದನು.

ಮಹಾ ವೈಭವದಿಂದ ಜರುಗಿದ ಅಂದಿನ ರಾಜಸಭೆಯ ಸಮಸ್ತ ಕಾರ್ಯ ಕಲಾಪಗಳು ಮುಗಿದಂತೆ, ಅಲ್ಲಿಯೇ ಇದ್ದ ತನ್ನ ಸಹೋದರ ಮುಂಜರಾಜನಿಗೆ ಆಜ್ಞಾಪಿಸುತ್ತಾ "ಮುಂಜರಾಜನೆ, ಈ ನಾಟ್ಯ ದಂಪತಿಗಳನ್ನು ನನ್ನ ಏಕಾಂತ ಮಂದಿರಕ್ಕೆ

ಕರೆದುಕೊಂಡು ಹೋಗು. ನಾನು ಈ ಕ್ಷಣ ನನಗಾಗಿ ಅರಮನೆಯ ಮುಂದೆ ಕಾದಿರುವ ಪ್ರಜೆಗಳ ದರ್ಶನ ಮಾಡಿ ಬರುತ್ತೇನೆ" ಎಂದು ಉತ್ಸಾಹದಿಂದ ರಾಜಕುಲಗುರುಗಳು, ಮಹಾಮಂತ್ರಿ ಹಾಗೂ ರಾಜ ಪರಿವಾರದೊಂದಿಗೆ ಅರಮನೆಯ ಹೊರಾಂಗಣಕ್ಕೆ ಬಂದರು.

ಭೋಜರಾಜನು ಅದೆಷ್ಟು ನಿಗರ್ವಿ? ಅದೆಷ್ಟು ವಿನಯ ಭೂಷಣನು. "ಪ್ರಜೆಗಳು ರಾಜದರ್ಶನಕ್ಕಾಗಿ ಕುತೂಹಲದಿಂದ ಕಾದಿದ್ದಾರೆ. ಅದರಂತೆ ಮಹಾರಾಜನು ಸಹ ಪ್ರಜೆಗಳ ದರ್ಶನಕ್ಕಾಗಿ ಹಾತೊರೆಯುತ್ತಿದ್ದಾನೆ" ಎಂಬ ಅರ್ಥದಲ್ಲಿ; ಅದೆಷ್ಟು ಪ್ರೀತಿ ವಾತ್ಸಲ್ಯ ಅಂತಃಕರಣಗಳನ್ನು ತನ್ನ ಹೃದಯ ಮಂದಿರದಲ್ಲಿ ಅಡಗಿಸಿಟ್ಟದ್ದನು ಎಂಬುದು ತಿಳಿಯುತ್ತದೆ. ರಾಜನ ಅತಿಶಯವಾದ ಆದರ್ಶ ಅವನಲ್ಲಿ ತುಂಬಿ ತುಳುಕಾಡುತ್ತಿತ್ತು.

ರಾಜಾಜ್ಞೆಯನ್ನು ಹೊತ್ತ ಮುಂಜರಾಜನು ಆ ಮೂವರು ಕಲಾವಿದರನ್ನು ಭವ್ಯವಾದ ಏಕಾಂತ ಮಂದಿರಕ್ಕೆ ಕರೆದುಕೊಂಡು ಹೋದನು.

ಮಾರು ವೇಷಧಾರಿಗಳಾದ ಶಿವ ಪಾರ್ವತಿಯರಿಗೆ - ನಾರದರಿಗೆ ಅದೊಂದೂ ಬೇಡವಾಗಿತ್ತು.

ಆದರೆ ಭೂಲೋಕಕ್ಕೆ ಬಂದ ಮೇಲೆ ಅದರಲ್ಲೂ ಚಕ್ರವರ್ತಿ ಸಾರ್ವಭೌಮನಾದ ಭೋಜರಾಜನ ಅಂತಃಕರಣವೆಂಬ ಅರಮನೆಯಿಂದ ಕಣ್ಣು ತಪ್ಪಿಸಿ ಹೋಗುವಂತಿಲ್ಲ (ಅಂತರ್ಧಾನರಾಗುವಂತಿಲ್ಲ) ಹಾಗೂ ರಾಜಾಜ್ಞೆಯೋ ಎಂಬಂತೆ, ಮುಂಜರಾಜರೊಡನೆ ಏಕಾಂತ ಭವನಕ್ಕೆ ಬಂದರು ಶಿವಪಾರ್ವತಿ ನಾರದರು.

"ಕುಭೇರವ ವೈಭವಕ್ಕೆ ಸರಿ ಸಮಾನವಾದ ಭೋಜರಾಜನ ಏಕಾಂತ ಮಂದಿರದ ವೈಭವವನ್ನು ಕಂಡು ಅತಿಶಯದಿಂದ ಪುಳಕಿತರಾದರು. ಮುಂಜರಾಜನು ವಿನಯದಿಂದ ನುಡಿಯುತ್ತ "ದಯಮಾಡಿ ಈ ಪೀಠಗಳನ್ನು ಅಲಂಕರಿಸಬೇಕು" ಎಂದು ಅತ್ಯಂತ ಭಕ್ತಿ ಮತ್ತು ಕೈಮುಗಿದು ಬೇಡಿಕೊಂಡನು. ಆಗ ಶಿವಪಾರ್ವತಿ ನಾರದರು ಅಲ್ಲಿಯೇ ಇದ್ದ ರಾಜ ಪೀಠದಲ್ಲಿ ಭೋಜರಾಜನ ಬರುವಿಕೆಯನ್ನು ಎದುರು ನೋಡುತ್ತ ಕುಳಿತರು.

ಪ್ರಜೆಗಳಿಗೆ ದರ್ಶನವಿತ್ತು ಬಂದ ಭೋಜರಾಜನು ರತ್ನ ಖಚಿತ ರಾಜಪೀಠದಲ್ಲಿ ಉಪಸ್ಥಿತರಾಗಿದ್ದ ಮಾರುವೇಷದ ನೃತ್ಯ ದಂಪತಿಗಳನ್ನು ಹಾಗೂ ವೇಷಧಾರಿ ನಾರದರನ್ನು ಕುರಿತು ಪ್ರಶ್ನಿಸುತ್ತ,

"ತಮ್ಮ ಹೆಸರು?" ಎಂದು ಮೊದಲು ಶಿವನನ್ನು ಕೇಳಿದ.

"ಶಂಕರ ವರ್ಮ" ಶಿವ ನಗುತ್ತಲೇ ಉತ್ತರಿಸಿದ.

ಆಗ ವೇಷಧಾರಿ ನಾರದರು ಅಲ್ಲಿಯೇ ಇದ್ದ ಪಾರ್ವತಿಯತ್ತ ಮುಖಬೀರಿ "ಅದೆಲ್ಲ ಮರ್ಮ" ಎಂದು ಹಾಸ್ಯ ಬೆರೆತ ದನಿಯಿಂದ ವಿನೋದವಾಗಿಯೇ ನುಡಿದರು.

ನಾರದರ ಹಾಸ್ಯ ಬೆರೆತ ಮಾತಿಗೆ ಮನದಲ್ಲೆ ಮುಸಿಮುಸಿನಕ್ಕಿದ್ದಳು ಪಾರ್ವತಿದೇವಿ.

"ತಮ್ಮ ವಾಸಸ್ಥಳ?"

- ಭೋಜರಾಜ ವೇಷಧಾರಿ ಶಿವನನ್ನು ಮತ್ತೊಮ್ಮೆ ಪ್ರಶ್ನಿಸಿದ.

ಆಗ ವೇಷಧಾರಿ ನಾರದರು ಉತ್ತರಿಸಿದರು.

"ಇವರ ವಾಸಸ್ಥಳ ಹಿಮಾಲಯ ಪರ್ವತದ ತಪ್ಪಲಿನಲ್ಲಿ. ಹೆಚ್ಚು ಕಡಿಮೆ ಕೈಲಾಸ ಪರ್ವತದ ಸಮೀಪದಲ್ಲಿ.........."

"ಅಲ್ಲಿ ತಡೆದುಕೊಳ್ಳಲಾರದಂತಹ ಹಿಮ ಬೀಳುತ್ತಿರುತ್ತದೆ. ನೀವು ಮೂವರು ಹೇಗೆ ತಾನೆ ವಾಸಿಸುತ್ತಿರುವಿರಿ?"

ಆ ಮಧ್ಯೆ ಬಾಯಿ ಹಾಕಿ ಪ್ರಶ್ನಿಸಿದಳು ಭೋಜರಾಜನ ಪಟ್ಟ ಮಹಿಷಿಯಾದ ಲೀಲಾವತಿ.

ಆಗ ನಾರದರು ಚಮತ್ಕಾರ ನುಡಿಗಳಿಂದ ವಿನೋದವಾಗಿ ಉತ್ತರಿಸುತ್ತಾ ---

"ಅಂಥ ಚಳೀಲಿ ಸತತವಾಗಿ ಭರತನಾಟ್ಯ ಅಭ್ಯಾಸ ಮಾಡಿದ್ದಕ್ಕೆ ತಾನೆ - ಇವರು ಶಿವತಾಂಡವ ನೃತ್ಯದಲ್ಲಿ ತ್ರಿಲೋಕಗಳಲ್ಲೂ ಖ್ಯಾತಿ ಪಡೆದಿರುವುದು" ಎಂದರು.

ಆಗ ಭೋಜರಾಜನು ವಿಸ್ಮಯದಿಂದ ವೇಷಧಾರಿ ನಾರದರನ್ನು ಪ್ರಶ್ನಿಸುತ್ತ "ಅಂದರೆ ನೀವುಗಳು ಈ ಭೂ ಲೋಕದ ದೇಶ ವಿದೇಶಗಳಲ್ಲಿ ಸಂಚರಿಸುತ್ತಿರುವುದು ಮಾತ್ರವಲ್ಲದೆ, ದೇವ ಲೋಕ, ಇಂದ್ರ ಲೋಕಗಳಿಗೂ ಹೋಗುವಂಥ ಸಾಮರ್ಥ್ಯ ಹೊಂದಿರುವಿರಾ" ಎಂದು ಪ್ರಶ್ನಿಸಿದರು.

ಆಗ ನಾರದರಿಗೆ ಏನು ಉತ್ತರಿಸಬೇಕೆಂಬುದೇ ತಿಳಿಯಲಿಲ್ಲ.

ಆಗ ಶಿವನು ಭೋಜರಾಜರೊಡನೆ ಸಂಭಾಷಿಸುತ್ತಾ "ಅಂದ್ರೆ, ಹಾಗಂದ್ರೆ, ಈ ಧಾರನಗರದ ಚಕ್ರವರ್ತಿ ಸಾರ್ವಭೌಮರಾದ ತಮ್ಮ ಕೀರ್ತಿ ಮೂರು ಲೋಕಗಳಲ್ಲೂ ವ್ಯಾಪಿಸಿರುವಂತೆ ನಮ್ಮ ನಾಟ್ಯದ ಕೀರ್ತಿಯೂ ಸಹ ತ್ರಿಲೋಕಗಳಲ್ಲಿಯೂ ಪಸರಿಸಿದೆ. ಎಂದು ಅರ್ಥ" ಎಂದು ನುಡಿದ ಶಂಕರ ವರ್ಮ.

"ಓಹೋ ಆ ರೀತೀನೇ ಅದರರ್ಥ!"

"ಆ ರೀತಿನೋ ಯಾವ ರೀತಿನೋ - ಸದ್ಯ ಈ ಪ್ರಶ್ನಾ ಲೋಕದಿಂದ ಮುಕ್ತರಾದರೆ ಸಾಕು" ಎಂದು ಪಾರ್ವತಿಯ ಮುಖವನ್ನೇ ಮತ್ತೊಮ್ಮೆ ನೋಡುತ್ತ ನುಡಿದರು ನಾರದರು.

ಆಗ ಪಾರ್ವತಿ ಏನೊಂದೂ ಮಾತನಾಡದೆ ತನ್ನ ಕೋಮಲ ಕೈ ಬೆರಳಿನಿಂದ ಮೂಗಿನ ಹೊಳ್ಳೆಯನ್ನು ತಿರುಚಿಕೊಳ್ಳುತ್ತಿದ್ದಳು.

ಆಗ ಭೋಜರಾಜನ ಧರ್ಮ ಪತ್ನಿಯಾದ ಲೀಲಾವತಿಯು ಪಾರ್ವತಿಯನ್ನು ಪ್ರಶ್ನಿಸುತ್ತ "ನಿಮ್ಮ ಹೆಸರು?"

"ಅವರ ಹೆಸರು ಶಿವಮ್ಮ ಅಂತ. ಈ ಶಿವಮ್ಮ, ಆ ಶಂಕರ ವರ್ಮ ಇಬ್ಬರೂ ಬಾಲ್ಯದಿಂದಲೂ ನಾಟ್ಯಭ್ಯಾಸ ಮಾಡುತ್ತ ಹಾಗೇ ದೊಡ್ಡವರಾದಂತೆ ಇಬ್ಬರೂ ಒಬ್ಬರಿಗೊಬ್ಬರು ಮೆಚ್ಚಿ ಮದುವೆ ಮಾಡಿಕೊಂಡುಬಿಟ್ಟರು. ಇಬ್ಬರೂ ಭರತನಾಟ್ಯದಲ್ಲಿ ಖ್ಯಾತಿಯನ್ನು ಗಳಿಸಿದರು" ಎಂದರು ನಾರದರು.

ಆಗ ಶಿವೆಯು ಲೀಲಾವತಿಯನ್ನು ಕುರಿತು ಸಂಭಾಷಿಸುತ್ತಾ "ಇವರು ಸಹ ಅಷ್ಟೆ ನೃತ್ಯ ನಾಟಕದ 'ನಟ್ಟುವಾಂಗ', ಸಂಗೀತ ಇವುಗಳಲ್ಲಿ ಮಹಾ ಪ್ರವೀಣರು. ಒಂದೊಂದು ಸಾರಿ ಇವರ ನಟ್ಟುವಾಂಗಕ್ಕೆ ಸರಿಸಮಾನರಾಗಿ ನರ್ತಿಸುವುದೇ ಬಹಳ ಪ್ರಮಾದವಾಗಿ ಬಿಡುತ್ತೆ ನನಗೆ. ಅಂದ ಹಾಗೆ ಇವರ ಹೆಸರು ಹರಿಹರ ಅಂತ" ಎಂದು ನಾರದರನ್ನು ಪರಿಚಯಿಸಿದಳು. ಪಾರ್ವತಿ ಹೇಳಿದ್ದು ಲೀಲಾವತಿಗೆ ಕೇಳಿಸಿರಲಿಲ್ಲ.

"ಅಂದಹಾಗೆ ಇವರ ಹೆಸರು" ಎಂದು ಲೀಲಾವತಿ ಪಾರ್ವತಿಯನ್ನು ಕೇಳಿದಳು. "ಹರಿಹರಭಟ್ಟಚಾರ್ಯ ಅಂತ" ಎಂದು ನುಡಿದಳು ಪಾರ್ವತಿ.

ಆಗ ಲೀಲಾವತಿಯು "ಅಂದಹಾಗೆ ಹರಿಹರ ಭಟ್ಟಚಾರ್ಯರೇ, ತಾವೇಕೆ ತಮ್ಮ ಧರ್ಮ ಪತ್ನಿಯನ್ನು ಕರೆದುಕೊಂಡು ಬರಲಿಲ್ಲ" ಎಂದು ಪ್ರಶ್ನಿಸಿದರು.

ಆಗ ವೇಷಧಾರಿ ನಾರದರಿಗೆ ಎಂದಿಲ್ಲದ ದಿಘ್ರಮೆಯಾಯಿತು. ಮಹಾರಾಣಿಯ ಪ್ರಶ್ನೆಗೆ ಕುಳಿತಲ್ಲೇ ಬೆವತು ಹೋಗಿದ್ದರು. ಏನು ಉತ್ತರ ಕೊಡಬೇಕೆಂಬುದನ್ನು ಅರಿಯದೆ ಆ ಸಂದರ್ಭದಲ್ಲಿ ಶಿವನೇ ಗತಿ ಎಂದು ತಿಳಿದು ಶಿವನ ಮುಖವನ್ನು ಒಮ್ಮೆ ನೋಡಿದರು ನಾರದರು.

ಆಗ ಶಿವನು ಎಚ್ಚೆತ್ತು "ಮಹಾರಾಣಿ...... ಅಂದ ಹಾಗೆ ಅವರು ಆಜೀವ ಬ್ರಹ್ಮಚಾರಿಗಳು. ಅವರಿಗೆ ಈ ಮದುವೆ ಹೆಂಡತಿ ಮಕ್ಕಳ ಕಾಟದಿಂದ ಎಲ್ಲಿ ಸಂಗೀತಕ್ಕೆ ಅಭಾವ ಆಗಿ ಬಿಡುತ್ತೋ ಅಂತ ಮದುವೆ ಮಾಡಿಕೊಳ್ಳುವುದಿಲ್ಲವೆಂದು ಪ್ರತಿಜ್ಞೆ ಮಾಡಿಬಿಟ್ಟಿದ್ದಾರೆ."

"ಹಾಗಾದರೆ ಇವರು ಮಹಾಭಾರತದ ಬೀಷ್ಮರಂತೆ. ಈಗ ಇವರು ಎರಡನೆ ಬೀಷ್ಮರು ಅಂದಂತಾಯಿತು" ಎಂದು ನುಡಿದರು ಪಟ್ಟ ಮಹಿಷಿಯಾದ ಲೀಲಾವತಿ.

"ಹೌದು. ಹೌದು.... ಇವರು ಈಗ ಎರಡನೇ ಬೀಷ್ಮರು" ಎಂದು ವೇಷಧಾರಿ ನಾರದರ ಮುಖವನ್ನೇ ನೋಡುತ್ತ ನುಡಿದ ಶಂಖರ ವರ್ಮ.

"ಅಂದಹಾಗೆ ನಿಮ್ಮ ಮೂವರಿಗೂ ನಾಟ್ಯ ಕಲಿಸಿದ - ನಟ್ಟುವಾಂಗ - ಸಂಗೀತ ಹೇಳಿಕೊಟ್ಟ - ಗುರುಗಳು ಯಾರು? ಈಗ ಅವರು ಎಲ್ಲಿದ್ದಾರೆ" ಎಂದು ಪ್ರಶ್ನಿಸಿದ ಭೋಜರಾಜ.

ಆಗ ವೇಷಧಾರಿ ನಾರದರು ಸಮಯೋಚಿತವಾಗಿ ಉತ್ತರಿಸುತ್ತ ಶ್ರೀಹರಿಯನ್ನೇ ಮನದಲ್ಲಿ ಪ್ರಾರ್ಥಿಸುತ್ತ "ನಮ್ಮ ಮೂವರಿಗೂ ಗುರುಗಳು ನಾರಾಯಣ ಭಟ್ಟಾಚಾರ್ಯ ಅಂತ. ಈಗ ಅವರು ವೈಕುಂಠದಲ್ಲಿ ಇದ್ದಾರೆ" ಎಂದು ಅರ್ಥಗರ್ಭಿತವಾಗಿ ನುಡಿದರು ವೇಷಧಾರಿ ನಾರದರು.

ಆಗ ನಾರದರ ದ್ವಂದ್ವಾರ್ಥದ ಮಾತಿಗೆ ಭೋಜರಾಜನು ಅರ್ಥ ಮಾಡಿಕೊಂಡಿದ್ದು ಹೀಗೆ. "ನಾರಾಯಣ ಭಟ್ಟ ಚಾರ್ಯರು ವೈಕುಂಠದಲ್ಲಿದ್ದಾರೆ ಎಂಬ ಅರ್ಥವನ್ನು ಬೇರೆ ರೀತಿಯ ಅಂದರೆ "ಓಹೋ ಈ ಭೂ ಲೋಕದ ವ್ಯಾಪಾರವನ್ನು ಮುಗಿಸಿ ವೈಕುಂಠವಾಸಿಗಳಾಗಿ ಬಿಟ್ಟರು" ಎಂದು ಅರ್ಥ ಮಾಡಿಕೊಂಡಿದ್ದರು.

ಅಂದರೆ ಇಲ್ಲಿ ಎಲ್ಲಾ ಅರ್ಥವು ಸಮನ್ವಯವಾಗುವಂತೆ ಪರಮಾತ್ಮನು ದಶಾವತಾರವನ್ನು ಮಾಡಿ ಒಂದೊಂದು ಅವತಾರದಲ್ಲೂ ಭೂಲೋಕದ (ವ್ಯಾಪಾರ) ಕಾರ್ಯವನ್ನು ಮುಗಿಸಿ ಪುನಹ ತನ್ನ ಸ್ಥಾನವಾದ ವೈಕುಂಠ ಲೋಕಕ್ಕೆ ಹೋದನು ಎಂಬರ್ಥದಲ್ಲಿ ಎಲ್ಲರ ಪ್ರಶ್ನೋತ್ತರಗಳು ಅರ್ಥಪೂರ್ಣವಾಗಿತ್ತು. ಪ್ರಶ್ನೋತ್ತರಗಳಿಗೆ ಎಲ್ಲರೂ ಮಂಗಳ ಹಾಡಿದರು.

ಆಗ ಭೋಜರಾಜನು ಪೂರ್ವಯೋಜಿತವಾಗಿ ಸಿದ್ಧಪಡಿಸಿಕೊಂಡಿದ್ದ ವಜ್ರ ವೈಡೂರ್ಯಗೋಮೇಧಿಕ ಪುಷ್ಪರಾಗ ಮುತ್ತು ರತ್ನ ಹವಳ ಹಾಗೂ ಸುವರ್ಣ ನಾಣ್ಯಗಳಿಂದ ತುಂಬಿದ್ದ ರತ್ನ ಖಚಿತ ಬಂಗಾರದ ತಟ್ಟೆಯನ್ನು ಆ ಮೂವರಿಗೂ ಅರ್ಪಿಸುತ್ತ ಸಾಷ್ಟಾಂಗ ನಮಸ್ಕಾರ ಮಾಡಿದನು. "ಈ ಕಾಣಿಕೆಯನ್ನು ಸ್ವೀಕರಿಸಬೇಕು" ಎಂದನು ಭೋಜರಾಜ.

ಸಾಕ್ಷಾತ್ ಶಿವಪಾರ್ವತಿಯರಾದ ಹಾಗೂ ಬ್ರಹ್ಮಜ್ಞಾನಿಗಳಾದ ನಾರದರಿಗೆ ಅದರಿಂದ ಏನಾಗಬೇಕಾಗಿದೆ?

"ಹೇ ಚಕ್ರವರ್ತಿ! ಸಾರ್ವಭೌಮನಾದ ಭೋಜರಾಜನೆ! ನಿನ್ನ ಆದರದ ಆತಿಥ್ಯದಿಂದಲೇ ನಾವು ಸಂತುಷ್ಟರಾಗಿದ್ದೇವೆ. ಇದೊಂದೂ ನಮಗೆ ಬೇಕಿಲ್ಲ" ಎಂದು ಬಿಟ್ಟನು. ಆಗ ಪಾರ್ವತಿಯು"ಈ ಎಲ್ಲಾ ಧನಕನಕ ವಜ್ರ ವೈಡೂರ್ಯವನ್ನು ಇಂದಿನ ನೃತ್ಯದಲ್ಲಿ ಪಾಲ್ಗೊಳ್ಳಬೇಕಾಗಿದ್ದ ರಾಜ ನರ್ತಕಿಗೆ ಅರ್ಪಿಸಿರಿ. ಅದೇ ನಮ್ಮ ಸಂತೋಷ" ಎಂದಳು ಪಾರ್ವತಿ.

ಆಗ ಭೋಜರಾಜನಿಗೆ ಮಹದಾಶ್ಚರ್ಯವಾಯಿತು. "ಇವರು ಎಂತಹ ತ್ಯಾಗಿಗಳು" ಎಂದು ಅವರನ್ನು ಮನದಲ್ಲೇ ಗುಣಗಾನ ಮಾಡಿದನು.

ಪುನಃ ಮಾತಿಗಾರಂಬಿಸಿದ ಭೋಜ.

"ಒಳ್ಳೆಯದು. ನಿಮ್ಮ ಇಷ್ಟದಂತೆಯೇ ಈ ಎಲ್ಲ ಕಾಣಿಕೆಯನ್ನು ರಾಜ ನರ್ತಕಿಗೆ ಕೊಟ್ಟು ಬಿಡುತ್ತೇನೆ. ಅಂದಹಾಗೆ ಈಗ ತಾವು ಎಲ್ಲಿ ಇಳಿದುಕೊಂಡಿರುವಿರಿ. ಅಲ್ಲಿಗೆ ನನ್ನ ರಾಜರಥವನ್ನು ಕಳುಹಿಸಿ ಕೊಡುತ್ತೇನೆ" ಎಂದನು.

ಆಗ ನಿಂತಲ್ಲೇ ಅದೃಶ್ಯರಾಗುವಂಥ ಸಾಮರ್ಥ್ಯ ಉಳ್ಳ ಆ ಶಿವ ಪಾರ್ವತಿ ನಾರದರಿಗೆ ರಥದ ಪ್ರಮೇಯವಾದರೂ ಏನಿದೆ? ಆದರೆ ಅಲ್ಲಿ ಆ ರೀತಿ ಹೇಳುವಂತೆಯೂ ಇಲ್ಲ. ಆಗ ನಾರದರು ಸಮಯೋಚಿತವಾದ ಬುದ್ಧಿವಂತಿಕೆಯಿಂದ ಭೋಜರೊಡನೆ ಮಾತನಾಡುತ್ತ "ನಾವು ನರ್ಮದಾ ನದಿಯಲ್ಲಿ ದೋಣಿಯ ಮೂಲಕ ಬಂದಿದ್ದೇವೆ. ನಮ್ಮ ದೋಣಿ ಅಲ್ಲಿಯೇ ಇದೆ. ಅಲ್ಲಿಯವರೆಗೆ ನಮ್ಮನ್ನು ರಾಜರಥದಲ್ಲಿ ಕಳುಹಿಸಿ ಕೊಟ್ಟರೆ ಸಾಕು" ಎಂದರು.

"ಅಗತ್ಯವಾಗಿ ಕಳುಹಿಸುತ್ತೇವೆ" ಎಂದು ಹೇಳಿ ಒಡನೆಯೆ, ಐದು ಪಂಚ ಕಲ್ಯಾಣಿ ಕುದುರೆಗಳಿಂದ ಕಟ್ಟಲ್ಪಟ್ಟ ರಾಜ ರಥವನ್ನು ಅರಮನೆ ಮುಂದೆ ಸಿದ್ಧ ಪಡಿಸಿದನು.

ಭೋಜರಾಜನ ವಿಶೇಷವಾದ ಬೀಳ್ಕೊಡಿಗೆಯಿಂದಾಗಿ ಶಿವಪಾರ್ವತಿ ನಾರದರು ಆ ರಾಜ ರಥವನ್ನೇರಿ ನರ್ಮದಾ ನದೀ ತೀರಕ್ಕೆ ಆಗಮಿಸಿ ಬಂದರು.

ಬಯಸಿದ್ದನ್ನು ಕ್ಷಣದಲ್ಲಿ ಸಿದ್ಧಗೊಳಿಸುವ ಮಹಾಮಹಿಮರಾದ ತ್ರಿಲೋಕ ವಂಧಿತರಾದ ಶಿವಪಾರ್ವತಿಯರ ಮನೋಭಿಷ್ಟದಂತೆ ಆ ನರ್ಮದಾ ನದಿ ತೀರದಲ್ಲಿ ದೋಣಿ ಸಿದ್ಧವಾಗಿತ್ತು.

ಮೂವರು ದೋಣಿಯಲ್ಲಿ ಕುಳಿತರು.

ದೋಣಿಯಲ್ಲಿ ಆ ನರ್ಮದಾ ನದಿಯಿಂದ ದೂರ ಸಾಗಿ ಯಾರೊಬ್ಬರಿಗೂ ಕಾಣದ ಸ್ಥಳದಲ್ಲಿ ಅದೃಶ್ಯರಾಗಿ ಬಿಟ್ಟರು. ದೋಣಿಯೂ ಅದೃಶ್ಯವಾಗಿತ್ತು.

ಶಿವಪಾರ್ವತಿ ನಾರದರು ತಮ್ಮ ತಮ್ಮ ಲೋಕವನ್ನು ಸೇರಿದ್ದರು.

ದೇವಾನು ದೇವತೆಗಳು ಸತ್ಯ ಸಂಧರಾದ ಆದರ್ಶ ಮಾನವರಿಗೆ ಯಾವ ಯಾವ ರೂಪದಲ್ಲಿ ದರ್ಶನ ಕೊಟ್ಟು ಸಾಗುವನೋ, ಎಂಬಂತೆ ಅಂದು ಭೋಜರಾಜ ದಂಪತಿಗಳಿಗೆ ಶಿವ ಪಾರ್ವತಿ ನಾರದರು ಆ ರೀತಿಯಲ್ಲಿ ದರ್ಶನವಿತ್ತು ಸಾಗಿದ್ದರು. ಅದು ಭೋಜರಾಜನ ಅಖಂಡ ಪುಣ್ಯ ವಿಶೇಷ ಫಲವೇ ಆಗಿತ್ತು.

ಶಿವವರ್ಮನು ಹೇಳಿದಂತೆ ಭೋಜರಾಜನು ಆ ಎಲ್ಲ ಬಳುವಳಿಯನ್ನು ರಾಜನರ್ತಕಿಗೆ ಕೊಟ್ಟು ಕಳುಹಿಸಿದನು. ರಾಜನರ್ತಕಿಯು ಆ ಅಪೂರ್ವ ಕಾಣಿಕೆಯನ್ನು ಕಂಡು ಮಹದಾಶ್ಚರ್ಯಭರಿತಳಾದಳು. ವಿಷಯವನ್ನು ತಿಳಿದ ರಾಜನರ್ತಕಿಯು "ಅಹ! ಅಂತಹ ಪುಣ್ಯವಂತ ನೃತ್ಯ ದಂಪತಿಗಳನ್ನು ನೋಡುವ ಭಾಗ್ಯ ನನಗಿಲ್ಲವಾಯಿತು" ಎಂದು ಹಂಬಲಿಸಿದಳು.

# ಜಗನ್ಮೋಹಿನಿ

ಸರಸವಿರಸ ಸಮರಸ ನವರಸ
ನಾನಾ ನಾಟಕದರಸ
ಸಾರಸಾಕ್ಷ ಶ್ರೀಶ್ರೀನಿವಾಸ
ರಕ್ಷಿಸು ಭಕ್ತರ ಚೆಲ್ವಿ ಸುಹಾಸ ||

ವಿಷಧರ ಶಯನನೆ ವಿಶ್ವಂಭರನೆ
ವಿಷ್ಣುವೆ ಜಿಷ್ಣುತಿ ಶುಭಕರನೆ
ವಿಶ್ವವಿನೋದದ ಕಾರಣನೆ
ವಿಧಿ ಹರವಂದ್ಯನೆ ವಂದನೆ

ವಸುಂಧರೆ ಸುಂದರಿ ವಲ್ಲಭನೆ
ವರವನಮಾಲಿ ಶ್ಯಾಮಲನೆ
ಕರುಣಾಕರ ಹರಿನಾರಾಯಣನೆ
ನಮಿಸುವೆ ಭಕ್ತ ಪರಾಯಣನೆ

ಈ ರೀತಿಯಾಗಿ ನಾರದರು ಪರಮಾತ್ಮನನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತ ವೈಕುಂಠಕ್ಕೆ ಆಗಮಿಸಿದರು.

ನಾರದರ ಸ್ತುತಿಗೆ ಸುಪ್ರೀತನಾದ ಶ್ರೀಹರಿಯು ತನ್ನ ಮಂದಹಾಸದ ಮಧುರವಾಣಿಯಿಂದ ಮಾತನಾಡುತ್ತ.

"ಏನು ನಾರದ, ಭೂಲೋಕದಿಂದ ನೇರವಾಗಿ ಇಲ್ಲಿಗೇ ಬರುತ್ತಿರುವಂತೆ ತೋರುತ್ತಿದೆಯಲ್ಲ, ಏನು ಅಲ್ಲಿನ ವಿಶೇಷ"

"ಹೇ ಲೀಲಾಮಯನಾದ ಪರಮಾತ್ಮ, ಈ ತ್ರಿಲೋಕಗಳಲ್ಲಿ ಕ್ಷಣ ಕ್ಷಣದ ಆಗುಹೋಗುಗಳು ನಿನಗೆ ತಿಳಿಯದೆ ಇರುವುದು ಏನು ತಾನೆ ಇದೆ ......, ಆದರೆ .....".

"ಆದರೇನು ನಾರದ...., ಮತ್ತೆ ಯಾವುದೋ ಸಂಶಯವನ್ನು ಹೊತ್ತು ತಂದಿರುವಂತೆ ಕಾಣುತ್ತಿದೆಯಲ್ಲ?"

"ಹಾಗೇನಿಲ್ಲ ದೇವಾ ........ ಈ ಬಾರಿ ಸಂಶಯವಂತೂ ಅಲ್ಲ...... ಆದರೆ ಒಂದು ಕುತೂಹಲ ಮಾತ್ರ ನನ್ನನ್ನು ಬಹುವಾಗಿ ಕಾಡುತ್ತಿದೆ ಮಧುಸೂಧನ"

"ಕುತೂಹಲವೇ? ಅದೇನು ಹೇಳು ನಾರದ."

"ಹೇ ದಯಾಸಾಗರ, ನಿನ್ನ ಅನಂತ ಕೃಪಾ ಕಟಾಕ್ಷದಿಂದ ನಾನು ಈವರೆವಿಗೆ ಸಹಸ್ರ ಸಹಸ್ರ ವರ್ಷಗಳ ಪರ್ಯಂತರವೂ ತ್ರಿಲೋಕ ಸಂಚಾರ ಮಾಡುತ್ತಾ, ಭೂ ಲೋಕದ ನಹುಶ, ಮಾಂಧತ, ಹರಿಶ್ಚಂದ್ರ, ಶಿಬಿ - ದಶರಥ ಮುಂತಾದ ಅನೇಕಾನೇಕ

ರಾಜ ಮಹಾರಾಜರುಗಳ, ಚಕ್ರವರ್ತಿ ಸಾರ್ವಭೌಮರುಗಳ ವೈಭವವನ್ನು ನೋಡಿ ಆನಂದಿಸಿದ್ದೇನೆ. ಆದರೆ ಇಂದು ಮಾತ್ರ ಭೂಲೋಕಕ್ಕೆ ಹೋಗಿ ಬಂದ ನನಗೆ, ನನ್ನಿಂದಲೂ ಸಹ ವರ್ಣಿಸಲಸದಳವಾದ ಅಖಂಡ ವೈಭವ ಸಾಮ್ರಾಜ್ಯದಿಂದ ಕೂಡಿದ ಭೋಜರಾಜನಂತಹ ಓರ್ವ ಮಹಾ ಪುಣ್ಯಪುರುಷ, ಶ್ರೇಷ್ಠನಾದ ರಾಜನನ್ನು ನಾನು ಹಿಂದೆಂದೂ ನೋಡಿಯೂ ಇಲ್ಲ; ಮುಂದೆ ಅಂತಹ ಧರ್ಮಿಷ್ಟ ರಾಜನನ್ನು ನೋಡಲು ಆಗುವುದೋ ಇಲ್ಲವೊ ತಿಳಿಯದು ಮಾಧವ, .......... ಅವನ ಕೀರ್ತಿಯು ತ್ರಿಲೋಕಗಳಲ್ಲೂ ವ್ಯಾಪಿಸಿ ಬಿಟ್ಟಿದೆ. ಆ ರಾಜನು ಯಾರು? ಆತನ ಪುಣ್ಯ ಚರಿತ್ರೆಯನ್ನು ಪರಂಧಾಮನಾದ ನಿನ್ನಿಂದಲೆ ತಿಳಿದುಕೊಳ್ಳಲು ನನಗೆ ಬಹಳ ಅಪೇಕ್ಷೆಯುಂಟಾಗಿದೆ. ಪರಮಾತ್ಮ."

- ಎಂದು ವೈಕುಂಠಾಧಿಪತಿಯನ್ನು ಪರಮಭಕ್ತಿಯಿಂದ ಪ್ರಾರ್ಥಿಸಿದರು ನಾರದರು. ಆಗ ಆದಿಶೇಷನ ಮೇಲೆ ಪವಡಿಸಿದ್ದ ಶ್ರೀ ಹರಿಯು ನಾರದರನ್ನು ಕುರಿತು ಹೇಳುತ್ತಾ "ಮಗು ನಾರದ......, ನೀನು ತಿಳಿದುಕೊಳ್ಳಲು ಅಪೇಕ್ಷಿಸುತ್ತಿರುವ ಆ ಪುಣ್ಯ ಪುರುಷ ಭೋಜರಾಜನ ಇತಿಹಾಸವನ್ನು ಹೇಳಲು ನನಗೂ ಸಹ ಬಹಳ ಸಂತೋಷವಾಗಿದೆ. ಯಾವ ನನ್ನ ಪರಮಭಕ್ತರು ನನ್ನನ್ನು ಸದಾಕಾಲವು ಸ್ಮರಿಸಿ, ಸ್ತುತಿಸುವಂತೆ, ನಾನು ಸಹ ಅಂತಹ ಪುಣ್ಯ ಪುರುಷರ ಚರಿತ್ರೆಯನ್ನು ಹೇಳುವುದಕ್ಕೆ ತುಂಬಾ ಸಂತೋಷಪಡುತ್ತೇನೆ. ಕೇಳು ನಾರದ ..........." ಎಂದು ಭೋಜರಾಜನ ಪೂರ್ವ ವೃತ್ತಾಂತವನ್ನು ಹೇಳಲು ಉಪಕ್ರಮಿಸಿದನು.

"ನಾರದ, ಭೂಲೋಕದಲ್ಲಿ ಮಾನವರು ತಮ್ಮ ತಮ್ಮ ದೈನಂದಿನ ಆಗುಹೋಗುಗಳನ್ನು ಲಾಭನಷ್ಟಗಳನ್ನು, ದಿನನಿತ್ಯ ಸಂಸಾರ ಸುಖದುಃಖಗಳಿಂದ ಸ್ವಲ್ಪ ಸಮಯವಾದರೂ ಅವುಗಳಿಂದ ದೂರವಿರಲು, ಮನಃಶಾಂತಿಗಾಗಿ ಮನವನ್ನು ರಂಜಿಸುವಂಥ ವಿನೋದದಿಂದ ಕೂಡಿದ ನಾಟಕಗಳನ್ನು ಆಡುವುದು ವಾಡಿಕೆ. ಅದು ನಿನಗೂ ಸಹ ತಿಳಿದ ವಿಷಯವೇ ಆಗಿದೆ."

"ಹೌದು ಪರಮಾತ್ಮ ಅದರಲ್ಲಿ ಸಂಶಯವೇ ಇಲ್ಲ"

"ಅದರಂತೆ ದೇವಲೋಕದಲ್ಲಿ ದೇವರಾಜನಾದ ಇಂದ್ರನೂ ಸಹ ತನ್ನ ಅಮರಾವತಿ ಪಟ್ಟಣದ ಬಹು ಕೌತುಕಮಯವಾದ ಅದ್ಭುತ ನಾಟಕ ಶಾಲೆಯಲ್ಲಿ ಆಗಾಗ ಸಮಸ್ತ ದೇವಾನು ದೇವತೆಗಳನ್ನು ಆಹ್ವಾನಿಸಿ, ಮನವನ್ನು ರಂಜಿಸುವಂಥ ವಿನೋದವಾದ ನಾಟಕಗಳನ್ನು ಆಡಿಸುವುದು ಸಹಜ ತಾನೆ?"

"ನಿಜ ಪರಮಾತ್ಮ ನಿಜ"

- ಎಂದು ಪರಮಾತ್ಮನ ಮಾತಿಗೆ ತಲೆದೂಗಿ ನುಡಿದರು ನಾರದರು.

"ಆ ಒಂದು ದಿನ ................." ಎನ್ನುತ್ತ ಹಿಂದೆ ನಡೆದ ಒಂದು ಅಪೂರ್ವ ನಾಟಕ ಪ್ರಸಂಗವನ್ನು ನಾರದರಿಗೆ ಹೇಳಲು ಪ್ರಾರಂಭಿಸಿದನು. ಜಗದೊಡೆಯನಾದ ಪರಮಾತ್ಮನು.

ಆ ದಿನ ಇಂದ್ರಲೋಕದಲ್ಲಿ ಎಂದಿಲ್ಲದ ಸಡಗರ - ಸಂಭ್ರಮ ಹೇಳತೀರದಷ್ಟು ಅವರ್ಣನೀಯವಾಗಿತ್ತು.

ಅತ್ಯಂತ ವೈಭವದಿಂದ ಕೂಡಿದ ನಾಟಕ ಶಾಲೆಯಲ್ಲಿ, ಸಮಸ್ತ ದೇವ ಸಮೂಹದವರಿಗೆ ವಿಶೇಷವಾದ - 'ನೃತ್ಯ ನಾಟಕ' ದ ರಸದೌತಣ ನೀಡುವ ಏರ್ಪಾಟಾಗಿತ್ತು.

ಎಂದಿಗಿಂತಲೂ ಅತ್ಯದ್ಭುತವಾದ ಪ್ರಣಯ ಶೃಂಗಾರ ಪ್ರಧಾನವಾದ ನಾಟಕವನ್ನೇ ಏರ್ಪಾಡು ಮಾಡಿಸಿದ್ದನು ದೇವರಾಜನಾದ ಇಂದ್ರನು.

ಅದಕ್ಕಾಗಿ ಸಮಸ್ತ ದೇವಾನುದೇವತೆಗಳು ಋಷಿಮುನಿಗಳು, ಅಪ್ಸರೆಯರು, ಗಂಧರ್ವ ಕಿನ್ನರ ಕಿಂಪುರುಷರು, ನಾಗಲೋಕದ ನಾಗಕನ್ಯೆಯರು, ಅಷ್ಟೇ ಅಲ್ಲದ ಭೂಲೋಕದಿಂದ ಅರಿಷಡ್ವರ್ಗಗಳನ್ನು ಜಯಿಸಿ ಸಧರ್ಮ ಸದಾಚಾರಗಳಿಂದ ಸಮರಸದ ಬದುಕಿನಲ್ಲಿ ಜಯಶಾಲಿಗಳಾಗಿ ಶಾಶ್ವತ ಲೋಕವಾದ ವೈಕುಂಠ ಪದವಿಯನ್ನು ಪಡೆದು ಬಂದ ಪುರುಷರು, ಸುಂದರಾಂಗನೆಯರು ಎಲ್ಲರಾದಿಯಾಗಿ ನೆರೆದಿದ್ದರು.

ಸಾಕ್ಷಾತ್ ಇಂದ್ರದೇವನೆ ಮುಂದಾಗಿ ಆ ಎಲ್ಲರನ್ನು ವಿಶೇಷವಾದ ಗೌರವದಿಂದ ಬರಮಾಡಿಕೊಂಡು ಯಥೋಚಿತವಾದ ಆಸೀನದಲ್ಲಿ ಉಪಸ್ಥಿತರಾಗುವಂತೆ ಆದೇಶಿಸಿದರು.

ಎಲ್ಲಿ ದೇವ ಸಮೂಹದಿಂದ ಕೂಡಿದ ಆ ನಾಟಕ ಶಾಲೆ ಬಹು ಆಕರ್ಷಣೀಯವಾಗಿ ಶೋಭಿಸುತ್ತಿತ್ತು.

ನಾಟಕಗಳಲ್ಲಿ ಮಹಾ ಪಾಂಡಿತ್ಯವಿದ್ದು, ವಿಶೇಷ ಅನುಭವ ಉಳ್ಳವರು, ಪರಮ ಶ್ರೇಷ್ಠರೂ ಆದ ಭರತ ಮುನಿಯ ನಿರ್ದೇಶನದಲ್ಲಿ "ಜಗನ್ಮೋಹಿನಿ" ಎಂಬ ಅಭೂತಪೂರ್ವ ಪ್ರಣಯ ಶೃಂಗಾರ ನಾಟಕವನ್ನು ಆಡಿಸಲು ಸಂಕಲ್ಪಿಸಿದ್ದರು.

ಆ ಅಮೋಘ ನಾಟಕದ 'ಜಗನ್ಮೋಹಿನಿ' ಪಾತ್ರಕ್ಕೆ ಅಪ್ಸರ ಸ್ತ್ರೀಯರಲ್ಲಿಯೇ ಅತಿರೂಪಸಿಯಾದ"ಪುಂಜಕಸ್ಥಳೀ" ಎಂಬುವಳನ್ನು ಸ್ವತಹ ಭರತಮುನಿಯೆ ಇಚ್ಛೆ ಪಟ್ಟು ನೇಮಕ ಮಾಡಿದ್ದರು.

ಶಿವನ ಪಾತ್ರಕ್ಕಾಗಿ ಪುಂಜಕಸ್ಥಳೀಯ ಅಲೌಕಿಕರೂಪಕ್ಕೆ ತಕ್ಕ ಅನುರೂಪನೇ ಆದ ಗಂಧರ್ವ ಪುರುಷರಲ್ಲಿಯೇ ಅತಿ ಸುಂದರವಾದ "ಹಂಸ" ಎಂಬುವನನ್ನು ಆಯ್ಕೆ ಮಾಡಿದ್ದನು.

ಅವರಿಬ್ಬರ ಜೋಡಿ, ಎಲ್ಲರ ಮನಸೆಳೆಯುವಂತಿತ್ತು.

ನಾಟಕವನ್ನು ಪ್ರಾರಂಭಿಸಲು ಸಕಲ ಸಿದ್ಧತೆಗಳು ಕಾರ್ಯಗತವಾಗಿದ್ದು, ಎಲ್ಲರೂ ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರ ಬರುವಿಕೆಯನ್ನು ಎದುರು ನೋಡುತ್ತಿದ್ದರು.

ತ್ರಿಮೂರ್ತಿಗಳು ಒಟ್ಟಾಗಿ ಸೇರುವುದು ಬಹು ಅಪರೂಪವಷ್ಟೇ. ದೇವಾನುದೇವತೆಗಳ ಪಾಲಿಗೆ ಅದೊಂದು ಅಪೂರ್ವ ಸುಯೋಗದ ಸಂಭ್ರಮದ ಸುದಿನವಾಗಿತ್ತು.

ವೇಳೆಗೆ ಸರಿಯಾಗಿ ಬ್ರಹ್ಮ ವಿಷ್ಣು ಮಹೇಶ್ವರರು ತಮ್ಮ ತಮ್ಮ ಪತ್ನೀ ಸಮೇತರಾಗಿ ಆಗಮಿಸಿದರು.

ತ್ರಿಮೂರ್ತಿಗಳನ್ನು ಕಾಣುವಂತಹ ಮಹಾಭಾಗ್ಯಶಾಲಿಗಳಾದ ಅವರಿಗೆ, ಅಂದು ವಿಶೇಷವಾಗಿ ಸಪತ್ನಿ ಸಮೇತರಾಗಿ ಬರುತ್ತಿದ್ದ ಬ್ರಹ್ಮ, ವಿಷ್ಣು, ಮಹೇಶ್ವರರ ಆ ಅಪೂರ್ವ ರಂಜನೀಯ ಸಂಭ್ರಮ ನೋಟ ದೇವತೆಗಳ ಪಾಲಿಗೆ ಮತ್ತಷ್ಟು ಸಂತೋಷವಾಗಿತ್ತು.

ಜಗದೊಡೆಯರು ಬರುತ್ತಿರುವ ಹರ್ಷದ ಸಂಕೇತವಾಗಿ ದೇವದುಂದುಬಿ ಮೊಳಗಿತು. ಹರ್ಷೋದ್ಗಾರದಿಂದ ಜಯಭೇರಿ, ನಗಾರಿ, ಮದ್ದಳೆ, ಕೊಂಬು ಕಹಳೆ ಮುಂತಾದ ಮಂಗಳವಾದ್ಯಗಳು ಧ್ವನಿಗೈದವು.

ಸಾಕ್ಷಾತ್ ಇಂದ್ರದೇವನೆ ತನ್ನ ಪ್ರಮುಖ ದೇವ ಪರಿವಾರದೊಂದಿಗೆ ವಿಶೇಷ ಗೌರವದಿಂದಲೂ, ಅನನ್ಯ ಭಕ್ತಿ ಭಾವದಿಂದಲೂ ಆಹ್ವಾನಿಸಿ ಭವ್ಯಾಲಂಕೃತವಾದ ನಾಟಕಶಾಲೆಗೆ ಕರೆತಂದನು.

ಆ ತ್ರಿಮೂರ್ತಿಗಳಿಗಾಗಿ ಹಾಗೂ ತ್ರಿಜಗನ್ಮಾತೆಯರಿಗಾಗಿ ಸಜ್ಜುಗೊಳಿಸಿದ್ದ ವಿಶೇಷವಾದ ನವರತ್ನಖಚಿತವಾದ ಪವಿತ್ರ ಪೀಠದಲ್ಲಿ ಉಪಸ್ಥಿತರಾಗಲು ಪ್ರಾರ್ಥಿಸಿದರು.

ಇಂದ್ರಾದಿ ಸಮಸ್ತ ದೇವತೆಗಳ ಅಗಣಿತ ಭಕ್ತಿಭಾವಕ್ಕೆ ಪ್ರಸನ್ನರಾಗಿ ತ್ರಿಮೂರ್ತಿಗಳು ತಮ್ಮ ತಮ್ಮ ಪತ್ನಿಯರೊಂದಿಗೆ ಪೀಠವನ್ನಲಂಕರಿಸಿದರು.

ಭರತ ಮುನಿಯು ನಿರ್ದೇಶನದಲ್ಲಿ ನೃತ್ಯನಾಟಕ ಪ್ರಾರಂಭವಾಯಿತು.

ಆ ದಿನ ಏರ್ಪಡಿಸಿದ್ದ ನೃತ್ಯ ನಾಟಕವು, ಮೋಹಿನಿ ಭಸ್ಮಾಸುರನ ಕುರಿತದ್ದಾಗಿತ್ತು. - ಯಾವ ಭಸ್ಮಾಸುರನು ಸಹಸ್ರಾರು ವರ್ಷ ಶಿವನನ್ನು ಕುರಿತು ತಪಸ್ಸನ್ನಾಚರಿಸಿ, ತನ್ನ ಕೈಯನ್ನು ಯಾರದೇ ತಲೆ ಮೇಲೆ ಸ್ಪರ್ಶಿಸಿದ ಮಾತ್ರದಿಂದಲೆ, ಭಸ್ಮವಾಗಿ ಬಿಡುವ ವರವನ್ನು ಪಡೆದಿದ್ದ. ಆ ದುರಳನು ಶಿವನ ತಲೆಯ ಮೇಲೆ ಕೈಯಿಟ್ಟು, ಪರೀಕ್ಷಿಸುವ ಪುರಾಣ ಕಥೆಯು ಈ ಜಗನ್ಮೋಹಿನಿ ನಾಟಕದ ಕಥಾ ವಸ್ತು.

ವರಕೊಟ್ಟು ಶಿವನು ಬೇರೆದಾರಿ ಕಾಣದೆ ಶ್ರೀಮನ್ನಾರಾಯಣನ ಮೊರೆ ಹೊಕ್ಕಾಗ ಪರಮಾತ್ಮನಾದ ಶ್ರೀ ಹರಿಯು ಚತುರ್ದಶ ಲೋಕಗಳಲ್ಲಿ ಎಲ್ಲಿಯೂ ಕಾಣಲಾಗದಂತಹ ಅತಿಶಯವಾದ ಸೌಂದರ್ಯದಿಂದ ಕೂಡಿದ ಜಗನ್ಮೋಹಿನಿಯ ವೇಷ ಧರಿಸಿ ಬಂದಿದ್ದನು.

ಜಗನ್ಮೋಹಿನಿಯನ್ನು ನೋಡಿದ ಮಾತ್ರದಿಂದಲೆ ಕಾಮಾಂಧನಾದ ಭಸ್ಮಾಸುರನು ಶಿವನನ್ನು ಮರೆತು ಅಲೌಕಿಕ ಸುಂದರಿಯನ್ನು ಬೆನ್ನಟ್ಟಿದ್ದ.

ಜಗನ್ಮೋಹಿನಿಯಾದರೋ ತನ್ನದೇ ಆದ ಹಾವಭಾವ ಮೋಹಕ ಭಂಗಿಯ ನೃತ್ಯ ವೈಖರಿಯಿಂದ ಭಸ್ಮಾಸುರನನ್ನು ನಾಟ್ಯದಲ್ಲಿ ಮೈಮರೆಸಿ, ತನ್ನ ಕೈಯನ್ನು ತಾನೆ ತಲೆಮೇಲಿಟ್ಟುಕೊಂಡು ಭಸ್ಮವಾಗುವಂತೆ ಮಾಡಿದಳು. ಆ ದುರುಳ ರಕ್ಕಸನ ಸಂಹಾರದ ಸವಿ ನೆನಪಿನ ಸಂತೋಷಕ್ಕಾಗಿ ಮೋಹಿನಿ ಪರಮೇಶ್ವರರು ವಿನೋದಕ್ಕಾಗಿ ಆಡುವ ನಾಟಕವೇ ಅದಾಗಿತ್ತು.

ಬಹುವಾಗಿ ರಂಜಿಸುವಂಥ ಆ ಪ್ರಣಯ ಶೃಂಗಾರ ನಾಟಕವನ್ನು ಭೂಲೋಕದಲ್ಲಿ ಆಗಾಗ್ಗೆ ಆಡುವಂತೆ ಪುರಾಣ ಪ್ರಧಾನವಾದ ಸನ್ನಿವೇಶಗಳನ್ನು ದೇವಲೋಕದಲ್ಲಿಯೂ ಸಹ ಆಡುವ ವಾಡಿಕೆ ರೂಢಿಯಲ್ಲಿತ್ತು.

ಆ ಅತ್ಯಮೋಘ ನಾಟಕದಲ್ಲಿ ಜಗನ್ಮೋಹಿನಿ ಪಾತ್ರ ಧರಿಸಿದ್ದ ಅಪ್ರತಿಮ ಸುಂದರಿ ಪುಂಜಿಕಸ್ಥಳೀಯೂ ತನ್ನದೆ ಆದ ನಾಟ್ಯ ಹಾವಾಭಾವಗಳಿಂದಲೂ, ಮೈನವಿರೇಳುವ ಮಿಂಚಿನ ಕುಡಿನೋಟಗಳಿಂದಲೂ ನೆರೆದಿದ್ದ ದೇವಾನು ದೇವತೆಗಳ ಮನಸ್ಸನ್ನು ಒಮ್ಮೆಯೇ ಸೂರೆಗೊಂಡು ಬಿಟ್ಟಿದ್ದಳು.

ಗಂಧರ್ವ ಪುರುಷನಾದ ಹಂಸನು ಅತಿ ಲೋಕ ಸುಂದರನು ಮಾತ್ರವಲ್ಲದೆ ಸಕಲ ನಾಟ್ಯ ನೃತ್ಯಗಳಲ್ಲಿಯೂ ಸಹ ಅಸಾಧಾರಣ ಪ್ರತಿಭೆಯುಳ್ಳವನಾಗಿದ್ದನು.

ನಾಟ್ಯ ನಟನೆಯಲ್ಲಿ ನಡೆಯಲ್ಲಿ ನುಡಿಯಲ್ಲಿ ಹಾವಾಭಾವದಲ್ಲಿ ಭಾವ-ಭಂಗಿಯಲ್ಲಿ ಗುಲಗಂಜಿಯಷ್ಟು ವ್ಯತ್ಯಾಸವಿಲ್ಲದಂತೆ ವೇದಿಕೆಯ ಮೇಲೆ ಕಾಣಿಸಿಕೊಂಡ ಶಿವ ಪಾತ್ರಧಾರಿ ಹಂಸನನ್ನುಕಂಡು ಬೆರಗಾಗಿ ಹೋದಳು ಜಗನ್ಮಾತೆಯಾದ ಶಿವೆ.

ವೇದಿಕೆಯ ಮುಂದೆ ಮೊದಲ ಸಾಲಿನಲ್ಲಿಯೇ ಕುಳಿತು ತದೇಕ ಚಿತ್ತಳಾಗಿ ನೃತ್ಯ ನಾಟಕ ನೋಡುತ್ತಿದ್ದ ಪಾರ್ವತಿಯು ಅಚ್ಚರಿಯಿಂದ "ಹೌದು ಈತನು ಸಾಕ್ಷಾತ್ ಶಿವನಲ್ಲದೆ ಮತ್ತ್ಯಾರು ಅಲ್ಲ. ನನ್ನ ಪಕ್ಕದಲ್ಲಿಯೇ ಕುಳಿತಿದ್ದ ಇವರು (ಪತಿದೇವರು) ನನಗೂ ಸಹ ಏನೊಂದು ಹೇಳದೆ ಕೇಳದೆ ಅದೆಷ್ಟು ಬೇಗ ಆ ಜಗನ್ಮೋಹಿನಿಯೊಂದಿಗೆ ನಾಟ್ಯ ಮಾಡಲು ವೇದಿಕೆಯ ಮೇಲೆ ಹೊರಟು ಹೋದರು. ಈ ಗಂಡಸರೆ ಹೀಗೆ" ಎಂದು ಸ್ತ್ರೀ ಸಹಜವಾದ ಅನುಮಾನದಿಂದ ತನ್ನಷ್ಟಕ್ಕೆ ತಾನೇ ನುಡಿದುಕೊಂಡಳು.

ಕ್ಷಣ ಕಳೆದಂತೆ ಯಾಂತ್ರಿಕವಾಗಿ ತನ್ನ ಕಣ್ನೋಟವನ್ನು ಪಕ್ಕಕ್ಕೆ ಹಾಯಿಸಿದಳು. ಆಶ್ಚರ್ಯ ಚಕಿತಳಾದಳು. ತನ್ನ ಇನಿಯನು ಅಲ್ಲಿಯೇ ಕುಳಿತಿದ್ದಾನೆ ಎಂಬುದನ್ನರಿತು ನಾಚಿಕೆಯಿಂದ ತಲೆ ತಗ್ಗಿಸಿ ತುಟಿ ಕಚ್ಚಿದಳು ಮಹಾದೇವಿಯಾದ ಪಾರ್ವತಿ.

ಸಾಕ್ಷಾತ್ ಶಿವನ ಅರ್ಧಾಂಗಿಯಾದ ಪಾರ್ವತಿಯೇ ಆ ರೀತಿ ಬೆರಗುಗೊಳ್ಳುವಂತೆ ಮಾಡಿದ್ದ, ನಾಟ್ಯಲೋಲನಾದ ಶಿವನಂತೆಯೇ ಜಗನ್ಮೋಹಿನಿಯೊಂದಿಗೆ ಅಮೋಘವಾಗಿ ನರ್ತಿಸುತ್ತಿದ್ದನು ಶಿವ ಪಾತ್ರಧಾರಿಯಾದ ಹಂಸ.

ಪುಂಜಕಸ್ಥಳೀಯೂ ಸಹ ಜಗನ್ಮೋಹಿನಿಯಾಗಿ ತನ್ನದೆ ಆದ ವಿಸ್ಮಯಕಾರಕ ನಾಟ್ಯ ಭಾವ ಭಂಗಿಯಿಂದ ಮನಮೋಹಕವಾಗಿ ಹಂಸನೊಡನೆ ನರ್ತಿಸುತ್ತ ಸೂಜಿಗಲ್ಲಿನಂತೆ ಎಲ್ಲರ ಮನವನ್ನು ಸೂರೆಗೊಂಡಳು. ಶಿವನಿಗೆ ಸರಿಸಮವಾಗಿ ಅಮೋಘವಾಗಿ ನರ್ತಿಸುತ್ತ ಎಲ್ಲರ ಹೃದಯವನ್ನು ಗೆದ್ದಿದ್ದಳು.

ಅಷ್ಟು ಮಾತ್ರವೇ ಅಲ್ಲದೆ, ನೆರೆದಿದ್ದ ಸಮಸ್ತ ದೇವಾನು ದೇವತೆಗಳೆಲ್ಲರ ಪಾಲಿಗೆ ಜಗನ್ಮೋಹಿನಿಗಿಂತಲೂ ಮಿಗಿಲಾದ ಅಪೂರ್ವ ಮೋಹಿನಿಯಾಗಿ ಭಾವ ಪೂರ್ಣವಾಗಿ ನರ್ತಿಸುತ್ತ - ಎಲ್ಲರ ಹೃದಯದಲ್ಲೂ ಕೋಲಾಹಲವನ್ನು ಉಂಟು ಮಾಡಿಬಿಟ್ಟಿದ್ದಳು.

ಆಕೆಗೆ ಸರಿಸಮಾನವಾಗಿ ಗಂಧರ್ವ ಪುರುಷ ಹಂಸನು ಸಹ ಎಲ್ಲರ ಹೃದಯವನ್ನು ಗೆದ್ದಿದ್ದನು.

ಆ ಅಮೋಘ ನೃತ್ಯ ನೋಡುತ್ತಿದ್ದ ದೇವತೆಗಳಿಗೆ ಸೋಮರಸ ಕುಡಿದ ಅನುಭವವಾಗಿ ಅಷ್ಟೊಂದು ಮೈಮರೆತು ನೃತ್ಯ ನಾಟಕವನ್ನು ನೋಡುತ್ತಿದ್ದರು.

ಅಖಂಡ ಜ್ಞಾನ ಭಂಡಾರವೆಂದೆನಿಸಿದ್ದ ದೇವಲೋಕದ ದೇವತೆಗಳನ್ನೂ ಸಹ ಮೈ ನವಿರೇಳುವಂತಹ ಮೋಹದ ಜಾಲದಲ್ಲಿ ಮೈ ಮರೆಯುವಂತೆ ಮಾಡಿತ್ತು, ಆ ಪುಂಜಕಸ್ಥಳೀಯಯ ಅಲೌಕಿಕ ಸೌಂದರ್ಯ.

ಅದೇ ವೇಳೆಗೆ ಸರಿಯಾಗಿ ಒಂದು ವಿಚಿತ್ರ ಪ್ರಸಂಗವೂ ಅಲ್ಲಿ ಜರುಗಿಹೋಯಿತು.

ದೇವ ಲೋಕದಲ್ಲಿ ನೃತ್ಯ ನಾಟಕ ನಡೆಯುತ್ತಿದ್ದ ಆ ಸಂದರ್ಭದಲ್ಲಿ ಭೂ ಲೋಕದಲ್ಲಿ ಸಿಂಧೂಲರಾಜನು ಪುತ್ರ ಸಂತಾನಕ್ಕಾಗಿ ಅಖಂಡ ಭಕ್ತಿಯಿಂದ "ಪುತ್ರಕಾಮೇಷ್ಟಿ" ಯಾಗ ಮಾಡುತ್ತಿದ್ದನು.

ಆ ಯಾಗದ ಫಲವು ಸಿದ್ಧಿಸುವಂತ ಸಕಾಲವೂ ಒದಗಿ ಬಂದಿತ್ತು.

ಈ ಸಮಯ ಬಿಟ್ಟರೆ ಬೇರೆ ಸಮಯ ಮತ್ತೆ ಬಾರದು ಎಂದರಿತ ನೃತ್ಯ ನಾಟಕ ನೋಡುತ್ತಿದ್ದ ಬ್ರಹ್ಮದೇವರು "ಎಲ್ಲ ಆ ಶ್ರೀ ಹರಿಯ ಸಂಕಲ್ಪವೋ" ಎಂಬಂತೆ ಅಲ್ಲಿಯೇ ಕುಳಿತಿದ್ದ ಶ್ರೀಮನ್ನಾರಾಯಣನ ಮುಖವನ್ನೊಮ್ಮೆ ನೋಡಿದರು. ಬ್ರಹ್ಮದೇವರ ಅಂತರ್ಯ ನಾರಾಯಣನಿಗೆ ಅರ್ಥವಾಯಿತು. ಅದೇನು ಯಕ್ಷಿಣಿಯೋ ಅಥವಾ ಮೋಡಿಯೋ ಎಂಬಂತೆ, ಲೀಲಾವಿನೋದ ಪ್ರಿಯನಾದ ಪರಮಾತ್ಮನ - ಮೋಹಕ ದೃಷ್ಟಿಯ ಅಪೂರ್ವ ಸಮ್ಮೋಹನ ಶಕ್ತಿ (ಸಮ್ಮೋಹನಾಸ್ತ್ರ) ಅಲ್ಲಿಯೇ ಋಷಿ ಮುನಿಗಳ ಗುಂಪಿನಲ್ಲಿ ಮೈ ಮರೆತು ನೃತ್ಯ ನಾಟಕನೋಡುತ್ತಿದ್ದ ದೂರ್ವಾಸ ಮುನಿಗಳ ಹೃದಯವನ್ನು ಪ್ರವೇಶಿಸಿ ಬಿಟ್ಟಿತು.

ಅಪೂರ್ವ ಚೆಲುವೆ, ಜಗನ್ಮೋಹಿನಿಯ ಮನಸೆಳೆವ ಅಮೋಘ ನೃತ್ಯಕ್ಕೆ ಆ ಮೊದಲೆ ಮನಸೋತಿದ್ದ ದೂರ್ವಾಸ ಮುನಿಗಳು ಸಮ್ಮೋಹನ ಶಕ್ತಿಯ ಪ್ರಭಾವದಿಂದಾಗಿ ಮತ್ತಷ್ಟು ವಿವಶ ವಿಕಾರರಾದರು. ಮೇರು ಪರ್ವತವೇ ಅಲ್ಲಾಡಿ ಕಳಚಿ ಬಿದ್ದಂತೆ, ಸಮುದ್ರದ ಭೀಕರ ಚಂಡಮಾರುತದಿಂದ ಇಡೀ ಪಟ್ಟಣವೇ ಕೊಚ್ಚಿ ಹೋದಂತೆ ಆ ಮುನಿ ಹೃದಯ ಅಲ್ಲೋಲ ಕಲ್ಲೋಲವಾಗಿ ಹೋಯಿತು.

ಆಗ ದುರ್ವಾಸ ಮುನಿಗಳ ದೃಷ್ಟಿಯಲ್ಲಿ ಕಡು ಚೆಲುವೆ ಪುಂಡಕಸ್ಥಳೀಯ ಹೊರತಾಗಿ ಯಾರೊಬ್ಬರೂ ಕಾಣದಾದರು. ತಾನು ಮತ್ತು ಪುಂಜಕಸ್ಥಳೀ ಇಬ್ಬರು ಮಾತ್ರ ಇರುವಂತೆ ಭಾಸವಾಗಿತ್ತು.

ಕಾಮಾಂಧನಾದ ಮುನಿಯು ವಿಕಾರ ಬುದ್ಧಿಯುಳ್ಳವನಾಗಿ "ಹೌದು ಇಲ್ಲಿ...... ಯಾರು ಇಲ್ಲ. ಎಲ್ಲರೂ ಹೊರಟು ಹೋಗಿದ್ದಾರೆ. ಈ ಸಮಯ ನನ್ನ ಬಯಕೆಗೆ ತಕ್ಕ ಸಮಯವೇ ಆಗಿದೆ. ಇಂಥ ಸಮಯವನ್ನು ಹಾಳು ಮಾಡಿಕೊಳ್ಳಬಾರದು. ಇದರಿಂದ ನನಗೆ ಯಾವ ದೋಷ ಬಂದರೂ ಚಿಂತೆಯಿಲ್ಲ. ಅದರ ಪ್ರಾಯಶ್ಚಿತ್ತಕ್ಕಾಗಿ ಮತ್ತೆ ಸಹಸ್ರಾರು ವರ್ಷಗಳ ಕಾಲ ತಪಸ್ಸು ಮಾಡಿ ಪಾಪದ ದೋಷವನ್ನು ನಿವಾರಿಸಿ ಕೊಳ್ಳುತ್ತೇನೆ...." ಎಂದು ಸುತ್ತ ಮುತ್ತ ಕಣ್ಣು ಹಾಯಿಸಿ, ಯಾವುದನ್ನೂ ನೋಡದೆ ತಾನು ಕುಳಿತಿದ್ದ ಸ್ಥಳದಿಂದ ಮಿಂಚಿನ ಭರದಲ್ಲಿ ವೇದಿಕೆಯ ಮೇಲೇರಿ, ಮೋಹಕ ಭಂಗಿಯಲ್ಲಿ ನಿಂತಿದ್ದ ಆ ಪುಂಜಕಸ್ಥಳೀಯನ್ನು ಬಿಗಿದಪ್ಪಿ ಮುದ್ದಾಡಿ, ಮುತ್ತಿನ ಮಳೆಗರೆದಿದ್ದ - ಆ ಗಡ್ಡಧಾರಿ ದುರ್ವಾಸಮುನಿ.

ಅಪ್ರತಿಮ ಲಾವಣ್ಯವತಿಯಾದ ಪುಂಜಕಸ್ಥಳೀಯನ್ನು ಭೋಗಿಸಿಯೇ ಬಿಡಬೇಕೆಂಬ ಹಂಬಲದಿಂದ ಹಸಿದ ಹುಲಿಯಂತೆ ಮತ್ತಷ್ಟು ಮುಂದುವರಿದು ಆಕೆಯನ್ನು ಅಲ್ಲಿಯೇ ವಿವಸ್ತ್ರಳನ್ನಾಗಿ ಮಾಡುವ ಪ್ರಯತ್ನವನ್ನು ಮಾಡದಿರಲಿಲ್ಲ.

ಆದರೆ ಶ್ರೀ ಹರಿಯು ಮುಂದೆ ತೀರ ಅಭಾಸವಾಗದಂತೆ ಎಚ್ಚೆತ್ತವನಾಗಿ, ತನ್ನ ಸಮ್ಮೋಹನ ಶಕ್ತಿಯಿಂದ ಅಷ್ಟಕ್ಕೆ ನೀರಸಗೊಳಿಸಿದ್ದ.

ವಿದ್ಯುತ್ ಬೆಳಕು ಒಮ್ಮೆ ಸ್ಥಗಿತಗೊಂಡು ಮತ್ತೆ ಸರಬರಾಜು ಆದಂತೆ ಎಲ್ಲಾ ದೇವತೆಗಳು ಅಲ್ಲಿಯೇ ಇರುವುದನ್ನರಿತು ದುರ್ವಾಸಮುನಿಗಳಿಗೆ ದಿಕ್ಕೇ ತೋಚದಂತಾಯಿತು. ಅರೆ ಬರೆ ವಸ್ತ್ರದಲ್ಲಿದ್ದ ದೂರ್ವಾಸ ಮುನಿಗಳು ಆ ರಂಗಸ್ಥಳದಿಂದ ಎತ್ತ ಹೋಗಲಿ ಎತ್ತ ಮರೆಯಾಗಲಿ ಎಂದು ಮಗ್ಗದಲಾಳಿಯಂತೆ ಪರದಾಡುತ್ತ ಪರಿತಪಿಸುತ್ತಿದ್ದರು.

ಆಗ ದೇವತೆಗಳೆಲ್ಲರೂ ದೂರ್ವಾಸ ಮುನಿಯ ಕಾಮ.ಕೇಳಿ ನಡತೆಗೆ ಗಹಗಹಿಸಿ ನಕ್ಕರು.

ಮತ್ತಷ್ಟು ಅಪಮಾನವಾದಂತಾಯಿತು ಆ ಮುನಿಗೆ.

ದೂರ್ವಾಸ ಮುನಿಗಳ ಆ ಹೀನ ಕೃತ್ಯಕ್ಕೆ ಸಿಟ್ಟಿಗೆದ್ದ ಸರಸ್ವತಿ ದೇವಿ "ಇದೇನಿದು, ಈ ಮುನಿಗೆ ಮುಪ್ಪಿನ ವಯಸ್ಸಿನಲ್ಲಿ ಕಪಟ ಋಷಿಯ ಕಾಮಕೇಳಿ ನಡತೆ" ಎಂದು ದೂಷಿಸಿದಳು. ಹಾಗೂ ಅಪಹಾಸ್ಯವಾಗಿ ನಕ್ಕಳು.

ಆಗ ದೂರ್ವಾಸರಿಗೆ ಪ್ರಚಂಡ ಕೋಪ ಮನದಲ್ಲಿ ತಾಂಡವವಾಡಿತು. ಕೋಪದಲ್ಲಿ ಮೊದಲೇ ಭಯಂಕರರಾದವರು ಸರಸ್ವತಿದೇವಿಗೆ ತಪಿಸುತ್ತ "ಎಲ್ಲೆ ಗರ್ವಿಷ್ಟಳಾದ ಸರಸ್ವತಿ ದೇವಿಯೇ.... ಅದ್ಯಾವುದೋ ಅರಿವಿಲ್ಲದ ಮಾಯೆಯಿಂದ ನಾನು ಬಂದಿತನಾಗಿದ್ದು, ಈ ಕೃತ್ಯವನ್ನು ಮಾಡಬೇಕಾಯಿತು. ಆದರೂ ಸಹ ನೀನು ಇದಕ್ಕೆ ಪಶ್ಚತ್ತಾಪ ಪಡುವುದಕ್ಕೆ ಬದಲಾಗಿ ಈ ಎಲ್ಲ ದೇವ ಸಮೂಹದ ಮುಂದೆ ನನ್ನನ್ನು ಹೀಯಾಳಿಸಿ ಅಪಮಾನ ಮಾಡಿದ ಕಾರಣ ನಿನಗೆ ಭೂ ಲೋಕದ ಗೊಂಡಾರಣ್ಯದಲ್ಲಿ ವಾಸಿಸುವ ಕ್ರೂರ ಕಿರಾತಕನ ವಂಶದಲ್ಲಿ ಪುರುಷ ಜನ್ಮ ಪ್ರಾಪ್ತವಾಗಲಿ. ಅಷ್ಟು ಮಾತ್ರವೇ ಅಲ್ಲ, ಅಲ್ಲಿ ಓರ್ವ ಲಂಪಟ ವೇಶ್ಯೆಯಿಂದ ನಿನಗೆ ಮರಣ ಪ್ರಾಪ್ತವಾಗಲಿ" ಎಂದು ಶಾಪ ಕೊಟ್ಟನು. ಆಗ ಅಲ್ಲಿಯೇ ಇದ್ದ ಸರಸ್ವತಿ ದೇವಿಯ ಆಪ್ತ ಸಖಿಯಾದ ಗಾಯತ್ರಿ ದೇವಿಯು ತನ್ನ ವಿದ್ಯಾ ಸರಸ್ವತಿಗೆ ಆ ಗತಿ ತಂದಿಟ್ಟ ದೂರ್ವಾಸ ಮುನಿಗಳಿಗೆ ಶಾಪ ಕೊಡುತ್ತಾ "ಎಲ್ಲೆ ಅಹಂಕಾರಿ ದೂರ್ವಾಸ ಮುನಿಯೆ, ನೀನು ವಿದ್ಯಾ ದೇವಿಗೆ ಶಾಪ ಕೊಟ್ಟ ಪ್ರತೀಕವಾಗಿ ನಾನು ಸಹ ನಿನಗೆ ಶಾಪ ಕೊಡುತ್ತೇನೆ ಅನುಭವಿಸು" ಎಂದು ಸಿಟ್ಟಿನಿಂದ ನುಡಿಯುತ್ತ "ಬ್ರಹ್ಮಾದಿ ಸಕಲ ದೇವತೆಗಳು ತಪೋ ಮುನಿಗಳು ಅಪ್ಸರ ಸ್ತ್ರೀಯರು ಎಲ್ಲರೂ ಈ ಪವಿತ್ರ ನಾಟಕ ಶಾಲೆಯಲ್ಲಿ ತುಂಬಿ ನೆರೆದಿರುವುದರ ಅರಿವಿಲ್ಲದೆ ಕಾಮ ಮಧಾಂಧನಾಗಿ ಎಲ್ಲರನ್ನು ಧಿಕ್ಕರಿಸಿ, ಕೊಬ್ಬಿದ ಗೂಳಿ ನುಗ್ಗಿದಂತೆ ಪುಂಜಕಸ್ಥಲೀಯಳನ್ನು ಮೋಹಿಸಿದ ಕಾರಣ ನೀನು ಸಹ ಭೂ ಲೋಕದಲ್ಲಿ ಒಂದು ಹೆಣ್ಣಾಗಿ ಜನ್ಮತಳೆದು, ಅಲ್ಲಿಯೂ ಸಹ ಸಂಸಾರ ಸುಖದಲ್ಲಿ ವಂಚಿತನಾಗಿ ಪಡಬಾರದ ಕಷ್ಟವನ್ನನುಭವಿಸುತ್ತ ದಿಕ್ಕು ಕಾಣದ ಅನಾಥಳಂತೆ ಹೀನವಾದ ಮರಣವನ್ನು ಹೊಂದು" ಎಂದು ಶಾಪ ಕೊಟ್ಟಳು ಗಾಯತ್ರಿದೇವಿ.

ಇನ್ನು ನಾನು ಸುಮ್ಮನೆ ಕುಳಿತರೆ ಒಬ್ಬರಿಗೊಬ್ಬರ ಕೋಪದಲ್ಲಿ ಪರಿಸ್ಥಿತಿ ತೀರ ಹದಗೆಡಬಹುದೆಂಬ ಮುಂದಾಲೋಚನೆಯಿಂದ ಅಲ್ಲಿಯೇ ಉಪಸ್ಥಿತನಾಗಿದ್ದ ಶ್ರೀ ಮನ್ನಾರಾಯಣನು ವೇದಿಕೆಯ ಮೇಲೆ ಆಗಮಿಸಿ ಸಮಸ್ತ ದೇವ ಸಮೂಹದವರೊಡನೆ ತಿಳಿಯ ಹೇಳುತ್ತ "ಎಲ್ಲೆ ದೇವತೆಗಳಿರಾ, ಇಂದು ಈ ನಮ್ಮ ದೇವ ಲೋಕದಲ್ಲಿ ನಡೆಯಬಾರದ ಒಂದು ಅವಿವೇಕತನ ನಡೆದು ಹೋಯಿತು. ಇನ್ನು ವಿದ್ಯಾಭಿಮಾನಿಯಾದ ಸರಸ್ವತಿಯೇ ಬ್ರಹ್ಮಲೋಕವನ್ನು ತ್ಯಜಿಸಿ ಭೂಲೋಕಕ್ಕೆ ಹೊರಟಳೆಂದರೆ, ಸದಾ ವೀಣಾವಾದನದ ಮಧುರ ನಿನಾದದಿಂದ ತೃಪ್ತನಾಗಿ ತನ್ನ ಕರ್ತವ್ಯದಲ್ಲಿ ನಿರತನಾಗುತ್ತಿದ್ದ ಬ್ರಹ್ಮದೇವನಿಗೆ ಒಂದು ಘಳಿಗೆಯೂ ಸಹ ನೆಮ್ಮದಿ ಸಿಗದು. ಇದೇ ಸಂದರ್ಭದಲ್ಲಿ ಭೂಲೋಕಕ್ಕೆ ಒಬ್ಬ ಧರ್ಮಿಷ್ಟ ರಾಜನ ಅವಶ್ಯಕತೆಯೂ ಇದೆ. ಪುತ್ರ ಪ್ರಾಪ್ತಿಗಾಗಿ ಪುತ್ರಕಾಮೇಷ್ಟಿ ಯಾಗ ಮಾಡುತ್ತಿರುವ ಧಾರಾ ನಗರದ ಸಿಂಧೂಲ ರಾಜನ ವಂಶದಲ್ಲಿ ನನ್ನ ಯೋಗದೃಷ್ಟಿ ಬಲದಿಂದಲೂ, ಬ್ರಹ್ಮನ ಅಂಶದಿಂದಲೂ ಸುಪುತ್ರ ಜನಿಸಲಿ. ಅವನು ಅಲ್ಲಿ ಭೋಜರಾಜನೆಂದು ನಾಮಾಂಕಿತನಾಗಿ ಕೀರ್ತಿವಂತ ರಾಜನಾಗಿ ಮೆರೆಯಲಿ. ಅನೇಕ ಯಜ್ಞ ಯಾಗಾದಿಗಳನ್ನು ಮಾಡುತ್ತ ಸದಾ ಧರ್ಮ ಸಧರ್ಮ ಸದಾಚಾರಗಳಿಂದ ರಾಜ್ಯಭಾರ ಮಾಡುವಂತಾಗಲಿ. ಶಾಪಗ್ರಸ್ಥಳಾದ ಸರಸ್ವತೀ ದೇವಿಯು ಪ್ರಥಮವಾಗಿ ಬಾಲ್ಯದಲ್ಲಿ ವಂಚಿತನಾದರೂ ಸಹ ಮುಂದೆ ಕಾಳಿಕಾದೇವಿಯ ವರ ಪ್ರಸಾದದಿಂದ 'ಕಾಳಿದಾಸ' ನೆಂಬ ಶಿರೋನಾಮದಿಂದ ಮಹಾ ಕೀರ್ತಿವಂತನಾಗಲಿ. ಧಾರಾ ನಗರದ ಚಕ್ರವರ್ತಿ ಸಾರ್ವಭೌಮನೆನಿಸಿದ ಭೋಜರಾಜನು ಕಾಳಿದಾಸನಿಗೆ

ಆಶ್ರಯಧಾತನಾಗಲಿ. ಭೋಜ ಕಾಳಿದಾಸರ ಮಧುರ ಸಮಾಗಮದಿಂದ ಆ ದೇಶವು ಸದಾ ವಿದ್ಯೆಯ ಸಿದ್ಧಿಯಿಂದ ಅದೊಂದು ಸದಾ ವಿದ್ಯಾ ಸಾಗರವಾಗಿ ಮೆರೆಯಲಿ. ಭೋಜ ಕಾಳಿದಾಸರು ಕೀರ್ತಿ ಅಜರಾಮರವಾಗಲಿ. ಆದರೆ ಅಲ್ಲಿ ಓರ್ವ ಲಂಪಟೆ ವೇಶ್ಯೆಯಿಂದ ಕಾಳಿದಾಸನ ಮರಣ ಪಡೆಯಲಿ. "ಇನ್ನು ದೂರ್ವಾಸ ಮುನಿಯು ವಂಗದೇಶದ ರಾಜನಿಗೆ ಏಕೈಕ ಪುತ್ರಿಯಾಗಿ ಹುಟ್ಟಿ 'ವಿದ್ಯಾಧರೆ' ನಾಮಾಂಕಿತಳಾಗಿ ಯೌವನಾವಸ್ಥೆಯವರೆಗೆ ಸುಖವಾಗಿ ಬೆಳೆಯಲಿ. ನಂತರ ವಿವಾಹವಾಗಿ ಕಾಳಿದಾಸನನ್ನು ಹುಡುಕುತ್ತಾ, ನಾನಾ ಕಷ್ಟಪಡುತ್ತಾ, ದಿಕ್ಕು ಕಾಣದ ಅನಾಥಳಂತೆ ಸಂಸಾರ ಸುಖದಲ್ಲಿ ವಂಚಿತಳಾಗಿ ಹೀನವಾದ ಮರಣವನ್ನು ಪಡೆಯಲಿ" ಎಂದು ಶ್ರೀಮನ್ನಾರಾಯಣನು ತನ್ನ ಸತ್ಯವಾಣಿಯಿಂದ ನುಡಿದನು.

ಈ ರೀತಿಯಾಗಿ ಬ್ರಹ್ಮಾಂಶ ಪುರುಷನಾದ ಭೋಜರಾಜನು ಮಹಾ ಧರ್ಮಿಷ್ಟ ರಾಜನಾಗಿ, ಅಖಂಡ ಪುಣ್ಯ ಸಂಪತ್ತಿನಿಂದಲೂ ಕುಬೇರನ ಐಶ್ವರ್ಯಕ್ಕೂ ಮಿಗಿಲಾದ ವಿಪುಲ ಐಶ್ವರ್ಯ ಸಂಪತ್ತಿನಿಂದಲೂ, ರಾಜ್ಯಭಾರ ಮಾಡುತ್ತಾ ಪ್ರಜೆಗಳ ಪಾಲಿಗೆ ಚಕ್ರವರ್ತಿ ಸಾರ್ವಭೌಮನಂತೆ ಮೆರೆಯುತ್ತಾನೆ. ಆ ಭೋಜರಾಜನು ತಾನು ಮಾಡಿದ ಅಗಣಿತ ಪುಣ್ಯ ಸಂಪತ್ತಿನ ಫಲದಿಂದ ಇಡೀ ಭೂ ಮಂಡಲವೇ ಸ್ವರ್ಗ ಮಯವಾಗಲಿದೆ. ಅಲ್ಲಿನ ಪ್ರಜೆಗಳೆಲ್ಲರೂ ಸಂತೋಷದಿಂದ ಬಾಳುತ್ತಾರೆ. ಮುಂದೆ ಕಾಳಿದಾಸನ ಸಮಾಗಮದಿಂದ ಭೋಜ ಕಾಳಿದಾಸರ ಕೀರ್ತಿ ತ್ರಿಲೋಕ ಮಾತ್ರವೇ ಅಲ್ಲದೆ, ಚತುರ್ದಶ ಲೋಕಕ್ಕೂ ಸಹ ವ್ಯಾಪಿಸಬಲ್ಲದು" ಎಂದು ಭೋಜರಾಜನ ಜನನವನ್ನು ತಿಳಿಸುತ್ತ ಮುಂದೆ ಅವನ ಬಾಲ್ಯ ಜೀವನ ಎತ್ತ ಸಾಗಿತ್ತು ಎಂಬುದನ್ನು ಹೇಳಲು ಉಪಕ್ರಮಿಸಿದನು ವೈಕುಂಠಾಧಿಪತಿಯಾದ ಶ್ರೀಮನ್ನಾರಾಯಣನು.

# ಪುತ್ರಕಾಮೇಷ್ಟಿಯಾಗ

'ಪುತ್ರಕಾಮೇಷ್ಟಿ' ಮಹಾ ಯಾಗವನ್ನು ಮಾಡಲು ಸಂಕಲ್ಪಿಸಿದ ಸಿಂಧೂಲರಾಜನು ಆ ವಿಷಯವನ್ನು ಕೂಲಂಕುಶವಾಗಿ ಪ್ರಸ್ತಾಪ ಮಾಡುವ ಉದ್ದೇಶದಿಂದ, ಅರಮನೆಯ ಮಹಾಮಂತ್ರಿಗಳನ್ನೂ, ವೇದ ಪಾರಂಗತರಾದ ವಯೋವೃದ್ಧರೂ ಜ್ಞಾನಿಗಳೂ ಆದ ರಾಜ ಪುರೋಹಿತರನ್ನು ಕರೆಸಿ ಕೊಂಡನು.

ಜೊತೆಗೆ ತನ್ನ ಪ್ರೀತಿಯ ತಮ್ಮನಾದ ಮುಂಜರಾಜನನ್ನೂ ಸಹ ಬರಮಾಡಿಕೊಂಡಿದ್ದನು.

ಆ ನಾಲ್ವರೂ ಸಹ ಪ್ರಶಾಂತ ಮಂದಿರವಾದ ಮಂತ್ರಾಗಾರದಲ್ಲಿ ಚರ್ಚೆ ನಡೆಸಲು ಉಪಕ್ರಮಿಸಿದರು.

ಮೊದಲಾಗಿ ಸಿಂಧೂಲರಾಜನು, ಪೂಜ್ಯರಾದ ರಾಜಪುರೋಹಿತರನ್ನು ಕುರಿತು, "ಪೂಜ್ಯರೆ, ನಾನು ಸಂಕಲ್ಪ ಮಾಡಿರುವ ಈ 'ಪುತ್ರಕಾಮೇಷ್ಟಿ' ಯಾಗಕ್ಕೆ ಎಲ್ಲವನ್ನು ಬಲ್ಲ ತಾವೇ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕು. ತಮ್ಮ ಮಾರ್ಗದರ್ಶನದಿಂದಲೇ ಈ ಮಹಾ ಯಾಗವು ಕಿಂಚಿತ್ ಲೋಪವಾಗದಂತೆ ನೆರವೇರಬೇಕು" ಎಂದು ವಿನಯವಾಗಿ ನುಡಿದನು.

ಆಗ ರಾಜಪುರೋಹಿತರು ರಾಜನನ್ನು ಉದ್ದೇಶಿಸಿ,

"ಹೇ ರಾಜೇಂದ್ರ.......... ನಿನ್ನ ಸಂಕಲ್ಪ ಸಾಧುವಾಗಿದೆ. ನಾನು ಸರ್ವದಾ ನಿನ್ನ ಶ್ರೇಯೋಭಿವೃದ್ಧಿಗಾಗಿಯೂ, ಈ ದೇಶದ ಸತ್ಯಸಂಧರಾದ ಪ್ರಜೆಗಳ ಸುಖ ಸಂತೋಷ ಸುಭಿಕ್ಷತೆಗಾಗಿಯೂ ಶ್ರಮಿಸುವುದೇ ನನ್ನ ಆದ್ಯ ಕರ್ತವ್ಯ. ಈಗ ನೀನು ಕೈಗೊಂಡಿರುವ ಅತಿಶ್ರೇಷ್ಠವಾದ - 'ಪುತ್ರಕಾಮೇಷ್ಟಿ' ಯಾಗ ಬಹುಶಃ ಈ ಶತಮಾನದಲ್ಲಿಯೇ ಯಾರೊಬ್ಬರೂ ಸಹ ಮಾಡಿರಲಾರರು. ಈ ದೇಶದ ಧರ್ಮಿಷ್ಟ ರಾಜನು, ಸುಪುತ್ರಾಪೇಕ್ಷಿತನು ಆದ ನಿನ್ನ ಯಥಾ ಅಪೇಕ್ಷೆಯಂತೆ ಮಹಾ ಪುಣ್ಯ ಕಾರ್ಯವಾದ ಈ ಮಹಾಯಾಗದ ಯಜಮಾನಿಕೆಯನ್ನು ಭಗವದನುಗ್ರಹವೆಂದು ನಾನೇ ವಹಿಸಿಕೊಳ್ಳುತ್ತೇನೆ. ಯಾಗವು ನಿನ್ನ ಘನತೆಗೆ ತಕ್ಕಂತೆ ಅಖಂಡ ವೈಭವದಿಂದ ಸಾಗಬೇಕಾಗಿರುವುದರಿಂದ, ಅದರ ಸಮಸ್ತ ಖರ್ಚು ವೆಚ್ಚದ ಸಂಪೂರ್ಣ ಹೊಣೆಯನ್ನು ಈ ದೇಶದ ಅರ್ಥ ಮಂತ್ರಿಯೂ ಆದ ಮಹಾಮಂತ್ರಿಗಳೇ ವಹಿಸಿಕೊಳ್ಳಬೇಕು. ಹಾಗೂ ಈ ರಾಜ್ಯದ ಪ್ರಮುಖ ಸಲಹೆಗಾರರಾದ ನಿನ್ನ ಸಹೋದರ ಮುಂಜರಾಜರು ಯಾಗ ಮಂಟಪ ನಿರ್ಮಾಣಾದಿ ಸಮಸ್ತ ಮೇಲ್ವಿಚಾರಣೆಯನ್ನು ವಹಿಸಿಕೊಳ್ಳಲಿ" ಎಂದು ನುಡಿದರು.

"ಅದಕ್ಕೆ ನಾವಿಬ್ಬರು ಕಂಕಣ ಬದ್ಧರಾಗಿದ್ದೇವೆ" ಎಂದು ಮಹಾಮಂತ್ರಿಗಳು, ಮುಂಜರಾಜನು ಇಬ್ಬರೂ ಸಮ್ಮತಿಸಿದರು.

ಅದರ ಬಗ್ಗೆ ಚರ್ಚೆ ಸುದೀರ್ಘವಾಗಿ ನಡೆಯಿತು.

ರಾಜ ಪುರೋಹಿತರ ವಿಶೇಷ ಸಲಹೆಯಂತೆ ಬಹು ವಿಜೃಂಭಣೆಯಿಂದ ಅಖಂಡವಾಗಿ ಜರುಗುವ ಪುತ್ರಕಾಮೇಷ್ಟಿ ಯಾಗಕ್ಕೆ ಅನುಗುಣವಾಗಿ ಪೂರ್ವಯೋಜಿತವಾಗಿ ಆ ಶುಭ ಸಮಾಚಾರದ ರಾಯಸವನ್ನು ಹಾಗೂ ಕರೆಯೋಲೆಗಳನ್ನು ಸಕಾಲಕ್ಕೆ ಮುಟ್ಟುವಂತೆ ಶೀಘ್ರಗಾಮಿಗಳಾದ ಉತ್ಸಾಹ ತುಂಬಿದ ರಾಜಧೂತರನ್ನು ಆರ್ಯಾವರ್ತದ ಸಕಲ ದೇಶಗಳಿಗೂ ರವಾನಿಸಲಾಯಿತು.

ಇತ್ತ ರಾಜ ಪುರೋಹಿತರು ಆ ಮಹಾಯಾಗವನ್ನು ನೆರವೇರಿಸಲು ಸರ್ವ ಶ್ರೇಷ್ಠರಾದ, ತಮಗೂ ತಿಳಿದವರೇ ಆಗಿದ್ದ ಉತ್ತರ ಆರ್ಯಾವರ್ತದ ಹಿಮವತ್ಪರ್ವತದ ತಪ್ಪಲಿನಲ್ಲಿ ಅನೇಕಾನೇಕ ವರ್ಷಗಳಿಂದ ತಪಸ್ಸನ್ನಾಚರಿಸುತ್ತಿದ್ದ ಋಷಿಗಳನ್ನೂ, ಹಾಗೂ ಕಾಶೀ ಪಟ್ಟಣ ಮುಂತಾದ ಪವಿತ್ರ ಕ್ಷೇತ್ರಗಳಲ್ಲಿ ದೇಶಕಲ್ಯಾಣಕ್ಕಾಗಿ ಅನವರತವೂ ಭಗವದಾರಾಧನೆಯಲ್ಲಿಯೇ ಜೀವನವನ್ನು ಸವೆಸುತ್ತಿದ್ದ ಸರ್ವ ಶ್ರೇಷ್ಠ ವೇದ ಸ್ವರೂಪರಾದ ಅನೇಕ ಋತ್ವಿಕ ಬ್ರಾಹ್ಮಣೋತ್ತಮರನ್ನು ಆಹ್ವಾನಿಸಿ, ದೂರ ದೂರ ದೇಶಗಳಿಂದ ಬರಲು ಅವರುಗಳಿಗಾಗಿ, ರಾಜಧೂತರ ಮೂಲಕ ಮೇನಾಗಳನ್ನೂ, ಭಲಾಢ್ಯರಾದ ಬೋಯಿಗಳನ್ನೂ ಕಳುಹಿಸಿಕೊಟ್ಟಿದ್ದರು.

ವಿಶಾಲವಾದ ರಮಣೀಯ ಮೈದಾನದಲ್ಲಿ ಒಮ್ಮೆಯೇ ಹತ್ತು ಲಕ್ಷ ಪ್ರಜೆಗಳು ಧಾರಳವಾಗಿ ಕುಳಿತು ಮಹಾಯಾಗವನ್ನು ವೀಕ್ಷಿಸಬಹುದಾದ ಬೃಹತ್ ಪ್ರಮಾಣದಲ್ಲಿ ಭವ್ಯಾಲಂಕೃತವಾದ ಯಾಗ ಮಂಟಪವನ್ನು ನಿರ್ಮಾಣ ಮಾಡಲು ಯೋಜನೆಯನ್ನು ರೂಪಿಸಿಕೊಂಡರು.

ರಾಜ ಪುರೋಹಿತರ ಸಮಯೋಚಿತ ಸಲಹೆಯಂತೆ ಯಾಗ ಮಂಟಪ, ಯಜ್ಞವೇದಿಕೆ ನಿರ್ಮಾಣ ಮಾಡುವುದಕ್ಕೆ ಪೂರ್ವಯೋಜಿತವಾಗಿ, ನಿಷ್ಠಾವಂತ ವೇದ ಸ್ವರೂಪ ಶ್ರೇಷ್ಠರಾದ ಋತ್ವಿಕ ಬ್ರಾಹ್ಮಣೋತ್ತಮರಿಂದ ಶಾಸ್ತ್ರೋಕ್ತ ರೀತಿಯಾಗಿ ಭೂಶೋಧನೆ ಮಾಡಿ, ಸ್ವಸ್ತಿ ಪುಣ್ಯಾಹವಾಚನಾದಿಗಳಿಂದಲೂ ವೇದ ಮಂತ್ರ ಪುನಶ್ಚರಣೆ ಮಾಡಿಸಿ ವಿಧಿವತ್ತಾಗಿ ಭೂ ಶುದ್ಧಿಗೊಳಿಸಿ ಭೂಮಾತೆಯನ್ನು ಪೂಜಿಸಿ ಪ್ರಾರ್ಥಿಸಿದರು ಸಿಂಧೂಲರಾಜ ದಂಪತಿಗಳು.

ರಾಜ ಸಹೋದರ ಮುಂಜರಾಜನೂ ಸಹ ತನ್ನ ಆಪ್ತ ಕಾರ್ಯದರ್ಶಿಗಳಾದ ಬಹುನಂಬಿಕೆಗೆ ಪಾತ್ರನಾಗಿದ್ದ ಅರಮನೆಯ ಸರದಾರ ಅಚಲಸಿಂಹ ಮುಂತಾದ ಪ್ರಮುಖ ವ್ಯಕ್ತಿಗಳನ್ನು ಮುಂದಿಟ್ಟುಕೊಂಡು, ಕಾರ್ಯ ತತ್ಪರನಾಗಿ, ಯಾಗ ಮಂಟಪವನ್ನು ನಿರ್ಮಾಣ ಮಾಡುವುದರಲ್ಲಿ ಉತ್ತಮ ಅನುಭವವುಳ್ಳ ಸಾವಿರಾರು ಕುಶಲಕರ್ಮಿಗಳಿಂದ ಅಖಂಡ ವೈಭವವನ್ನು ಸಾರುವ ಅಭೂತಪೂರ್ವವಾದ ಯಾಗಮಂದಿರವನ್ನು ಸ್ಥಾಪಿಸಿದ್ದನು.

ಯೋಜನ ವಿಸ್ತಾರವುಳ್ಳ ಯಾಗ ಮಂದಿರದ ಮಧ್ಯಕ್ಕೆ ಸರಿಯಾಗಿ ಎಲ್ಲರಿಗೂ ಕಾಣುವ ರೀತಿಯಲ್ಲಿ ವಿನ್ಯಾಸವನ್ನು ಕಲ್ಪಿಸಿಕೊಂಡು ಬೃಹತ್ ಚೌಕಾಕಾರದ ಯಜ್ಞಕುಂಡವನ್ನು ಸಜ್ಜುಗೊಳಿಸಿದ್ದರು.

ಆ ಯಜ್ಞ ಕುಂಡದ ಸುತ್ತಲೂ ನವರತ್ನಖಚಿತ ಸಾವಿರದೆಂಟು ಬಂಗಾರದ ಕಂಬಗಳಿಂದಲೂ, ವಜ್ರ ವೈಡೂರ್ಯ ಮುತ್ತು ಮಾಣಿಕ್ಯಗಳಿಂದ ರಚಿಸಲಾಗಿದ್ದ ಚಿನ್ನದ ತೋರಣಗಳಿಂದಲೂ ಭವ್ಯಾಲಂಕೃತವಾಗಿ ಶೃಂಗರಿಸಿದ್ದರು.

ಸಾವಿರದೆಂಟು ಬಂಗಾರದ ಕಂಬಗಳಿಂದ ಆವೃತವಾದ ಯಜ್ಞವೇದಿಕೆಯ ಸುತ್ತಲು ಪ್ರಧಾನ ಪುರೋಹಿತರು, ಬ್ರಹ್ಮ ಪೀಠವೂ ಮತ್ತು ಹೋಮ ಮಾಡಲು ಪ್ರಮುಖ ಚತುರ್ವೇದಿಗಳೂ ಸೇರಿದಂತೆ, ನಾನಾ ದೇಶಗಳಿಂದ ಬಂದಿದ್ದ ವೇದ ಸ್ವರೂಪರಾದ ಋತ್ವಿಕ ಬ್ರಾಹ್ಮಣರಿಗಾಗಿ ಐದು ಸಾವಿರದ ಎಂಟು ಯಥೋಚಿತವಾದ ಪವಿತ್ರ ರತ್ನಖಚಿತ ಪೀಠಗಳನ್ನು ಹಾಕಿಸಿದ್ದರು.

ಯಜ್ಞವೇದಿಕೆಯ ಮೇಲೆ ಯಾಗವನ್ನು ಮಾಡುವ ಕಾಲದಲ್ಲಿ ಸಂಬಂಧ ಪಟ್ಟ ಯಜ್ಞದೀಕ್ಷಾಬದ್ಧರ ಹೊರೆತು ಮತ್ಯಾರೂ ಕುಳಿತುಕೊಳ್ಳಬಾರದ ರೀತಿಯಲ್ಲಿ ಕಟ್ಟುಪಾಡುಗಳ ಆಜ್ಞೆಯು ಪೂರ್ವಯೋಜಿತವಾಗಿತ್ತು.

ಸಿಂಧೂಲರಾಜನ ರಾಯಸಕ್ಕೆ ಹಾಗೂ ಮಹಾಯಾಗದ ಆಮಂತ್ರಣವನ್ನು ಪುರಸ್ಕರಿಸಿದ ಎಲ್ಲ ಸಾಮಂತರಾಜರುಗಳು ಆ ಮಹಾಯಾಗಕ್ಕೆ ತಮ್ಮ ತಮ್ಮ ವಿಪುಲ ಸಂಪತ್ತನ್ನು ಹೇರಿಕೊಂಡು ಬಂದಿದ್ದರು.

ಮಹಾ ಮಂತ್ರಿಗಳ ಮುನ್ನೆಚ್ಚರಿಕೆಯ ಪ್ರಭಾವದಿಂದ ದೇಶ ದೇಶಗಳಿಂದ ಹೊರಟು ಬಂದಿದ್ದ ಭೂಪತಿಗಳಿಗೆ ಸಕಲ ಸೌಕರ್ಯಗಳು ಉಳ್ಳಂಥ ದಿವ್ಯ ಸ್ಥಳದಲ್ಲಿ ರಾಜ ಬಿಡಾರಗಳನ್ನು ಹಾಕಿಸಿದ್ದರು. ಆ ರಾಜರ ಬಿಡಾರಗಳಲ್ಲಿ ರಾಜಾರ್ಹವಾದ ಸಕಲ ಧನಕನಕ ವಸ್ತುಗಳು, ಉಪಚರಿಸಲು ಬಗೆ ಬಗೆಯ ಭಕ್ಷ್ಯ ಭೋಜ್ಯಾದಿ ಪಾನೀಯಗಳನ್ನು ಅಣಿ ಪಡಿಸಿದ್ದರು.

ರಾಜೋಚಿತವಾದ ರತ್ನಖಚಿತ ಹಂಸತೂಲಿಕ ಮಂಚ, ಸುಪತ್ತಿಗೆ ಬಗೆಬಗೆಯ ರತ್ನಖಚಿತ ಪೀಠವು ಸೇರಿದಂತೆ ನೆಲದ ಮೇಲೆ ರತ್ನಗಂಬಳಿಗಳನ್ನು ಹಾಸಿದ್ದರು.

ಪ್ರತಿ ರಾಜಬಿಡಾರವನ್ನು, ಸುವಾಸನೆಯನ್ನು ಹೊರಸೂಸುವ ಪುಷ್ಪಗಳಿಂದಲೂ, ಸುಗಂಧ ಪರಿಮಳವನ್ನು ಹೊರಹೊಮ್ಮಿಸುವ ಧೂಪ ಸುಗಂಧಗಳಿಂದಲೂ ಅಣಿ ಮಾಡಿ ಅಲ್ಲಿನ ವಾತಾವರಣವನ್ನು ಆಹ್ಲಾದಕರವಾಗಿ ಇರಿಸಿದ್ದರು.

ವಿಶಾಲವಾದ ಒಂದೊಂದು ರಾಜ ಬಿಡಾರವೂ ಸಹ ಚಿನ್ನದ ಶಿಖರಗಳಂತೆ ಸುಪ್ರಕಾಶಮಾನವಾಗಿ ರೂಪುಗೊಂಡಿತ್ತು.

ಯಾಗ ಸ್ಥಳದ ಹತ್ತಿರದಲ್ಲಿಯೇ ಇದ್ದ ನದೀ ದಡದಲ್ಲಿ ಪ್ರತ್ಯೇಕವಾಗಿ, ಮಹಾಯಾಗವನ್ನು ನೆರವೇರಿಸಿಕೊಡಲು ಬಂದಿದ್ದ, ಸಕಲ ವೇದವೇದಾಂಗ ಪಾರಂಗತರಾದ ಪಂಡಿತರಿಗೆ, ಋಷಿಗಳಿಗೆ, ಶುಭ್ರವಾದ, ಬಿಡಾರಗಳನ್ನು ನಿರ್ಮಿಸಿದ್ದರು.

ಮಗದೊಂದು ಕಡೆ ದೇಶೋವಿಶಾಲವಾದ ಯೋಜನ ವಿಸ್ತಾರವುಳ್ಳ ಸ್ಥಳದಲ್ಲಿ ಅಡಿಗೆ ಶಾಲೆಯನ್ನೂ, ಆಹಾರ ಪದಾರ್ಥಗಳನ್ನು ಶೇಖರಿಸಿಡಲು ದೊಡ್ಡ ದೊಡ್ಡದಾದ ಉಗ್ರಾಣಗಳನ್ನು ನಿರ್ಮಾಣ ಮಾಡಿದ್ದರು.

ಆಕಾಶವನ್ನು ಅಳೆಯಲಾಗದು, ನಕ್ಷತ್ರಗಳನ್ನು ಎಣಿಸಲಾಗದು, ಎಂಬ ರೀತಿಯಲ್ಲಿ, ಆ ಉಗ್ರಾಣಗಳಲ್ಲಿ ಬೆಟ್ಟದೋಪಾದಿಯಲ್ಲಿ ಆಹಾರ ಸಾಮಗ್ರಿ ಧಾನ್ಯದ ಸಾಂಬಾರು ಪದಾರ್ಥಗಳನ್ನು ಶೇಖರಿಸಲ್ಪಟ್ಟಿತ್ತು.

'ಪುತ್ರಕಾಮೇಷ್ಠಿ' ಯಾಗದ ಶಾಸ್ತ್ರಬದ್ಧ ವಿಧಿಯಂತೆ ಇಪ್ಪತ್ತೊಂದು ದಿನಗಳು ನಡೆಯಲಿರುವ ಆ ಮಹಾಕಾರ್ಯಕ್ಕೆ ಸಕಲ ಸಿದ್ಧತೆಗಳು ಏರ್ಪಾಟಾಗಿತ್ತು.

ಮಹಾಯಾಗ ಪ್ರಾರಂಭವಾಗುವುದಕ್ಕೆ ಮೂರು ದಿನಗಳು ಮುಂಚಿತವಾಗಿಯೇ ದೇಶವಿದೇಶಗಳಿಂದ ಬಂದಿದ್ದ ಸಾಮಂತ ರಾಜರುಗಳು, ಅವರುಗಳಿಗಾಗಿ ಸಿದ್ಧಗೊಳಿಸಿದ್ದ ರಾಜ ಬಿಡಾರಗಳಲ್ಲಿ ನೆರೆದಿದ್ದರು.

ಮಹಾಮಂತ್ರಿಗಳು, ರಾಜ ಸಹೋದರ ಮುಂಜರಾಜನು ಆ ಎಲ್ಲ ರಾಜರುಗಳನ್ನೂ ಗೌರವದಿಂದ ಬರಮಾಡಿಕೊಂಡು, ಅವರುಗಳಿಗೆ ಎಳ್ಳಷ್ಟೂ ಕುಂದು ಬರದ ರೀತಿಯಲ್ಲಿ ಉಪಚರಿಸಿದ್ದರು. ಸಾಮಂತರಾಜರು ಕಪ್ಪವಾಗಿ ಒಪ್ಪಿಸಿದ ವಜ್ರ ವೈಡೂರ್ಯ ಧನಕನಕ ರಜತಾದಿಗಳು ಬೆಟ್ಟದೋಪಾದಿಯಲ್ಲಿ ರಾಜಖಜಾನೆಯಲ್ಲಿ ತುಂಬಿ ತುಳುಕುತ್ತಿತ್ತು.

ವಿನಯ ಭೂಷಣರಾದ ಸಾವಿರಾರು ರಾಜಸೇವಕರುಗಳು ಆ ರಾಜ ಬಿಡಾರದ ಉಸ್ತುವಾರಿಯನ್ನು ಯಥಾವಿಧಿಯಾಗಿ ಗಮನಿಸುತ್ತ ಯಾವ ರೀತಿಯಲ್ಲೂ ಏನೊಂದು ಆಭಾಸವಾಗದಂತೆ ಅತಿ ಸೂಕ್ಷ್ಮವಾಗಿ ಕಾರ್ಯ ನಿರ್ವಹಿಸುತ್ತಿದ್ದರು.

ಎಲ್ಲೆಲ್ಲೂ ಸಂಭ್ರಮ, ಎಲ್ಲೆಲ್ಲೂ ಸಡಗರ, ಎಲ್ಲೆಡೆಯಲ್ಲೂ ಹರ್ಷತೆಯ ಸಾಕ್ಷಾತ್ಕಾರತೆ ತುಂಬಿ ತುಳುಕಾಡುತ್ತಿತ್ತು.

ಪುತ್ರಕಾಮೇಷ್ಠಿ ಯಾಗ ಪ್ರಾರಂಭವಾಗುವ ಆ ಮಹಾ ಸುದಿನ, ಯಾಗ ಮಂಟಪದ ಸುತ್ತಲೂ ಭವ್ಯವಾಗಿ ಬಾಳೆಗೊನೆ ಹಸಿರು ತಳಿರು ತೋರಣಗಳಿಂದಲೂ, ಸುಗಂಧ ಪುಷ್ಪಹಾರಗಳಿಂದಲೂ ವೈಭವದಿಂದ ಶೃಂಗರಿಸಲ್ಪಟ್ಟಿತ್ತು.

ಸಿಂಧೂಲರಾಜನ ಅರಮನೆಯ ರಾಜ ಪುರೋಹಿತರೆ ಮಹಾಯಾಗದ ಪ್ರಧಾನ ಪುರೋಹಿತರಾಗಿ ಎಲ್ಲ ವೇದ ಪುರುಷರ ಸಮ್ಮುಖದಲ್ಲಿ ಸರ್ವಾನುಮತವಾಗಿ ಆಯ್ಕೆಗೊಂಡಿದ್ದರು.

ಇದರಿಂದ ಸಿಂಧೂಲರಾಜನಿಗೂ ಮಹಾಮಂತ್ರಿಗಳಿಗೂ ಅಪಾರ ಸಂತೋಷವಾಯಿತು.

ನಮ್ಮ ಅರಮನೆ ಅಂತಹ ಓರ್ವ ಮಹಾ ಶ್ರೇಷ್ಠರನ್ನು ಹೊಂದಿರುವುದು ಮಹಾ ಪುಣ್ಯವಿಶೇಷ ಫಲ ಎಂದು ರಾಜ ಪುರೋಹಿತರನ್ನು ಮುಕ್ತ ಕಂಠದಿಂದ ಹೊಗಳಿದ್ದರು.

ಅತ್ಯಂತ ಅದ್ದೂರಿಯಾಗಿ ನಡೆಯಲಿರುವ 'ಪುತ್ರಕಾಮೇಷ್ಠಿ' ಮಹಾಯಾಗಕ್ಕೆ ಮೂರು ದಿವಸ ಮುಂಚಿತವಾಗಿಯೆ ಧಾರಾನಗರದಾದ್ಯಂತ ನಗಾರಿ ಹೊಡೆಯುತ್ತ ಡಂಗೂರ ಸಾರಿಸಿದ್ದರು.

"ಮಹಾ ಪ್ರಜೆಗಳೇ, ಪುರ ಪ್ರಮುಖರೇ......... ಕೇಳಿರಿ ಕೇಳಿರಿ........... ಬರುವ ಸೋಮವಾರದಿಂದ ಮಹಾರಾಜರ ಅರಮನೆಯಲ್ಲಿ ವಿಶೇಷವಾಗಿ ನಿರ್ಮಿಸಿರುವ ಯಾಗ ಮಂದಿರದಲ್ಲಿ ಮಹಾರಾಜರು 'ಪುತ್ರಕಾಮೇಷ್ಟಿ' ಮಹಾಯಾಗ ಮಾಡುತ್ತಾರೆ. ಇಪ್ಪತ್ತೊಂದು ದಿವಸಗಳು ನಡೆಯುವ ಆ ಮಹಾಯಾಗಕ್ಕೆ ಎಲ್ಲರೂ ತಪ್ಪದೆ ಬಂದು ಪುನೀತರಾಗಿರಿ. ಆ ಯಾಗದ ಮಹಾ ಪ್ರಸಾದವಾಗಿ ಇಪ್ಪತ್ತೊಂದು ದಿವಸವೂ ಎರಡು ಹೊತ್ತು ಎಲ್ಲರಿಗೂ ರಾಜಭೋಜನ ಏರ್ಪಾಟಾಗಿದೆ" ಎಂದು ನಗಾರಿ ಹೊಡೆಯುತ್ತ ಅಲ್ಲಲ್ಲಿ ಡಂಗೂರ ಸಾರಿದ್ದರು ಅರಮನೆಯ ಡಂಗೂರಕಾರರು.

ಧಾರಾನಗರದ ಪ್ರಜೆಗಳಲ್ಲಿ ಎಂದಿಲ್ಲದ ಸಡಗರ ಉತ್ಸಾಹ. ಪ್ರತಿಯೊಬ್ಬರಲ್ಲೂ ಮೈತುಂಬಿ ತುಳುಕಾಡುತ್ತಿತ್ತು.

ಮಹಾಯಾಗದ ಅಂಗವಾಗಿ ಧಾರಾನಗರದ ಎಲ್ಲಾಮನೆಗಳೂ ಶುಭದ ಸಂಕೇತವಾಗಿ ತಳಿರು ತೋರಣಗಳಿಂದ ಅಲಂಕೃತವಾಗಿತ್ತು. ಪ್ರತಿ ಮನೆಯ ಮುಂದೆ ರಂಗವಲ್ಲಿಯಿಂದ ಚಿತ್ರ ಚಿತ್ರಿತವಾಗಿ ಹಸೆಗೆರೆದಿದ್ದರು.

ಅಷ್ಟೇ ಅಲ್ಲದೆ, ರಾಜಬೀದಿಗಳು ಹಸಿರು ಮಾವು ತಳಿರು ತೋರಣ, ಬಣ್ಣ ಬಣ್ಣದ ಸಾಲು ಬಾವುಟಗಳಿಂದ ಭವ್ಯವಾಗಿ ಅಲಂಕೃತವಾಗಿತ್ತು.

ಮಹಾಯಾಗದ ಪ್ರಾರಂಭದ ಶುಭದಿನವಾದ ಅಂದು ದೇಶೋವಿಶಾಲವಾದ ಅಭೂತಪೂರ್ವ ವೈಭವದಿಂದ ಕೂಡಿದ ಆ ಯಜ್ಞಮಂಟಪದಲ್ಲಿ, ವೇದ ವೇದಾಂಗ ಪಾರಂಗತರೂ, ಮಹಾಜ್ಞಾನಿಗಳೂ ಆದ ಐದು ಸಹಸ್ರ ಋತ್ವಿಕರಿಂದ ತುಂಬಿ ತುಳುಕಾಡುತ್ತಿತ್ತು.

ಪ್ರಜಾನುರಾಗಿಯಾಗಿದ್ದ ಸಿಂಧೂಲರಾಜನ ಪ್ರಜೆಗಳು ಹಾಗೂ ದೇಶದೇಶಗಳಿಂದ ಬಂದಿದ್ದ ಸಮಸ್ತ ಪ್ರಜೆಗಳು ಯಾಗಮಂದಿರದಲ್ಲಿ ಕಿಕ್ಕಿರಿದು ನೆರೆದಿದ್ದರು. ಆ ಮಹಾಯಾಗದ ವೈಭವ ವೈಖರಿಯನ್ನು ಮುಕ್ತಕಂಠದಿಂದ ಕೊಂಡಾಡುತ್ತಿದ್ದರು.

ಚಪ್ಪನ್ನಾರು ದೇಶಗಳ ರಾಜರುಗಳು, ಅವರಿಗೆಂದೇ ಭವ್ಯವಾಗಿ ವ್ಯವಸ್ಥೆ ಮಾಡಲಾಗಿದ್ದ ರತ್ನಖಚಿತ ರಾಜಪೀಠಗಳಲ್ಲಿ ರಾಜಗಾಂಭೀರ್ಯದಿಂದ ಆಸೀನರಾಗಿದ್ದರು.

ಯಾಗವೇದಿಕೆಯ ಅಗ್ನಿಕುಂಡದ ಸುತ್ತಲೂ ಮಹಾಜ್ಞಾನಿಗಳಾದ ವೇದ ಸ್ವರೂಪರಾದ ಐದು ಸಾವಿರ ಋತ್ವಿಕ ವಿಪ್ರೋತ್ತಮರು, ಚಿನ್ನದ ದಾರದ ಅಂಚಿನಿಂದ ಕೂಡಿದ ಥಳಥಳ ಹೊಳೆಯುವ, ಹಳದಿ ಬಣ್ಣದ ಶುದ್ಧ ರೇಷ್ಮೆ ಪೀತಾಂಬರವನ್ನುಟ್ಟಿದ್ದರು. ಅವರೆಲ್ಲರೂ ಬ್ರಹ್ಮ ತೇಜಸ್ಸಿನಿಂದ ಬೆಳಗುತ್ತಿದ್ದರು. ಯಜ್ಞ ಮಂಟಪದಲ್ಲಿ ಬಂದವರನ್ನು ಯಥೋಚಿತವಾಗಿ ಆಹ್ವಾನಿಸಲು ಸಹಸ್ರಾರು ರಾಜಸೇವಕರು ಕಾರ್ಯೋನ್ಮುಕರಾಗಿ ಎಲ್ಲರನ್ನು. ಆದರದಿಂದ ನಯವಿನಯ ನುಡಿಗಳಿಂದ ಆಹ್ವಾನಿಸುತ್ತ ಸರ್ವ ರೀತಿಯಲ್ಲೂ ಉಪಚರಿಸುತ್ತಿದ್ದರು.

ಆ ಮಹಾ ಯಾಗ ಮಂಟಪದಲ್ಲಿ ಎತ್ತಸಾಗಿದರೂ "ದಯಮಾಡಿಸಬೇಕು, ಹೀಗೆ ದಯಮಾಡಿಸಬೇಕು, ಕುಳಿತುಕೊಳ್ಳಬೇಕು, ಅಲಂಕರಿಸಬೇಕು" ಎಂಬ ಮಧುರ ಶಬ್ದಗಳು, ನೆರೆದಿದ್ದ ಎಲ್ಲ ಸಭಿಕರ ಹೃದಯಕ್ಕೆ ಅಮೃತ ಧಾರೆ ಎರೆದಂತಾಗಿತ್ತು.

ಮಹಾವೇದ ಸ್ವರೂಪರಾದ, ಪ್ರಧಾನ ಪುರೋಹಿತರ ನಿರ್ದೇಶನದಲ್ಲಿ ವಿಧಿವತ್ತಾಗಿ ಯಾಗ ಕುಂಡದ ಒಂದೆಡೆ ವಿಶಾಲವಾಗಿ ರೂಪಿಸಿದ್ದ ಭತ್ತ, ಎಳ್ಳು, ಅಕ್ಕಿ, ಗೋಧಿ ಮುಂತಾದ ಧಾನ್ಯಗಳ ರಾಶಿಯ ಮೇಲೆ ಒಂದೊಂದು ರತ್ನಖಚಿತವಾದ ಬಂಗಾರದ ತಟ್ಟೆಯಲ್ಲಿ ನೀರಿನ ಬಿಂದಿಗೆಯಷ್ಟು ಗಾತ್ರವುಳ್ಳ ಸಾವಿರದೆಂಟು ರತ್ನಖಚಿತ ಚಿನ್ನದ ಬಿಂದಿಗೆಗಳಲ್ಲಿ ಕಲಶಗಳನ್ನು ಸ್ಥಾಪಿಸಿದ್ದರು.

ಆ ಒಂದೊಂದು ಕಲಶಕ್ಕೂ, ವಿಧಿ ಪೂರ್ವಕವಾದ ಪಂಚರತ್ನ, ಪಂಚಲೋಹ, ಪಂಚ ಪಲ್ಲವ, ಸುವರ್ಣನಾಣ್ಯ ಮುಂತಾದುವನ್ನು ಹಾಕಿ, ಅವುಗಳಿಗೆ ಅಲಂಕಾರಮಯವಾಗಿ ರೇಶ್ಮೆ ಪೀತಾಂಬರವನ್ನು ಮಾಲೆಯಾಗಿ ಹೊದಿಸಿದ್ದರು.

ಹೀಗೆ ಭವ್ಯವಾದ ಸಿದ್ಧತೆಗಳೊಂದಿಗೆ, ಆ ಮಹಾಯಾಗವು ವಿಧಿವತ್ತಾಗಿ ಪ್ರಾರಂಭಗೊಂಡಿತ್ತು. ಆ ವೇದ ಪಾರಂಗತರ ಮಂತ್ರಘೋಷವು ಗಗನವನ್ನು ಭೇದಿಸಿ ದೇವತೆಗಳನ್ನು, ನೇರವಾಗಿ ಪ್ರಾರ್ಥಿಸಿದಂತಿತ್ತು. ಹೀಗೆ ವಿಧಿಪೂರ್ವಕವಾಗಿ 'ಪುತ್ರಕಾಮೇಷ್ಟಿ' ಯಾಗವು ಅತ್ಯಂತ ವಿಜೃಂಭಣೆಯಿಂದ ಎಲ್ಲಿಯೂ ಲೋಪವಾಗದಂತೆ ಜರುಗಿತು.

ಪೂರ್ಣಾಹುತಿಯ ನಂತರ ಪ್ರಜ್ವಲಿಸುತ್ತಿದ್ದ ಅಗ್ನಿಯಿಂದ ಅಗ್ನಿದೇವನು ಚಿನ್ನದ ಪಾತ್ರೆಯಲ್ಲಿ ಪಾಯಸ ಪ್ರಸಾದವನ್ನು ಹಿಡಿದು ಸಿಂಧೂಲರಾಜನಿಗೆ ಕೊಟ್ಟು,

"ಎಲೈ ಸಿಂಧೂಲರಾಜನೇ.... ಇಂದು ನೀನು ಮಾಡಿದ ಮಹಾಯಾಗದಿಂದ ಎಲ್ಲ ದೇವತೆಗಳೂ ಸಂತುಷ್ಟರಾಗಿದ್ದಾರೆ. ಇದೋ..... ಈ ಪಾಯಸ ಪ್ರಸಾದವನ್ನು ಅಂತಃಶುದ್ಧಿಯಿಂದ ದಂಪತಿಗಳಾದ ನೀವಿಬ್ಬರೂ ಸ್ವೀಕಾರ ಮಾಡಿರಿ. ಇದರ ಫಲದಿಂದ ನಿನ್ನ ವಂಶವನ್ನು ಬೆಳಗಬಲ್ಲ ಮಹಾ ಕೀರ್ತಿವಂತನಾದ ಮಗನು ಜನಿಸುತ್ತಾನೆ"

- ಎಂದು ಹೇಳಿ ಅಗ್ನಿದೇವನು ಅಂತರ್ಧಾನನಾದನು.

ಇದರಿಂದ ಸಂತೋಷಭರಿತನಾದ ಸಿಂಧೂಲರಾಜನು ಅಗ್ನಿದೇವನು ಕರುಣಿಸಿದ ಪಾಯಸ ಪ್ರಸಾದವನ್ನು ತನ್ನ ಧರ್ಮಪತ್ನಿಗೂ ಕೊಟ್ಟು ತಾನೂ ಸ್ವೀಕರಿಸಿದನು.

ಹೋಮ ಸಮಾಪ್ತಿಯದ ನಂತರ, ರಾಜ ದಂಪತಿಗಳು, ರಾಜ ಪುರೋಹಿತರ ಆದೇಶದಂತೆ 'ಅವಭೃತ' ಸ್ನಾನ ಮಾಡಿ ಯಾಗವು ಸಾಂಗವಾಗಿ ಜರುಗಲು ಕಾರಣೀಭೂತರಾದ ಋತ್ವಿಕರಿಗೆ, ತೃಪ್ತಿಯಾಗುವಂತೆ, ಯಥೇಚ್ಛವಾಗಿ ಧನಕನಕಾದಿಗಳನ್ನೂ, ಗೋದಾನ, ಭೂದಾನಗಳನ್ನು ಕೊಟ್ಟು ಆಚಾರ್ಯ ಬ್ರಹ್ಮರ ಆಶೀರ್ವಾದ ಪಡೆದರು.

# ಪುತ್ರ ಜನನ

ಸಿಂಧೂಲರಾಜನು ಮಾಡಿದ ಪುತ್ರಕಾಮೇಷ್ಠಿ ಯಾಗದ ಪುಣ್ಯಫಲದಿಂದ ಪಟ್ಟಮಹಿಷಿಯಾದ, ಗುಣವತಿಯು ಗಂಡುಮಗುವಿಗೆ ಜನ್ಮವಿತ್ತಳು.

ಬ್ರಹ್ಮತೇಜಸ್ಸಿನಿಂದ ಪ್ರಕಾಶಿಸುತ್ತಿದ್ದ ತನ್ನ ಪುತ್ರನನ್ನು ನೋಡಿ ಹುಣ್ಣಿಮೆಯ ಚಂದ್ರ ದರ್ಶನದಿಂದ ಉಬ್ಬಿ ಹೋದ ಸಾಗರದಂತೆ ಅಮಿತಾನಂದಭರಿತಳಾದಳು.

ತಾಯ್ತನದ ಉನ್ಮಾದ ಸಂತೋಷದಿಂದ ಆ ತನ್ನ ಮಗುವನ್ನು ಅಪ್ಪಿ ಮುದ್ದಾಡಿ ಮುತ್ತಿನ ಮಳೆಗರೆದಳು. ಮೊಲೆಹಾಲನುಣಿಸಿ ಎಂದಿಲ್ಲದ ಸಂತೋಷ ಸಂಭ್ರಮದಿಂದ ಸಂತೋಷಪಟ್ಟಳು.

ಬಹಳ ವರ್ಷಗಳಿಂದಲೂ ಕಾಡುತ್ತಿದ್ದ ತನ್ನ ಬಂಜೆತನವು ಇಲ್ಲಿಗೆ ಕಳೆಯಿತೆಂದು ತೃಪ್ತಿಪಟ್ಟಳು.

ಆ ಸಿಹಿ ಸುದ್ದಿಯನ್ನು ಪತಿಯಾದ ಧಾರಾ ನಗರದ ಸಿಂಹಾಸನಾಧೀಶ್ವರನಿಗೆ ತಿಳಿಸಲು ತನ್ನ ಅಂತಃಪುರದ ಮುಖ್ಯ ದಾಸಿಯ ಮೂಲಕ ಬಹುಬೇಗ ತಿಳಿಸುವಂತೆ ಆಜ್ಞಾಪಿಸಿದಳು ಪಟ್ಟದರಸಿಯಾದ ಗುಣವತಿ.

ತನ್ನ ವಂಶೋದ್ಧಾರಕನ ಹಂಬಲದಿಂದಾಗಿ ಕ್ಷಣ ಒಂದು ಯುಗದಂತೆ ಪರಿತಪಿಸುತ್ತ ಅತ್ಯಂತ ಕಾತುರನಾಗಿದ್ದ ಸಿಂಧೂಲರಾಜನು ದಾಸಿಯಿಂದ ಸುಪುತ್ರನು ಜನಿಸಿದ ಸುವಾರ್ತೆಯನ್ನು ಕೇಳಿ ಮಹದಾನಂದ ಪರವಶನಾದನು.

ಆ ಸಂತೋಷದ ಸಿಹಿ ಸುದ್ದಿ ತಂದ ಅದೃಷ್ಟಗಾತಿ ದಾಸಿಗೆ ತನ್ನ ಕೊರಳಲ್ಲಿದ್ದ ಅಮೂಲ್ಯವಾದ ರತ್ನಹಾರವನ್ನೆ ತೆಗೆದು ಆಕೆಗೆ ಬಳುವಳಿ ಕೊಟ್ಟನು.

ನಿಮಿಷ ಮಾತ್ರವೂ ತಡಮಾಡದೆ ಸಿಂಧೂಲನು ರಾಜ ಪುರೋಹಿತರನ್ನು, ಮಹಾ ಮಂತ್ರಿಗಳನ್ನು, ತನ್ನ ಒಡಹುಟ್ಟಿದ ಪ್ರೀತಿಯ ಸೋದರ ಮುಂಜರಾಜನನ್ನು ಬರಮಾಡಿಕೊಂಡು ಮಹದುತ್ಸಾಹದಿಂದ ಮಹಾರಾಣಿಯ ಏಕಾಂತ ಭವನಕ್ಕೆ ಬಿಜಯ ಮಾಡಿದನು.

ಹಾಗೆ ಸಾಕ್ಷಾತ್ ಇಂದ್ರದೇವನಂತೆ ಬರುತ್ತಿದ್ದ ಸಿಂಧೂಲರಾಜನನ್ನು ದೂರದಿಂದಲೆ ಗಮನಿಸಿದ ಭವ್ಯ ಅರಮನೆಯ ಉದ್ದಕ್ಕೂ ಇಕ್ಕೆಡೆಯಲ್ಲೂ ನಿಂತಿದ್ದ ಆಯುಧಧಾರಿ ರಾಜಭಟರುಗಳು, ದಾಸಿಯರು ಒಬ್ಬರಿಗೊಬ್ಬರು ಸೂಚನೆಕೊಟ್ಟು ಕೂಗುತ್ತ "ಮಹಾರಾಜರು ಆಗಮಿಸುತ್ತಿದ್ದಾರೆ ಎಚ್ಚರಿಕೆ, ಮಹಾರಾಜರು ಬರುತ್ತಿದ್ದಾರೆ ಎಚ್ಚರಿಕೆ" ಎಂದು ಹರ್ಷದ್ಘೋಷ ಮಾಡುತ್ತಿದ್ದರು.

ಮಹಾರಾಜನು ತನ್ನ ಪರಿವಾರದೊಂದಿಗೆ ಹತ್ತಿರ ಹತ್ತಿರ ಬರುತ್ತಿದ್ದಂತೆ ಶಿರಬಾಗಿ ಅವನಿಗೆ ರಾಜಗೌರವವನ್ನು ಸೂಚಿಸುತ್ತಿದ್ದರು.

ಆ ನಾಲ್ವರು ಮಹಾರಾಣಿ ಗುಣವತಿದೇವಿಯ ಏಕಾಂತ ಭವನ ಪ್ರವೇಶ ಮಾಡಿದರು.

ವೈಭವ ಸಾಮ್ರಾಜ್ಯ ಪುರುಷಸಿಂಹನಾದ ತನ್ನ ಇನಿಯ ಬರುತ್ತಿದ್ದಂತೆ ಮಹದಾನಂದ ಪುಳಕಿತಳಾದಳು. ಗುಣವತಿ - ಆಗ ಒಂದು ರೀತಿಯ ನಾಚಿಕೆಯಿಂದಲೂ ತಡೆದುಕೊಳ್ಳಲಾಗದಂಥ ಅಮಿತೋತ್ಸಾಹದಿಂದಲೂ ತನ್ನ ಇನಿಯನೊಡನೆ ಏನು ಮಾತನಾಡಬೇಕೆಂಬುದೇ ತೋಚದೆ ಮೂಕ ವಿಸ್ಮಿತಳಾದಳು.

ರಾಜನೆ ತನ್ನ ಪಟ್ಟ ಮಹಿಷಿಯಾದ ಅಪೂರ್ವ ಲಾವಣ್ಯವತಿಯನ್ನು ಮಾತನಾಡಿಸುತ್ತ"ಮಹಾರಾಣಿಯವರು ಹೇಗಿದ್ದಾರೆ? ಸುಪುತ್ರ ರತ್ನನು ಹೇಗಿದ್ದಾನೆ" ಎಂದು ಹಾಸ್ಯ ತುಂಬಿದ ಮಧುರ ನುಡಿಗಳಿಂದಲೇ ಆಕೆಯ ಹೃದಯಕ್ಕೆ ಕಚಗುಳಿ ಇಟ್ಟಂತೆ ಮಾತನಾಡಿದ ಆ ರಸಿಕ ರಾಜನಾದ ಸಿಂಧೂಲ.

"ತಮ್ಮ ಕೃಪೆಯಿಂದ ಆರೋಗ್ಯವಾಗಿದ್ದೇನೆ. ಪುತ್ರರತ್ನನು ರೂಪಿನಲ್ಲಿ ತಮ್ಮಂತೆಯೇ ಇದ್ದಾನೆ" ಎಂದಷ್ಟೇ ನುಡಿದಳು.

ಆಗ ತನ್ನ ವಂಶೋದ್ಧಾರಕನನ್ನು ನೋಡಿ ಆನಂದಬಾಷ್ಪ ಹರಿಸಿದನು. ತನ್ನ ಬಳಿಯಲ್ಲಿಯೇ ಇದ್ದ ರಾಜ ಪುರೋಹಿತರನ್ನು ಮಹಾಮಂತ್ರಿಗಳನ್ನು ಮಿಗಿಲಾಗಿ ತನ್ನ ಸಹೋದರರನ್ನು ಕುರಿತು ಅವರ್ಣನೀಯ ಸಂತೋಷದಿಂದ ಸಂಭಾಷಿಸುತ್ತ "ರಾಜಪುರೋಹಿತರೆ, ಮಹಾಮಂತ್ರಿಗಳೆ, ಮುಂಜರಾಜನೆ, ಇನ್ನು ನನಗೆ ಇದಕ್ಕಿಂತಲೂ ಮಿಗಿಲಾದ ಭಾಗ್ಯ ಬೇರೊಂದುಂಟೆ? ನಾನು ಧನ್ಯನಾದೆ, ನಾನು ಧನ್ಯನಾದೆ" ಎಂದನು.

"ಎಲ್ಲ ಆ ಪರಮಾತ್ಮನ ಅನಂತ ಕೃಪಾಶಿರ್ವಾದ ಬಲ, ಸಿಂಧೂಲ" ಎಂದು ರಾಜಪುರೋಹಿತರು ಬೆನ್ನು ತಟ್ಟಿ ನುಡಿದರು.

ನಂತರ ಹಂಸತೂಲಿಕಾತಲ್ಪದಲ್ಲಿ ತಾಯಿಯ ಪಕ್ಕದಲ್ಲಿಯೇ ಬಂಗಾರದ ಹರಿವಾಣದಲ್ಲಿ ಮೆತ್ತನೆಯ ಹಸಿರು ಕೆಂಪು ಬಣ್ಣದಿಂದ ಕೂಡಿದ ರತ್ನಗಂಬಳಿಯ ಮೇಲೆ ಅಂಬೆಗಾಲು ಹಿಡಿದು ಹರ್ಷದಿಂದ ನಗುನಗುತ್ತ ಚಿಮ್ಮುತ್ತಿದ್ದ ಸುಂದರ ಕಂದನನ್ನು ನೋಡಿ ಆನಂದ ಪುಳಕಿತರಾದ ರಾಜಪುರೋಹಿತರು - "ಈ ಪುತ್ರರತ್ನನು ಅಂತಿಂಥ ಮಗುವಲ್ಲ, ದೈವಾಂಶ ಸಂಭೂತನಾದ ಈ ಮಗುವೂ ಮುಂದೆ ನಮ್ಮ ಆರ್ಯಾವರ್ತಕ್ಕೆ (ಭರತಖಂಡಕ್ಕೆ) ಮಾತ್ರವಲ್ಲದೆ ವಿಶ್ವವ್ಯಾಪಿಯಾದ ಭಗವಂತನ ಗುಣಗಳಂತೆ ಇಡಿ ವಿಶ್ವದಲ್ಲಿಯೇ ಮಹಾ ಮೇರು ಕೀರ್ತಿ ಮುಕುಟ ಪ್ರಾಯನಾಗೀ ನಿನ್ನ ವಂಶದ ಕೀರ್ತಿಯನ್ನು ಅಜರಾಮರವಾಗಿ ಬೆಳಗುತ್ತಾನೆ. ಈತನ ಕಾಲವು ಸುವರ್ಣಯುಗವಾಗಿ ನಮ್ಮ (ಆರ್ಯಾವರ್ತ) ಭಾರತ ದೇಶವು ಸದಾ ಸುಭಿಕ್ಷದಿಂದ ಉಕ್ಕಿ ಹರಿವ ಜೀವನದಿಯಂತೆ ವಿಪುಲ ಸುಖ ಸಂತೋಷದಿಂದ ದೇವ ಭಾರತವಾಗಿ ಪ್ರತಿಬಿಂಬಿಸುತ್ತದೆ ರಾಜೇಂದ್ರ" ಎಂದು ಭವಿಷ್ಯ ನುಡಿದರು ರಾಜಪುರೋಹಿತರು.

ಮಹಾ ಮಂತ್ರಿಯೂ ಸಹ ರಾಜ ಪುರೋಹಿತರ ಸತ್ಯವಾಣಿಗೆ ಆನಂದಪರವಶರಾದರು.

ಮುಂಜರಾಜನು ತನ್ನ ತಾಯಿಗೆ ಸಮಾನರಾದ ಅತ್ತಿಗೆಯಾದ ಪಟ್ಟ ಮಹಿಷಿಯನ್ನು ಶಿರಬಾಗಿ ನಮಸ್ಕರಿಸಿ, ನಂತರ ಬಂಗಾರದ ಹರಿವಾಣದಲ್ಲಿ ಮಲಗಿದ್ದ

ಅದೃಷ್ಟವಂತ ಗಂಡು ಮಗುವನ್ನು ನೋಡಿ, ಸಂತೋಷಚಿತ್ತನಾದನು. ಮನದಲ್ಲೆ ತನ್ನ ಅಣ್ಣನನ್ನು ಬಹುವಾಗಿ ಕೊಂಡಾಡಿದನು.

ಸಿಂಧೂಲ ರಾಜನಿಗೆ ಗಂಡುಮಗುವಾದ ಸಂತೋಷ ವಾರ್ತೆ ಧಾರಾನಗರದಲ್ಲೆಲ್ಲ ಹಬ್ಬಿದಂತೆ, ಧಾರಾ ನಗರದ ಪ್ರಜೆಗಳಿಗೆ ಆದ ಆನಂದ ಅಷ್ಟಿಷ್ಟಲ್ಲ. ಎಲ್ಲರೂ ಉನ್ಮಾದ ಸಂತೋಷದಿಂದ ಮೈಮರೆತು ಹರ್ಷೋದ್ಗಾರದ ಧ್ವನಿಯಿಂದ ಕುಣಿ ಕುಣಿದಾಡಿದರು. ಸಂತೋಷದಿಂದ ನಕ್ಕುನಲಿದಾಡಿದರು...... ಎಲ್ಲೆಲ್ಲೂ ಎಲ್ಲೆಡೆಯಲ್ಲೂ ಬೀದಿ ಬೀದಿ ರಾಜ ಬೀದಿಗಳಲ್ಲಿ ಸಂತೋಷ ಸೌರಭ ಅವರ್ಣನೀಯವಾಗಿತ್ತು. ಮನೆಮನೆಗಳಲ್ಲೂ ಶುಭದ ಸಂಕೇತವಾಗಿ ಹಸಿರು ತೋರಣಗಳಿಂದ ಅಲಂಕರಿಸಿ ಚಿತ್ರ ಚಿತ್ರಿತವಾಗಿ ಹಸೆಗರೆದು - ಆಮೂಲಕ ತಮ್ಮ ಅತೀವ ಸಂತೋಷವನ್ನು ತೋಡಿ ಕೊಳ್ಳುತ್ತಿದ್ದರು ಪ್ರಜೆಗಳು. ರಾಜನು ಸಮಸ್ತ ಪ್ರಜೆಗಳಿಗೂ ಸಿಹಿ ಹಂಚಿಸಿದನು. ಎಲ್ಲ ದೇವಾಲಯಗಳಲ್ಲಿ ವಿಶೇಷ ಪೂಜೆ ವಿಶೇಷ ಅರ್ಚನೆ ಜರುಗಿದವು.

ಸಿಂಧೂಲರಾಜನಿಗೆ ಗಂಡುಮಗುವಾದ ಸುವಾರ್ತೆ ಭಾರತದ ಚಪ್ಪನ್ನಾರು ದೇಶಗಳ ರಾಜರುಗಳಿಗೂ ತಿಳಿಯಿತು. ಆ ರಾಜರುಗಳು ಸಹ ಅಮಿತಾನಂದಭರಿತರಾದರು.

ಯಥಾವಿಧಿಯಂತೆ ದಶದಿನಗಳು ಕಳೆದ ಅನಂತರ ಸುಂದರ ಮಗುವಿಗೆ ಚಿನ್ನದ ತೊಟ್ಟಿಲು ಹಾಕಿ ಅತ್ಯಂತ ವೈಭವದಿಂದ ನಾಮಕರಣ ಮಹೋತ್ಸವ ನೆರವೇರಿಸಿದರು.

ಆ ಮಗುವಿಗೆ ಭೋಜರಾಜ ಎಂದು ದಿವ್ಯವಾದ ಹೆಸರನ್ನಿಟ್ಟು ನಾಮಕರಣ ಮಾಡಿದರು.

ಭೋಜರಾಜನು ಹುಟ್ಟಿದ ದೆಸೆಯಲ್ಲಿ ವೈಭವೋಪೇತ ಧಾರಾನಗರ ಮಾತ್ರವೇ ಅಲ್ಲದೆ, ಇಡಿ ಭಾರತ ಖಂಡವೇ ಕಾಲಕಾಲಕ್ಕೆ ಮಳೆ - ಬೆಳೆ ಸಮೃದ್ಧಿಯಾಗಿ ರಾಜ ಬೊಕ್ಕಸವು ಸದಾ ತುಂಬಿ ತುಳುಕಾಡುತ್ತಿತ್ತು. ಪ್ರಜೆಗಳು ಸ್ವರ್ಗ ಸಂತೋಷದಿಂದ ನಕ್ಕು ನಲಿದಾಡುತ್ತಿದ್ದರು.

ಸ್ವರ್ಗಕ್ಕಿಂತಲೂ ಮಿಗಿಲಾದ ವೈಭವದಿಂದ ಕೂಡಿದ ಧಾರಾನಗರದ ಪ್ರಜೆಗಳು ಸದಾಕಾಲವು ಸ್ವರ್ಗಸಂತೋಷದಿಂದ ಸುಖಮಯ ಜೀವನ ಸಾಗಿಸುತ್ತಿದ್ದರು.

# ಭೋಜನ ಬಾಲಲೀಲೆ

ಅರಮನೆಯ ಮಹಾರಾಣಿಯವರು ಅಂತಃಪುರದಲ್ಲಿ ರಾಜವೈಭವದಿಂದ ಬೆಳೆಯುತ್ತಿದ್ದ ಸುಂದರ ಬಾಲಕ ಭೋಜನು ಶುಕ್ಲಪಕ್ಷದ ಪೂರ್ಣ ಚಂದ್ರನಂತೆ ಮಹಾ ಬ್ರಹ್ಮ ತೇಜಸ್ಸಿನಿಂದ ಕೂಡಿದವನಾಗಿ. ತಾಯಿಯೊಡನೆ ಬಗೆಬಗೆಯ ಆಟಪಾಠಗಳನ್ನಾಡುತ್ತಾ ಗೆಜ್ಜೆ ಕಾಲ್ಗಳಿಂದ ಘಲು ಘಲು ನಿನಾದ ಮಾಡುತ್ತ ಕುಣಿ ಕುಣಿಯುತ್ತ, ನಲಿದಾಡುತ್ತ ನಾಲ್ಕು ವರ್ಷಗಳು ತುಂಬಿದಂತೆ ಐದನೆ ವರ್ಷಕ್ಕೆ ಹೆಜ್ಜೆ ಹಾಕಿದ್ದ.

ಯಾವುದೇ ರೀತಿಯ ರಾಜ ವೈಭವಕ್ಕಿಂತಲೂ ಮಮತೆಯ ತಾಯಿಯಾದ ಗುಣವತಿದೇವಿಯ ಅಂತಃಕರಣ ವೈಭವವೇ ಪರಮ ಸುಖವೆನಿಸಿತ್ತು - ಆ ಮುದ್ದು ಕಂದನಾದ ಭೋಜನಿಗೆ.

"ಭೋಜನು ಮುಂದೆ ಮಹಾವಿದ್ಯಾ ವಿಶಾರದ ಪಾಂಡಿತ್ಯಭೂಷಣನಾಗಬೇಕು. ಮಹಾ ಪರಾಕ್ರಮಿಯಾಗಬೇಕು. ವೀರಶೂರ ನಾಗಬೇಕು. ರಾಜಧರ್ಮ ರಾಜನೀತಿಯಲ್ಲಿ ವಿಶ್ವದಲ್ಲಿಯೆ ಅಪೂರ್ವ ಮಾದರಿಯಾಗಿರಬೇಕು. ಜೊತೆಗೆ ಮಹಾಧರ್ಮಿಷ್ಟನಾಗಿ ಭಾರತ ದೇಶವನ್ನು.... ದೇಶದ ಪ್ರಜೆಗಳನ್ನು ಚೆನ್ನಾಗಿ ಕಾಪಾಡಬೇಕು, ಮಹಾ ಕೀರ್ತಿವಂತನಾಗಬೇಕು. ಇವೆ ಮೊದಲಾದ ಸದ್ಗುಣಗಳು ಎಳೆ ವಯಸ್ಸಿನಲ್ಲಿಯೆ ಆ ಎಲ್ಲ ಭಾವನೆಗಳು ಅವನ ಪುಟ್ಟ ಹೃದಯದಲ್ಲಿ ಹಾಸು ಹೊಕ್ಕಾಗಿರಬೇಕು." ಎಂಬ ಹೆಬ್ಬಯಕೆ ಮಹಾರಾಣಿಯಾದ ಗುಣವತಿದೇವಿಯಲ್ಲಿ ಮೂಡಿ ಹರಿದಿತ್ತು.

ಮಹಾರಾಣಿಯ ಆದೇಶದಂತೆ ಮಹಾಮಂತ್ರಿಯು ತನ್ನಲ್ಲಿ ವಿಶೇಷ ಕುಶಲ ಬುದ್ಧಿ ಪ್ರಯೋಗವನ್ನು ಕ್ರೋಢೀಕರಿಸಿ ಅವೆಲ್ಲವೂ ಭೋಜನಿಗೆ ಮೈಗೂಡುವಂತೆ ಅದ್ಭುತವಾದ ಅತಿ ಸುಂದರ ಮನಮೋಹಕ ಸೌಂದರ್ಯದಿಂದ ಕೂಡಿದ ಅದ್ಭುತ ಚಿತ್ರಶಾಲೆಯೊಂದನ್ನು ನಿರ್ಮಾಣ ಮಾಡಿಸಿದ್ದನು.

ಆ ಸುವರ್ಣಕಾಂತಿಯಿಂದ ಕೂಡಿದ ಚಿತ್ರಶಾಲೆಯ ಮಹಾದ್ವಾರದ ಮೂಲಕ ಒಳಹೊಕ್ಕಂತೆ ಆಶ್ಚರ್ಯ ಮಹಾದಾಶ್ಚರ್ಯವನ್ನುಂಟು ಮಾಡುವ ರೀತಿಯಲ್ಲಿ ಚಿತ್ರಶಾಲೆಯ ಎದುರಾಗಿ ಕಾಣುವ ಸಿಂಧೂಲರಾಜನ ಆರಾಧ್ಯದೇವನೇ ಆದ ಕ್ಷೀರಸಾಗರದಲ್ಲಿ ಆದಿಶೇಷನ ಮೇಲೆ ಮಹಾಲಕ್ಷ್ಮಿಯೊಡನೆ ಪವಡಿಸಿರುವ ಸ್ವಚ್ಛ ಬಿಳಿ ಅಮೃತಶಿಲೆಯಿಂದ ಕಲಾತ್ಮಕವಾಗಿ ರೂಪಗೊಂಡಿದ್ದ ಚಿತ್ರವನ್ನು ರೂಪಿಸಲಾಗಿತ್ತು.

ಚಿತ್ರಶಾಲೆಯ ಉದ್ದಕ್ಕು ಇಕ್ಕೆಡೆಯಲ್ಲೂ ಪ್ರದಕ್ಷಿಣಾ ರೂಪವಾಗಿ ಒಳಗೆ ಸಾಗಿ ಹೋಗುತ್ತಿದ್ದಂತೆ ಪ್ರಪ್ರಥಮವಾಗಿ ಕಾಣ ಬರುವ ಅದ್ಭುತ ಸುಂದರ ಶಿಲಾ (ಅಮೃತ ಶಿಲೆ) ವಿಗ್ರಹ. ಕೈಲಾಸ ಪರ್ವತದಲ್ಲಿ ಪಾರ್ವತಿ ಪರಮೇಶ್ವರರು ಗಣಪತಿಯನ್ನು ತೊಡೆಯ ಮೇಲೆ ಕೂಡಿಸಿಕೊಂಡು ಮಾವಿನ ಫಲ ಕೊಡುತ್ತಿರುವ ಚಿತ್ರ, ಮಾತಾ ಪಿತೃಗಳ ಕೆಳಭಾಗದಲ್ಲಿ ಬಾಲಕ ಕುಮಾರಸ್ವಾಮಿಯು ಹಣ್ಣನ್ನು ಇಟ್ಟುಕೊಂಡಿದ್ದ ಗಣಪತಿಯನ್ನೇ ನೋಡುತ್ತಿರುವ ಶಿಲಾ ಚಿತ್ರ, ಅದರಂತೆಯೆ ಭಗೀರಥನು ತನ್ನ ಭಗೀರಥ

ಪ್ರಯತ್ನದಿಂದ ಗಂಗೆಯನ್ನು ಧರೆಗೆ ತರುತ್ತಿರುವ ಚಿತ್ರ, ರಾಮ ರಾವಣರ (ಹತ್ತು ತಲೆ) ಸಮರ ಚಿತ್ರ, ವಾಲಿ ಸುಗ್ರೀವರ ಗಧಾ ಕಾಳಗ ಚಿತ್ರ, ಶಿಬಿ ಚಕ್ರವರ್ತಿ ಸತ್ಯ ಹರಿಶ್ಚಂದ್ರರ ಚಿತ್ರ, ಮತ್ತೊಂದು ಸಾಲಿನಲ್ಲಿ ದಶರಥ ಮಹಾರಾಜ ಯಾಗ ಮಾಡುತ್ತಿರುವ ಚಿತ್ರ, ಧರ್ಮರಾಯನ ರಾಜ ಸಭೆಯಲ್ಲಿ ದುರುಳನಾದ ಶಿಶುಪಾಲನನ್ನು ತನ್ನ ಚಕ್ರಾಯುಧದಿಂದ ಸಂಹರಿಸಿ ಅವನ ರಕ್ತಸಿಕ್ತ ರುಂಡವು ಶ್ರೀ ಕೃಷ್ಣನ ಪಾದದಡಿಯಲ್ಲಿ ಉರುಳಿ ಬಿದ್ದಿರುವ ಚಿತ್ರ, ಭೀಮ ದುರ್ಯೋಧನರ ಗಧಾ ಯುದ್ಧ ಚಿತ್ರ, ಶ್ರೀ ಕೃಷ್ಣನು ಅರ್ಜುನನೊಡನೆ ಪಂಚ ಅಶ್ವವನ್ನೊಳಗೊಂಡ ಚಿನ್ನದ ರಥದಲ್ಲಿ ಯುದ್ಧಕ್ಕಾಗಿ ವಾಯುವೇಗದಿಂದ ಹೋಗುತ್ತಿರುವ ಚಿತ್ರ (ಭಗವದ್ಗೀತೆ) - ಈ ಅದ್ಭುತ ಶಿಲ್ಪಕಲಾ ಚಿತ್ರವನ್ನೊಳಗೊಂಡಂತೆ ಚಿತ್ರಶಾಲೆಯ ಮಧ್ಯಕ್ಕೆ ಸರಿಯಾಗಿ ರತ್ನಖಚಿತ ಚಿನ್ನದ ಮಂಟಪದಲ್ಲಿ ಚಿನ್ನದ ಕಮಲದ ಮೇಲೆ ವೀಣೆಯನ್ನು ನುಡಿಸುತ್ತಿರುವ ವಿದ್ಯಾಮಾತೆ ಸರಸ್ವತಿಯ ಚಿತ್ರ. ಒಂದೊಂದೂ ಅದ್ಭುತ ರಮ್ಯ ಮನೋಹರವಾಗಿ ಅದೊಂದು ದೇವ ಸ್ವರ್ಗವೋ ಎಂಬಂತೆ ಶೋಭಿಸುತ್ತಿತ್ತು. ಚಿತ್ರಶಾಲೆ ಉದ್ದಗಲಕ್ಕೂ ರತ್ನಖಚಿತ ರತ್ನಗಂಬಳಿ ಹಾಸಲಾಗಿತ್ತು.

ಆದಿನ ಮಹಾರಾಣಿ ಗುಣವತಿಯು ಬಾಲಕ ಭೋಜನೊಡನೆ ತನ್ನ ಏಕಾಂತ ಭವನದಿಂದ ಚಿತ್ರಶಾಲೆಗೆ ಬಿಜಯಿಸಿದಳು. ಆ ಎಲ್ಲಾ ಒಳ ಪ್ರದೇಶವು ಮಹಾರಾಣಿ ಅಂತಃಪುರವೇ ಆಗಿದ್ದರಿಂದ ಅಲ್ಲಿಗೆ ಯಾರೊಬ್ಬ ಪುರುಷರೂ ಸುಳಿಯುವಂತಿಲ್ಲ. ನೂರಾರು ಆಕರ್ಷಕ ದಾಸಿಯರು ಮಹಾರಾಣಿ ಅಂತಃಪುರವನ್ನು ಬಹು ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದರು.

ಭೋಜನೊಡನೆ ಮಹಾರಾಣಿ ಹೊರಟಂತೆ ಮಹಿಳಾ ಅಂಗರಕ್ಷಕರು ಗುಣವತಿ ದೇವಿಯನ್ನು ಹಿಂಬಾಲಿಸಿ ನಡೆದು ಬರುತ್ತಿದ್ದರು. ಮುಂದೆ ಇದ್ದ ಮಹಿಳಾ ಅಂಗರಕ್ಷಕರು ದಂಡಾಯುಧವನ್ನು ಹಿಡಿದು "ಮಹಾರಾಣಿಯವರು ಬರುತ್ತಿದ್ದಾರೆ ಎಚ್ಚರಿಕೆ. ಮಹಾರಾಣಿಯವರು ಯುವರಾಜರೊಡನೆ ಬರುತ್ತಿದ್ದಾರೆ ಎಚ್ಚರಿಕೆ" ಎಂದು ಎಲ್ಲರಿಗೂ ಕೇಳುವ ಹಾಗೆ ಧ್ವನಿಗೈಯುತ್ತ ಮುಂದೆ ಮುಂದೆ ಸಾಗುತ್ತಿದ್ದರು. ಮಹಾರಾಣಿಯ ಆಪ್ತ ಸಖಿಯರು ಸಹ ಜೊತೆ ಗೂಡಿ ಹಿಂಬಾಲಿಸುತ್ತಿದ್ದರು. ಮಹಾರಾಣಿ ಬರುತ್ತಿದ್ದ ದಾರಿಯಲ್ಲಿ ರತ್ನಗಂಬಳಿ ಹಾಸಿದ್ದರು.

ಬಾಲ್ಯದಲ್ಲಿಯೇ ಒಳ್ಳೆಯ ರಾಜ ಲಕ್ಷಣದಿಂದ ಕೂಡಿದ ಸೂರ್ಯ ತೇಜಸ್ಸಿನಂತೆಯೇ ಪ್ರಕಾಶಿಸುತ್ತಿದ್ದ ಭೋಜನು ಮಹಾರಾಣಿಯೊಡನೆ ರಾಜಗಾಂಭೀರ್ಯ ರಾಜಠೀವಿಯಿಂದ ಬರುತ್ತಿದ್ದುದನ್ನು ಅರೆಮರೆಯಾಗಿ ನೋಡುತ್ತಿದ್ದ ದಾಸಿಯರು ಎಲ್ಲಿ ಆ ಮಗುವಿನ ದೃಷ್ಟಿಯನ್ನು ಬೇರೆಡೆಗೆ ವಾಲಿಸುತ್ತಿದ್ದರು.

ತಾಯಿ ಮಗ ಇಬ್ಬರೂ ಆಪ್ತ ಸಖಿಯರೊಂದಿಗೆ ಚಿತ್ರಶಾಲೆಯ ಒಳಗೆ ಬಂದರು.

ಮಹಾರಾಣಿ ಒಳಗೆ ಬಂದಂತೆ ಅಲ್ಲಿದ್ದ ಅನೇಕ ಮಹಿಳಾ ಸೇವಕಿಯರು ತಲೆಬಾಗಿ ಗೌರವ ಸೂಚಿಸಿ ದೂರ ಸರಿದರು.

ಮಹಾರಾಣಿ ಗುಣವತಿದೇವಿಯು ಭೋಜನಿಗೆ ಪ್ರತಿಯೊಂದು ಚಿತ್ರವನ್ನು ತೋರಿಸುತ್ತ, ಅವುಗಳ ಕಥಾಸಾರಾಂಶವನ್ನು ಹೇಳುತ್ತ ಮುಂದೆ ಮುಂದೆ ಸಾಗುತ್ತಿದ್ದಳು. ಆಪ್ತ ಸಖಿಯರು ಸಹ ಮಹಾರಣಿಯನ್ನು ಅನುಸರಿಸಿ ಸಾಗಿ ಬರುತ್ತಿದ್ದರು.

ಮೊಟ್ಟ ಮೊದಲಾಗಿ ಶಿವಪಾರ್ವತಿ ಗಣಪತಿ ಕುಮಾರರ ಚಿತ್ರವನ್ನು ನೋಡಿದ ಬಾಲಕ ಭೋಜನು ತಾಯಿಯನ್ನು ಕುರಿತು ಪ್ರಶ್ನಿಸುತ್ತ 'ಅಮ್ಮ ನೋಡಮ್ಮ, ಗಣಪತಿಗೆ ಮಾತ್ರ ಹಣ್ಣು ಸಿಕ್ಕಿದೆ. ಕುಮಾರನಿಗೆ ಯಾಕಮ್ಮ ಹಣ್ಣು ಕೊಡಲಿಲ್ಲ"

"ಗಣಪತಿ ತುಂಬ ಜಾಣ ಅದಕ್ಕೆ ಅವನಿಗೆ ಹಣ್ಣು ಸಿಕ್ಕಿದ್ದು"

"ಅದು ಹೇಗೆ ಜಾಣ?" ಪ್ರಶ್ನಿಸಿದ.

"ಒಂದು ದಿನ ಅವರಿಬ್ಬರ ಜಾಣತನ ಬುದ್ಧಿವಂತಿಕೆ ಪರೀಕ್ಷಿಸಬೇಕು ಅಂತ ಆ ದೇವಬಾಲಕರ ತಂದೆ ತಾಯಿಗಳಾದ ಶಿವಪಾರ್ವತಿಯರು ಒಂದು ಉಪಾಯ ಹೂಡಿದರು ಭೋಜ"

"ಏನು ಆ ಉಪಾಯ?" ಪ್ರಶ್ನಿಸಿದ ಭೋಜ - "ಪಾರ್ವತಿ ಪರಮೇಶ್ವರರು ಇಬ್ಬರೂ ಕೂಡಿ ಒಂದು ಮಾವಿನ ಹಣ್ಣನ್ನು ಆ ಇಬ್ಬರು ಬಾಲಕರ ಮುಂದಿಟ್ಟು "ನೋಡು ಗಣಪತಿ, ನೋಡು ಕುಮಾರ, ನೀವಿಬ್ಬರೂ ತ್ರಿಲೋಕವನ್ನು ಸುತ್ತಿಕೊಂಡು ಯಾರು ಬೇಗ ಬರುತ್ತಾರೆಯೋ ಅವರಿಗೆ ಈ ಹಣ್ಣು ಕೊಡುತ್ತೇನೆ" ಎಂದು ಪರೀಕ್ಷೆ ಹೂಡಿದರು. ಆಗ ಗಣಪತಿ ಕುಮಾರರು ಆ ಹಣ್ಣನ್ನು ತಾನು ಪಡೆಯಬೇಕು ತಾನು ಪಡೆಯಬೇಕು ಎಂಬ ಆಸೆಯಿಂದ ಇಬ್ಬರೂ ತ್ರಿಲೋಕ ಸಂಚಾರ ಮಾಡಿಬರಲು ಹೊರಟರು. ಮೊದಲು ಕುಮಾರ ಸ್ವಾಮಿಯು ತನ್ನ ವಾಹನವಾದ ನವಿಲಿನ ಮೇಲೆ ಕುಳಿತು ತ್ರಿಲೋಕ ಸಂಚಾರಕ್ಕೆ ಹೊರಟ. ಆಗ ಗಣಪತಿಗೆ ಒಂದು ಉಪಾಯ ಹೊಳೆಯಿತು. "ನನ್ನ ವಾಹನವಾದರೂ ಇಲಿ. ಇಲಿಯಾದರೂ ನವಿಲಿನಂತೆ ಬೇಗ ಹೋಗಲಾಗದು. ಆದುದರಿಂದ ನನಗೆ ಈಗ ಒಂದು ಉಪಾಯ ಹೊಳೆಯುತ್ತಿದೆ. ಜಗತ್ತಿನಲ್ಲಿ ಮಾತಪಿತೃಗಳಿಗೆ ಸಮಾನಾದ ದೇವರು ಯಾರೂ ಇಲ್ಲ. ಮಾತಪಿತೃಗಳನ್ನು ಭಕ್ತಿಯಿಂದ ಮೂರು ಪ್ರದಕ್ಷಿಣೆ ಹಾಕಿ ಬಿಟ್ಟರೆ ತ್ರಿಲೋಕವನ್ನು ಮೂರು ಬಾರಿ ಸುತ್ತಿದ ಫಲ ಬಂದಂತಾಗುತ್ತದೆ. ಆ ಹಣ್ಣು ಸಹ ನನಗೆ ಸಿಗುತ್ತದೆ" ಎಂಬ ಜಾಣತನದಿಂದ ತಡಮಾಡದೆ ಅಲ್ಲಿಯೇ ಇದ್ದ ತನ್ನ ಮಾತಪಿತೃಗಳ ಸುತ್ತ ಮೂರು ಬಾರಿ ಪ್ರದಕ್ಷಿಣೆ ಮಾಡಿ ಭಕ್ತಿಯಿಂದ "ಎಲೈ ತಂದೆಯೆ...... ಎಲೈ ಮಾತೆಯೆ...... ಈ ಭೂಲೋಕದಲ್ಲಿಯೇ, ತಂದೆ ತಾಯಿಗಳಿಗೆ ಸರಿಸಮಾನರಾದ ದೇವರು ಬೇರೊಬ್ಬರಿಲ್ಲ. ತಂದೆತಾಯಿಗಳನ್ನು ಭಕ್ತಿಯಿಂದ ಪ್ರದಕ್ಷಿಣೆ ಮಾಡಿದರೆ ತ್ರಿಲೋಕ ಸುತ್ತಿ ಬಂದಂತೆಯೆ ಸರಿ. ಈಗ ನಾನು ಬ್ರಹ್ಮಾಂಡ ನಾಯಕ ನಾಯಕಿಯರಾದ ನಿಮ್ಮಿಬ್ಬರನ್ನು ಪ್ರದಕ್ಷಿಣೆ ಹಾಕಿದ್ದೇನೆ. ಆದ್ದರಿಂದ ಈಗ ನಾನೇ ಬೇಗ ಬಂದಂತಾಗಿದೆ. ಆ ಹಣ್ಣು ಈಗ ನನಗೆ ಸೇರಬೇಕು" ಎಂದನು ಗಣಪತಿ.

ಗಣಪತಿಯ ಚುರುಕು ಸಮಯೋಚಿತ ಬುದ್ಧಿಗೆ ಪಾರ್ವತಿ ಪರಮೇಶ್ವರ ಮೆಚ್ಚಿ ಆ ಮಾವಿನ ಹಣ್ಣನ್ನು ಗಣಪತಿಗೆ ಕೊಟ್ಟುಬಿಟ್ಟರು. ನಂತರ ಬಾಲಿ ಕುಮಾರಸ್ವಾಮಿಯು

ಬಹು ಆಯಾಸ ಪ್ರಯಾಸದಿಂದ ತ್ರಿಲೋಕವನ್ನು ಪ್ರದಕ್ಷಿಣೆ ಹಾಕಿ ಬಂದ. ಆದರೆ ಅಷ್ಟರಲ್ಲೆ ಆ ಹಣ್ಣು ಗಣಪತಿ ಕೈ ಸೇರಿತ್ತು.

ಆದ್ದರಿಂದ ಕೆಲವು ಸಮಯದಲ್ಲಿ ಗಣಪತಿಯ ಸೂಕ್ಷ್ಮ ಬುದ್ಧಿಶಕ್ತಿಯಿಂದ ಹಣ್ಣನ್ನು ಗೆದ್ದಂತೆ ಜಾಣತನದಿಂದ ಎಂತಹ ಕೆಲಸದಲ್ಲೂ ಸಹ ವಿಜಯ ಸಾಧಿಸಬೇಕು ಭೋಜ" ಎಂದು ಕಥೆಯೊಂದು ಹೇಳಿ ಮುಗಿಸಿದಳು.

ಇದರಿಂದ ಕುಮಾರ ಭೋಜನು "ಇನ್ನು ಮುಂದೆ ಗಣಪತಿಯಂತೆ ನಾನು ಸಹ ಬುದ್ಧಿವಂತನಾಗಬೇಕು. ಆಗ ಮಾತ್ರ ಯಾವುದೇ ಕಾರ್ಯ ಗೆಲ್ಲಲು ಸಾಧ್ಯ" ಎಂದುಕೊಂಡನು.

ಹಾಗೆಯೇ ಮುಂದೆ ಮುಂದೆ ಬರುತ್ತಾ ಭಗಿರಥ ಚಿತ್ರ ದ ಬಳಿಗೆ ಬಂದು ಭೋಜನಿಗೆ ಹೇಳುತ್ತ "ನೋಡು ಭೋಜಕುಮಾರ. ಪ್ರಯತ್ನದಿಂದ ಎಂತಹ ಕಷ್ಟಕರವಾದ ಕೆಲಸಗಳು ಸಹ ಸುಲಭದಲ್ಲಿ ಸಾಧ್ಯವಾಗಬಲ್ಲದು ಎಂಬುದಕ್ಕೆ ಭಗಿರಥನ ಪ್ರಯತ್ನವೆ ಪರಮ ಸಾಕ್ಷಿ. ಈತನು ತಾನು ಲೋಕ ಕಲ್ಯಾಣಕ್ಕಾಗಿ (ಮಾನವ ಕೋಟಿಯರಿಗಾಗಿ) ಸಹಸ್ರಾರು ವರ್ಷ ಅಖಂಡ ತಪಸ್ಸು ಮಾಡಿ ಈಶ್ವರನನ್ನು ಮೆಚ್ಚಿಸಿ. ದೇವಲೋಕದಿಂದ ಭೂಲೋಕಕ್ಕೆ ಗಂಗೆಯನ್ನು ತರಿಸಿದ್ದಾನೆ. ಈತನು ಪ್ರಯತ್ನ ಮಾಡದಿದ್ದರೆ ಇಂದು ಭೂಲೋಕದಲ್ಲಿ ಮಾನವರು ನೀರಿಗಾಗಿ ಬಹಳ ಬಾಧೆ ಪಡಬೇಕಾಗಿತ್ತು" ಎಂದು ಭೋಜನಿಗೆ 'ಪ್ರಯತ್ನ' ವನ್ನು ಕುರಿತು ಹೇಳಿದಳು. ಹಾಗೆಯೇ ಕುಮಾರ ನೊಡನೆ ಮುಂದೆ ಸಾಗಿದಳು.

ಹಾಗೆಯೆ ಮುಂದೆ ಮುಂದೆ ಬರುತ್ತಾ ರಾಮ ರಾವಣರ ಯುದ್ಧ ಭವ್ಯ ಚಿತ್ರದತ್ತ ಬಂದರು.

ಬಾಲ ಭೋಜನಿಗೆ ಹತ್ತು ತಲೆಯನ್ನು ಹೊತ್ತು ರಾಮನೊಡನೆ ಯುದ್ಧ ಮಾಡುತ್ತಿದ್ದ ಆ ಚಿತ್ರವನ್ನು ನೋಡಿ ಒಂದು ರೀತಿಯ ವಿಚಿತ್ರವೆನಿಸಿತು. ಆಗ ತನ್ನ ತಾಯಿಯನ್ನು ವಿಸ್ಮಯವಾಗಿ ಪ್ರಶ್ನಿಸುತ್ತ "ಅಮ್ಮ ಅಮ್ಮ.... ರಾವಣನಿಗೆ ಏಕೆ ಹತ್ತು ತಲೆ, ನಮಗೆಲ್ಲ ಏಕೆ ಒಂದೇ ತಲೆ?" ಎಂದು ಪ್ರಶ್ನಿಸಿದ.

ಭೋಜನು ಕೇಳಿದ ಪ್ರಶ್ನೆಗೆ ಹಿಂದೆ ಬರುತ್ತಿದ್ದ ಆಪ್ತ ಸಖಿಯರಿಗೆ ತಡೆಯಲಾರದಷ್ಟು ನಗು ಬಂತು. ನಕ್ಕರು. ಮಹಾರಾಣಿ ಗುಣವತಿಗೂ ಸಹ ನಗು ಬಾರದಿರಲಿಲ್ಲ. ಆಕೆಯು ಹೊಟ್ಟೆ ಹುಣ್ಣಾಗುವಂತೆ ನಕ್ಕಿದ್ದಳು.

ಆದರೆ ಆ ಪ್ರಶ್ನೆಗೆ ಉತ್ತರ ಯಾವ ರೀತಿ ಕೊಡಬೇಕು? ಎಂಬುದನ್ನು ಅರಿಯದಾದಳು ಗುಣವತಿ "ನಾನು ಅನೇಕ ಬಾರಿ ರಾಮಾಯಣ ಕಥೆಯನ್ನು ಓದಿದ್ದೇನೆ..... ಕೇಳಿಯೂ ಇದ್ದೇನೆ. ಆದರೆ ಕೇವಲ ನಾಲ್ಕೈದು ವರ್ಷದ ಮಗು ಕೇಳಿದ ಪ್ರಶ್ನೆಗೆ ಉತ್ತರ ಹೇಳುವುದು ತೀರ ಕಠಿಣವಾಗಿದೆಯಲ್ಲ" ಎಂದು ತನ್ನಲ್ಲಿ ತಾನೇ ನುಡಿದುಕೊಳ್ಳುತ್ತ ಪುನಹ ಅಂತರ್ಗತವಾಗಿ ಮಾತನಾಡಿಕೊಳ್ಳುತ್ತ "ಹೌದು.... ನಾಳೆ ರಾಜಸಭೆಯಲ್ಲಿ ವಿದ್ವತ್ ಜನರ ಮುಂದೆ ಈ ಪ್ರಶ್ನೆ ಕೇಳಲೇ ಬೇಕು ವಿದ್ವತ್ ಶಿಖಾಮಣಿಗಳು ಪಂಡಿತರುಗಳು ಈ ಪ್ರಶ್ನೆಗೆ ಏನು ಉತ್ತರ ಕೊಡುತ್ತಾರೆ ಕಾದು

ನೋಡಬೇಕು" ಎಂದು ಕೊಂಡಳು. ಅದೇನೊ ಸರಿ, ನಾಳೆ ಹಾಗಿರಲಿ. ಇಂದು ಈಗ ಈ ಭೋಜ ಕುಮಾರನಿಗೆ ಯಾವ ರೀತಿ ತಾನೆ ಉತ್ತರ ಹೇಳಿ ಸಮಾಧಾನ ಹೇಳುವುದು?" ಎಂದು ಇಲ್ಲದ ಪೇಚಿಗೆ ಸಿಲುಕಿದಳು. ಈ ಒಂದು ಸಣ್ಣ ಪ್ರಶ್ನೆಗೆ ಉತ್ತರ ಸಿಗದಿದ್ದರೆ ಈ ದೇಶದ ಮಹಾರಾಣಿಯಾದ ನನಗೆ ತುಂಬ ಅವಮಾನವಾದಂತೆಯೆ ಸರಿ. ಇಲ್ಲಿರುವ ಸಖಿಯರೆ ಸಾಕು. ನಾನೊಬ್ಬಳು ಪೆದ್ದು ಮಹಾರಾಣಿ ಎಂದು ನಗರದಲ್ಲೆಲ್ಲ ಹೇಳಿಕೊಂಡು ಬರಬಹುದು" ಎಂದು ನಾನಾರೀತಿಯಲ್ಲಿ ಪೇಚಾಡುತ್ತ ಮಹಾರಾಣಿಯ ದೃಷ್ಟಿ ಇದ್ದಕ್ಕಿದ್ದ ಹಾಗೆ ಯಾಂತ್ರಿಕವಾಗಿ ದಶಾವತಾರ ಚಿತ್ರದ ಕಡೆ ಹರಿಯಿತು. ಆಗ ಅವಳಿಗೊಂದು ಸಮಯ ಸ್ಫೂರ್ತಿ ಹೊಳೆಯಿತು "ಮಗು ಅಗೋ ಅಲ್ಲಿ ನೋಡು..... ಪರಮಾತ್ಮನು ಲೋಕಕಲ್ಯಾಣಕ್ಕಾಗಿ ಹತ್ತು ಅವತಾರ ಮಾಡಿದ್ದಾನೆ. ಆ ಹತ್ತು ಅವತಾರದ ಸವಿನೆನಪಿಗಾಗಿ ಹತ್ತು ತಲೆಗಳನ್ನು ರಾವಣನಲ್ಲಿರಿಸಿದ್ದ ಅಷ್ಟೇ ಮಗು" ಎಂದು ತಕ್ಷಣಕ್ಕೆ ಸಮಾಧಾನ ಹೇಳಿ ನಿಟ್ಟುಸಿರುಗರೆದಳು ಗುಣವತಿ.

ಒಂದು ರೀತಿಯಲ್ಲಿ ಬಾಲ ಭೋಜನಿಗೆ ಸಹ ಆ ಉತ್ತರದಿಂದ ವಿನೋದ ರೀತಿಯ ತೃಪ್ತಿ ತಂದಿತ್ತು.

"ಆದರೆ ಅದು ಆ ರೀತಿ ಅಲ್ಲ....., ರಾವಣನಿಗೆ ಹತ್ತು ತಲೆ ಬರಲು ಬೇರೊಂದು ನಿಘೂಡ ಕಾರಣವಿರಬೇಕು. ಸಮಯ ಬಂದಾಗ ಆ ಕಾರಣ ತಿಳಿದು ಕೊಳ್ಳಲು ಪ್ರಯತ್ನ ಮಾಡೋಣ" ಎಂದು ಕೊಂಡು ಗುಣವತಿ ಭೋಜನೊಡನೆ ಮುಂದೆ ಸಾಗಿದಳು.

ಧರ್ಮರಾಯನ 'ರಾಜಸಭೆ' ಚಿತ್ರದತ್ತ ಬಂದಳು.

"ಅಮ್ಮ ಅಮ್ಮ ಅಲ್ಲಿ ರಾವಣನಿಗೇನೊ ಹತ್ತು ತಲೆ ಇತ್ತು. ಇಲ್ಲಿ ಆ ಶಿಶುಪಾಲನಿಗೆ ಒಂದು ತಲೆಯೂ ಸಹ ಇಲ್ಲದ ಹಾಗೆ ಕಾಣಿಸುತ್ತಿದೆ" ಎಂದನು ನಗುನಗುತ್ತ. ತನ್ನ ಪುಟಾಣಿ ಕೈಯಿಂದ ಚಪ್ಪಾಳೆ ತಟ್ಟುತ್ತಾ ಬಲು ಮೇಧಾವಿತನದ ಚುರುಕು ಬುದ್ಧಿಯುಳ್ಳ ಭೋಜ ಹಾಗೆ ಕೇಳಿದ್ದನು.

ಆಗ ಗುಣವತಿ ಭೋಜನ ಮಾತಿಗೆ ಅಪ್ಪಿ ಮುದ್ದಾಡುತ್ತ "ಹೌದು ಮಗು..... ಶಿಶುಪಾಲ ಅವನೊಬ್ಬ ಕೆಟ್ಟ ಮನುಷ್ಯ. ಅವನು ಯಾವಾಗಲೂ ಎಲ್ಲರಲ್ಲೂ ಕೆಟ್ಟ ಕೆಟ್ಟ ಮಾತುಗಳನ್ನ ಆಡುತ್ತಿದ್ದ. ಆಗ ಶ್ರೀ ಕೃಷ್ಣ ಕೆಟ್ಟ ಕೆಟ್ಟ ಮಾತನಾಡುವವರು ಈ ಲೋಕದಲ್ಲಿ ಇರಬಾರದು ಅಂತ ಅವನ ತಲೆಯನ್ನು ತನ್ನ ಚಕ್ರಾಯುಧದಿಂದ ಕತ್ತರಿಸಿ ಕೆಳಕ್ಕುರುಳಿಸಿದ. ಅದು ಆ ಕೆಟ್ಟ ತಲೆ ಅಲ್ಲಿಯ ಧರ್ಮರಾಯನ ರಾಜಸಭೆ ಮುಂದೆ ಉರುಳಿ ಬಿದ್ದಿದೆ ನೋಡು ಭೋಜ" ಎಂದಳು.

"ಅಮ್ಮ ಹಾಗಾದರೆ ನಮ್ಮ ದೇಶದಲ್ಲಿ ಕೆಟ್ಟ ಕೆಟ್ಟ ಮಾತನಾಡುವರು ಇದ್ದಾರಾಮ್ಮ" ಪ್ರಶ್ನಿಸಿದ.

"ಕೆಟ್ಟ ಮಾತನಾಡುವವರು ನಮ್ಮ ದೇಶದಲ್ಲಿ ಇಲ್ಲ ಮಗು" ಎಂದಳು.

ಹಾಗೆಯೆ ಮುಂದೆ ಸಾಗುತ್ತ 'ವಾಲಿಸುಗ್ರೀವ ಗಧಾ ಕಾಳಗ' ಚಿತ್ರದತ್ತ ಬಂದರು. "ಅಮ್ಮ ಇವರು ಯಾಕೆ ಹೀಗೆ ಒಬ್ಬರಿಗೊಬ್ಬರು ಜಗಳ ಆಡುತ್ತಿದ್ದಾರೆ? ಇವರು ಯಾರಮ್ಮ?"

"ಇವರು ವಾಲಿ ಸುಗ್ರೀವ ಭೋಜ. ಇವರಿಬ್ಬರಿಗೂ ಶಕ್ತಿ ಪರೀಕ್ಷೆ ನಡೆಯುತ್ತಿದೆ. ನಡಿ ಮುಂದೆ ಹೋಗೋಣ" ಎನ್ನುತ್ತ ಮುಂದೆ ಸಾಗಿದಳು. ಭೀಮ - ದುರ್ಯೋಧನರ 'ಗಧಾಯುದ್ಧ' ಚಿತ್ರದ ಬಳಿಗೆ ಬಂದರು.

"ಅಮ್ಮಾ ಇವರು ಯಾರಮ್ಮ"

"ಇವರು ಪಾಂಡವರಲ್ಲಿ ಒಬ್ಬನಾದ ಭೀಮ. ಇನ್ನೊಬ್ಬ ಕೌರವರಲ್ಲಿ ಒಬ್ಬನಾದ ದುರ್ಯೋಧನ. ದುರ್ಯೋಧನ ತುಂಬ ಕೆಟ್ಟವನು. ಎಲ್ಲ ರಾಜ್ಯವನ್ನು ನಾನೇ ಆಳಬೇಕೆಂಬ ದುರಾಸೆ. ಮೋಸದಿಂದ ಪಾಂಡವರೊಡನೆ ಪಗಡೆ ಆಟ ಆಡಿ ಆ ರಾಜ್ಯವನ್ನು ತಾನೆ ಕಸಿದುಕೊಂಡುಬಿಟ್ಟ. ಇದರಿಂದ ಭೀಮನಿಗೆ ಬಹಳ ಕೋಪ ಬಂದು ಸಮಯ ಕಾಯುತ್ತಿದ್ದ. ಶ್ರೀ ಕೃಷ್ಣನ ಸಹಾಯದಿಂದ ಭೀಮನು ದುರ್ಯೋಧನನನ್ನು ತನ್ನ ಭೀಮ ಗಧೆಯಿಂದ ಹೊಡೆದು ಸಾಯಿಸಿಬಿಟ್ಟ ಭೋಜ" ಎಂದು ಭೀಮ - ದುರ್ಯೋಧನರ ಗಧಾ ಯುದ್ಧವನ್ನು ಚುಟಕದಲ್ಲಿ ಹೇಳಿ ಮುಗಿಸಿದ್ದಳು.

ಹಾಗೆಯೇ ಭೋಜನನ್ನು ಕರೆದುಕೊಂಡು ಸುತ್ತುವರಿದು ಮುಂದೆ ಮುಂದೆ ಸಾಗಿದಳು.

ಪಂಚ ಕುದುರೆಗಳಿಂದ ಕೂಡಿದ ಬಹು ಆಕರ್ಷಕವಾದ ಚಿನ್ನದ ರಥಕ್ಕೆ ಸಾರಥಿಯಾಗಿ ಅರ್ಜುನನೊಡನೆ ವಾಯುವೇಗದಿಂದ ಕೌರವಸೇನೆಯ ವಿರುದ್ಧ ಯುದ್ಧಕ್ಕೆ ಸಾಗುತ್ತಿದ್ದ ಕಿರೀಟಧಾರಿ ಶ್ರೀ ಕೃಷ್ಣನ ಚಿತ್ರದ ಬಳಿಗೆ ಬಂದರು.

"ನೋಡು ಭೋಜಕುಮಾರ..... ಶ್ರೀ ಕೃಷ್ಣನು ಅರ್ಜುನನನ್ನು ಕರೆದುಕೊಂಡು ಕೌರವರೊಡನೆ ಯುದ್ಧಕ್ಕೆ ಹೋಗುತ್ತಿದ್ದಾನೆ. ಅತೀ ದುರಾಸೆಯಿಂದ ಕೂಡಿದ ಅವನ ಸೇನೆಯು ಅರ್ಜುನನ ಮಹಾ ಪರಾಕ್ರಮದಿಂದ ಸೋತು ಹೋಗುತ್ತದೆ. ಕೌರವ ಸೇನೆಯು ನಾಶವಾಗಿ ಹೋಗುತ್ತದೆ. ನಂತರ ಪಾಂಡವರಿಗೆ ರಾಜ್ಯ ದೊರಕುತ್ತದೆ. ಧರ್ಮದಿಂದ ರಾಜ್ಯಭಾರ ಮಾಡುತ್ತ ದೇಶವನ್ನು ಪ್ರಜೆಗಳನ್ನು ಚೆನ್ನಾಗಿ ಕಾಪಾಡುತ್ತಾ ಮಹಾ ಕೀರ್ತಿವಂತರಾಗುತ್ತಾರೆ. ಇಂದಿಗೂ ಸಹ ಮಹಾ ಧರ್ಮಿಷ್ಟರಾದ ಪಾಂಡವರ ಕೀರ್ತಿಯನ್ನು ಎಲ್ಲ ಲೋಕದಲ್ಲೂ ಕೊಂಡಾಡುತ್ತಾರೆ. ಭೋಜಕುಮಾರ ಮುಂದೆ ಪಾಂಡವರಂತೆ ನೀನು ಸಹ ಧರ್ಮದಿಂದ ರಾಜ್ಯಭಾರಮಾಡಬೇಕು. ಪ್ರಜೆಗಳನ್ನು ಚೆನ್ನಾಗಿ ಕಾಪಾಡಬೇಕು" ಎನ್ನುತ್ತಾ ಚಿನ್ನದ ಮಂಟಪ ಬಳಸಿ ಬಂದರು. ಅಲ್ಲಿ ಶಾರದಾದೇವಿ ಬಳಿಗೆ ಬಂದರು. ಭೋಜನು ತುಂಬಿದ ಭಕ್ತಿಯಿಂದ ಶಾರದಾದೇವಿಯನ್ನು ಪ್ರಾರ್ಥಿಸುತ್ತ "ಹೇ ಶಾರದದೇವಿ. ನನಗೆ ತುಂಬ ವಿದ್ಯೆ ಬುದ್ಧಿ ಕೊಡು ತಾಯಿ" ಎಂದು ಬೇಡಿದ. ನಂತರ ತನ್ನ ತಾಯಿ ಪಟ್ಟಮಹಿಷಿಯನ್ನು ಕುರಿತು 'ಅಮ್ಮ ಅಮ್ಮ ನನಗೆ ಆಟದ ಸಾಮಾನು ಬೇಕು' ಎಂದು ಹಠ ಹಿಡಿದ. ಮಕ್ಕಳು ಹಠ ಪಟ್ಟರೆ ಕೇಳಿದ್ದನ್ನು ತಂದು ಕೊಡಲೇಬೇಕು. ದಾಸಿಯರನ್ನು ಕರೆದು ಹೇಳುತ್ತಾ "ನೋಡಿ ನೀವೆಲ್ಲರೂ ನನ್ನ ಅಂತಃಪುರಕ್ಕೆ ಹೋಗಿ ಭೋಜನ ಎಲ್ಲ ಆಟದ ಸಾಮಾನು ತೆಗೆದುಕೊಂಡು ಬನ್ನಿ" ಎಂದು ಆಜ್ಞಾಪಿಸಿದಳು.

ಆ ಕೂಡಲೇ ದಾಸಿಯರು ಒಟ್ಟುಗೂಡಿ .ಮಹಾರಾಣಿಯ ಏಕಾಂತಭವನಕ್ಕೆ ಹೋಗಿ ಅಲ್ಲಿದ್ದ ಸಿಂಹ, ಆನೆ, ಕುದುರೆ, ಒಂಟೆ ಚಿನ್ನದ ರಥ, ಚಿನ್ನದ ಜೋಡಿ

ಎತ್ತಿನಗಾಡಿ. ಡೊಳ್ಳು ಹೊಟ್ಟೆಯ ಗುಜ್ಜಾನೆ ಆಕಾರದ ಮನುಷ್ಯ ಬೊಂಬೆ ಎಲ್ಲವನ್ನು ಹೊತ್ತು ಭೋಜನಿದ್ದ ಸ್ಥಳಕ್ಕೆ ಬಂದು ಸಾಲಾಗಿ ಇಟ್ಟರು.

ಆ ಆಟದ ಸಾಮಾನೆಲ್ಲವೂ ಮಕ್ಕಳು ಧಾರಾಳವಾಗಿ ಕುಳಿತು ಸವಾರಿ ಮಾಡಬಹುದಾದಷ್ಟು ದೊಡ್ಡ ಪ್ರಮಾಣದಲ್ಲೇ ಇತ್ತು.

ಆ ಆಟದ ಸಾಮಾನುಗಳನ್ನು ನೋಡುತ್ತ. ವಿನೋದವಾಗಿ ಆಟವಾಡುತ್ತ ಕಡೆಯದಾಗಿ ಆನೆ ಬಳಿಗೆ ಬಂದ

"ಆನೆ ಮೇಲೆ ಕುಳಿತುಕೊಳ್ಳುತ್ತೀಯ ಭೋಜಕುಮಾರ"

"ಅಮ್ಮ ಹೋಗಮ್ಮ. ಈ ಆನೆಗೆ ಚಿನ್ನದ ಅಂಬಾರಿನೇ ಇಲ್ಲ. ಅಂಬಾರಿ ಇಲ್ಲದ ಆನೆ ಮೇಲೆ ಕುಳಿತುಕೊಳ್ಳಲು ನಾನೇನು ಆನೆ ಮಾವುಟಿಗನಾ? ಈ ಆನೆ ಮೇಲೆ ಚಿನ್ನದ ಅಂಬಾರಿ ಇಟ್ಟರೆ ಮಾತ್ರ ಕುಳಿತುಕೊಳ್ಳುವುದು" ಎನ್ನುತ್ತಿದ್ದಂತೆ......

- ಮಹಾರಾಜ ಸಿಂಧೂಲರಾಜನು ಮಹಾಮಂತ್ರಿ ಹಾಗೂ ರಾಜಪುರೋಹಿತರೊಡನೆ ಚಿತ್ರಶಾಲೆಗೆ ಆಗಮಿಸಿದ.

"ಮಹಾರಾಜರು ಬರುತ್ತಿದ್ದಾರೆ ಎಚ್ಚರಿಕೆ. ಮಹಾರಾಜರು ಬರುತ್ತಿದ್ದಾರೆ ಎಚ್ಚರಿಕೆ" ಎಂಬ ಧ್ವನಿ ಎಲ್ಲೆಡೆಯಲ್ಲೂ ಕೇಳಿ ಬಂತು.

ಮಹಾರಾಜ ಸಿಂಧೂಲರಾಜನು ಬರುವುದಕ್ಕೂ ಬಾಲ ಭೋಜನು ಅಂಬಾರಿ ಇಲ್ಲದ ಆನೆಯ ಮೇಲೆ ಕುಳಿತುಕೊಳ್ಳುವುದಿಲ್ಲ ಎಂದು ಹೇಳುವುದಕ್ಕೂ ಒಂದೇ ಕಾಲವೇ ಆಗಿತ್ತು. ತನ್ನ ತಂದೆ ಸಿಂಧೂಲರಾಜನನ್ನು ಕಂಡ ಬಾಲಕ ಭೋಜನು ತಾಯಿಯ ತೋಳತೆಕ್ಕೆಯಿಂದ ಬಿಡಿಸಿಕೊಂಡು ಓಡೋಡಿ ಬಂದು. ತಂದೆ ಸಿಂಧೂಲನನ್ನು ಅಮಿತವಾದ ಸಂತೋಷವನ್ನು ಸೂಸುತ್ತ ಅಪ್ಪಿಕೊಂಡ.

ಆಗ ಸಿಂಧೂಲರಾಜನಿಗೆ ಆದ ಆನಂದ ಅಷ್ಟಿಷ್ಟಲ್ಲ. ತನ್ನನ್ನು ಅಪ್ಪಿದ ಪುಟ್ಟ ಬಾಲಕನನ್ನು ಎತ್ತಿಕೊಂಡು ಮುದ್ದಾಡಿ ಮುತ್ತಿನ ಮಳೆಗರೆದನು. ಆಗ ಭೋಜನು ತಂದೆಯನ್ನು ಕುರಿತು ಹೇಳುತ್ತ "ಅಪ್ಪಾಜಿ ಅಪ್ಪಾಜಿ"

"ಏನು ಮಗು?........."

ಭೋಜನು ಉತ್ತರಿಸದಿದ್ದಾಗ ಮತ್ತೆ,

"ಏನು ಬೇಕು ಹೇಳು ಭೋಜಕುಮಾರ" - ಎಂದು ಅಂತಃಕರಣ ತುಂಬಿದ ದನಿಯಿಂದ ಮೃದುವಾಗಿ ಮಗನನ್ನು ಕೇಳಿದ.

"ಅಪ್ಪಾಜಿ ಅಪ್ಪಾಜಿ. ಅಲ್ಲಿ ನೋಡು ಅಪ್ಪಾಜಿ. ಆ ಆನೆಗೆ ಚಿನ್ನದ ಅಂಬಾರಿನೇ ಇಲ್ಲ. ನನಗೆ ಅಂಬಾರಿಬೇಕು. ನಾನು ಆನೆ ಮೇಲೆ ಅಂಬಾರಿ ಇಟ್ಟು ಅದರೊಳಗೆ

ಕುಳಿತುಕೊಳ್ಳಬೇಕು" ಎಂದು ತಂದೆ ಸಿಂಧೂಲರಾಜನ ಮುಖವನ್ನು ತನ್ನತ್ತ ಪುಟ್ಟಕೈಗಳಿಂದ ತಿರುಗಿಸಿಕೊಂಡು ಮುದ್ದಾದ ನುಡಿಗಳಿಂದ ನುಡಿದ.

"ಇಷ್ಟೇ ತಾನೆ. ನಾಳೆ ನಿನ್ನನ್ನು ನಿಜವಾದ ಆನೆ ಮೇಲೆ ಚಿನ್ನದ ಅಂಬಾರಿ ಇಟ್ಟು ಊರೆಲ್ಲ ಮೆರವಣಿಗೆ ಮಾಡಿಸುವೆ ಕಂದ. ಹೇಗಿದ್ದರೂ ನಾಳೆ ನಿನ್ನ ಐದನೆ ವರ್ಷದ ಹುಟ್ಟಿದ ಹಬ್ಬವಲ್ಲವೆ?" ಎಂದನು.

ಭೋಜನಿಗೆ ಹೇಳುತ್ತಿದ್ದ ನುಡಿ ಮಾತುಗಳನ್ನ ತಾನು ಕೇಳಿಸಿಕೊಂಡಳು ಗುಣವತಿ. ಆಗ ಹತ್ತಿರವೇ ಇದ್ದ ಪತಿಯೊಡನೆ ವಿನಯಾಭರಣ ಭೂಷಿತಳಾಗಿ ಮಾತನಾಡುತ್ತ "ಏನೂಂದ್ರೆ. ನಾಳೆ ನಮ್ಮ ಭೋಜರಾಜನ ಹುಟ್ಟಿದ ಹಬ್ಬವನ್ನು ತುಂಬ ಚೆನ್ನಾಗಿ ಮಾಡಬೇಕು" ಎಂದಳು.

"ಬಹಳ ಸಂತೋಷ. ಈ ಕೂಡಲೆ ಮಹಾಮಂತ್ರಿಗಳನ್ನ ರಾಜ ಪುರೋಹಿತರನ್ನು ನನ್ನ ಏಕಾಂತಭವನಕ್ಕೆ ಕರೆಸಿಕೊಳ್ಳುತ್ತೇನೆ. ಅಲ್ಲಿ ಅವರೊಡನೆ ಸಮಾಲೋಚಿಸಿ ನಿನ್ನ ಇಷ್ಟದಂತೆ ಸಕಲ ರಾಜ ಪರಿವಾರದೊಂದಿಗೆ ಭೋಜರಾಜನ ಐದನೆ ವರ್ಷದ ಹುಟ್ಟಿದ ಹಬ್ಬವು ಅದ್ದೂರಿಯಾಗಿ ನೆರವೇರಿಸುವ. ಹಾಗೆ ಎಲ್ಲಾ ಏರ್ಪಾಟುಗಳನ್ನು ಮಾಡಿಸುತ್ತೇವೆ. ಕುಮಾರ ಹುಟ್ಟಿದ ಹಬ್ಬದ ಅಂಗವಾಗಿ ನಾಳೆ ಧಾರಾನಗರದ ಪ್ರಜೆಗಳಿಗೆ ರಾಜಭೋಜನದ ಏರ್ಪಾಟು ಮಾಡಿಸುತ್ತೇವೆ. ಪಟ್ಟದ ಆನೆಯ ಮೇಲೆ ಅಂಬಾರಿಯನ್ನಿಟ್ಟು, ನಗರದ ರಾಜಬೀದಿಗಳಲ್ಲಿ ಮೆರವಣಿಗೆ ಜರುಗುವಂತೆ ಸಕಲ ಸಿದ್ಧತೆಗಳನ್ನು ಕೈಗೊಳ್ಳುವ ಹಾಗೆ ಮಹಾಮಂತ್ರಿಗಳಿಗೆ ತಿಳಿಸುತ್ತೇನೆ" ಎಂದು ಹೃದಯಾಂತರಾಳದಿಂದ ಉಕ್ಕಿ ಬರುತ್ತಿದ್ದ ಅಮಿತೋತ್ಸಾಹದಿಂದ ನುಡಿದನು

# ಭೋಜನ ಹುಟ್ಟುಹಬ್ಬ

ಸಿಂಧೂಲರಾಜ ಕುಮಾರನಾದ ಯುವರಾಜ ಭೋಜರಾಜನ ಐದನೇ ವರ್ಷದ ಹುಟ್ಟಿದ ಹಬ್ಬದ - ಅಂಗವಾಗಿ ಅಂದು ಧಾರಾನಗರದ ಅರಮನೆಯನ್ನು ಬಹುವಾಗಿ ಅಲಂಕರಿಸಲಾಗಿತ್ತು. ಮಹಾದ್ವಾರದ ಮುಂದೆ ವಿಶಾಲವಾದ ಹಸಿರು ತಳಿರು ತೋರಣ, ಗೊನೆಬಾಳೆ ಕಂಬಗಳಿಂದಲೂ ಸುಗಂಧಿತ ಪುಷ್ಪಗಳಿಂದಲೂ, ಬಣ್ಣಬಣ್ಣದ ಸಾಲು ಬಾವುಟಗಳಿಂದಲೂ ಭವ್ಯವಾಗಿ ಅಲಂಕೃತವಾಗಿತ್ತು.

ಮಂಗಳ ವಾದ್ಯ ಮೊಳಗುತ್ತಿತ್ತು. ಸಿಂಧೂಲರಾಜನ ಆಹ್ವಾನವನ್ನು ಅಂಗೀಕರಿಸಿದ್ದ ಹತ್ತಿರದ ಅನೇಕ ಸಾಮಂತರು, ವೇದ ಸ್ವರೂಪರಾದ ವಿಪ್ರೋತ್ತಮರು, ಸಂಸ್ಕೃತ ಪಂಡಿತರು, ವಿದ್ವನ್ಮಣಿಗಳು, ಋತ್ವಿಕರು, ಪಂಚಾಂಗ ಪಂಡಿತರು, ರಾಜ ಪರಿವಾರದವರು, ರಾಜ ಮಹಿಳೆಯರು, ಮುತ್ತೈದೆಯರು, ನಗರ ಪ್ರಮುಖ ನಾಗರೀಕರು ಎಲ್ಲರಾದಿಯಾಗಿ ಆ ಒಡ್ಡೋಲಗದಲ್ಲಿ ಅಪರಿಮಿತ ಸಂಖ್ಯೆಯಲ್ಲಿ ನೆರೆದಿದ್ದರು.

ಅರಮನೆಯ ಮಹಾಮಂತ್ರಿಗಳು, ರಾಜಪುರೋಹಿತರು, ಹಾಗೂ ರಾಜ ಸಹೋದರ ಮುಂಜರಾಜನು ಹುಟ್ಟಿದ ಹಬ್ಬದ ಕಾರ್ಯಕ್ರಮದ ಮೇಲ್ವಿಚಾರಕರಾಗಿದ್ದರು.

ಜನ ದೊಂಬಿಯಾಗದಂತೆ - ಯಾವುದೇ ರೀತಿಯ ಆಭಾಸವಾಗದ ಹಾಗೆ - ಶಾಂತಿ ಶಿಸ್ತನ್ನು ಕಾಪಾಡುವ ಸಲುವಾಗಿ ರಾಜಭಟರು ತಮ್ಮ ಕರ್ತವ್ಯದಲ್ಲಿ ನಿರತರಾಗಿದ್ದರು. ಮಹಿಳಾ ವಿಭಾಗದಲ್ಲಿ ರಾಜಸೇವಕಿಯರು ಶಿಸ್ತಿನಿಂದ ಓಡಾಡುತ್ತಿದ್ದರು. ಬಂದವರನ್ನು ವಿಶೇಷ ಗೌರವದಿಂದ ಆಹ್ವಾನಿಸಿ ನಿಗದಿ ಪಡಿಸಿದ ಸ್ಥಾನಗಳಲ್ಲಿ ಉಪಚರಿಸಿ ಕುಳ್ಳಿರಿಸುತ್ತ "ದಯವಿಟ್ಟು ಹೀಗೆ ದಯಮಾಡಿಸಬೇಕು. ಅಲ್ಲಿ ಕುಳಿತುಕೊಳ್ಳಬೇಕು. ಇದೊ ಇಲ್ಲಿ ಸ್ಥಳವಿದೆ. ಬನ್ನಿ ಕುಳಿತುಕೊಳ್ಳಿ" ಎಂಬ ವಿನಯ ಪೂರಕ ಮಾತುಗಳಿಂದ ಸ್ವಾಗತಿಸುತ್ತಿದ್ದರು.

ಮಹಿಳಾ ಸೇವಕಿಯರು ಸಹ ಬರುತ್ತಿದ್ದ ಮಹಿಳಾ ತಂಡವನ್ನು ಬಹು ವಿನಯದಿಂದ ಬರಮಾಡಿಕೊಂಡು ಉಚಿತಾಸನಗಳಲ್ಲಿ ಉಪಸ್ಥಿತರಾಗುವಂತೆ ಹೇಳುತ್ತಿದ್ದರು.

ಒಡ್ಡೋಲಗದ ಒಳಭಾಗದಲ್ಲೂ ಸಹ ಸುಗಂಧಮಯವಾದ ಮಲ್ಲಿಗೆ, ಜಾಜಿ, ಸಂಪಿಗೆ, ಸುರಗಿ, ಸೇವಂತಿಗೆ ಮುಂತಾದ ಸುಗಂಧ ಪುಷ್ಪ ಮಾಲೆಗಳಿಂದಲೂ, ನಯನ ಮನೋಹರವಾಗಿ ಶೋಭಿಸುವಂತೆ ಸಭಾಂಗಣವನ್ನು ಅಲಂಕರಿಸಲಾಗಿತ್ತು. ಅದಲ್ಲದೆ ಚಂದನ ಸಾಂಬ್ರಾಣಿ ಮುಂತಾದ ಸುಗಂಧ ಪರಿಮಳಬೀರುವ ಹೊಗೆಯು ಒಡ್ಡೋಲಗವೆಲ್ಲಾ ಹರಡಿ ಒಂದು ರೀತಿಯ ದೇವಲೋಕದ ಇಂದ್ರ ಸಭೆಯಂತೆ ವರ್ಣನಾತೀತವಾಗಿತ್ತು.

ವೇದಿಕೆಯ ಮೇಲೆ ವಿಧಿಪೂರ್ವಕವಾಗಿ ಹುಟ್ಟಿದ ಹಬ್ಬದ ಅಂಗವಾಗಿ ಪುರೋಹಿತರಿಂದ ಹೋಮಾದಿಗಳು ಸಾಗುತ್ತಿದ್ದವು. ನೂರಾರು ವಿಪ್ರರಿಂದ ವೇದ ಘೋಷ ಮೊಳಗುತ್ತಿತ್ತು.

ಅತ್ತ ಮಹಾರಾಣಿಯವರ ಅಂತಃಪುರದಲ್ಲಿ ಮಹಾರಾಣಿಯವರ ಮೈದುನನ ಹೆಂಡತಿ ಭಾನುಮತಿ ಇಬ್ಬರೂ ಸೇರಿ ಅನೇಕ ರಾಜಮಹಿಳೆಯರೊಡಗೂಡಿಕೊಂಡು ಬಂಗಾರದ ಹರಿವಾಣದಲ್ಲಿ ಚಿನ್ನದ ಕಾಂತಿಯಂತೆ ಬಹು ಸುಂದರನಾಗಿ ಕಾಣುತ್ತಿದ್ದ ಬಾಲಕ ಭೋಜನನ್ನು ಕುಳ್ಳಿರಿಸಿ ಮಂಗಳಸ್ನಾನ ಮಾಡಿಸುತ್ತಿದ್ದರು.

ನಂತರ ಭೋಜನಿಗೆ ಅವನ ಅನುಪಮ ರೂಪಿಗೆ ತಕ್ಕಹಾಗೆ ದಿವ್ಯವಾದ ವಸ್ತ್ರಾಭರಣಗಳಿಂದ ಅಲಂಕಾರ ಮಾಡಿದರು. ಹಾಗೆ ಅಲಂಕರಿಸುವಾಗ ನೆರೆದಿದ್ದ ಮಹಿಳೆಯರಾದರೋ ತಮ್ಮತಮ್ಮ ಕತ್ತಿನಲ್ಲಿದ್ದ ಸರಗಳನ್ನು ಬಿಚ್ಚಿಕೊಡುತ್ತಾ...... "ಮಗುವಿಗೆ ಈ ಸರ ಹಾಕ್ರೀ....... ಆ ಸರ ಹಾಕ್ರಿ ............. ಈ ಸರ ಇವನ ಅಂದಕ್ಕೆ ತುಂಬ ಚೆನ್ನಾಗಿ ಕಾಣುತ್ತೆ.......... " ಎಂದು ಎಲ್ಲ ಮಹಿಳೆಯರೂ ಅತಿ ಉತ್ಸಾಹದಿಂದ ತಮ್ಮ ತಮ್ಮ ಕೊರಳ ಹಾರವನ್ನು ಕೊಡುವುದಕ್ಕೆ ಮುಂದಾದರು. ಮಹಾರಾಣಿಯವರಿಗೆ ಆಹ್ವಾನಿತ ಮಹಿಳೆಯರ ಆ ರೀತಿಯ.... ಭೋಜರಾಜನ ಮೇಲಿನ ವಾತ್ಸಲ್ಯದ ಆ ಭಾವನೆಯನ್ನು ಕಂಡು ತುಂಬಾ ಸಂತೋಷವಾಯಿತು.

ಅನಂತರ ಗುಣವತಿ ದೇವಿಯು ಸರ್ವಾಲಂಕಾರ ಭೂಷಿತನಾದ ಬಾಲಕ ಭೋಜನನ್ನು ಭವ್ಯವಾಗಿ ಅಲಂಕರಿಸಿದ್ದ ಅರಮನೆಯ ಒಡ್ಡೋಲಗಕ್ಕೆ ಮಂಗಳ ವಾದ್ಯದೊಂದಿಗೆ ಕರೆತಂದಳು.

ಎಲ್ಲೆಲ್ಲೂ ಹರ್ಷತೆ - ವೈಭವತೆ ತುಂಬಿ ತುಳುಕಾಡುತ್ತಿತ್ತು.

ಆಗ ಭೋಜನು ದ್ವಾರಕಾ ಪಟ್ಟಣದ ಬಾಲ ಶ್ರೀಕೃಷ್ಣನಂತೆ ಅತಿಶಯ ತೇಜಸ್ಸಿನಿಂದಲೂ. ರಾಜ ವೈಭವದಿಂದಲೂ ಎಲ್ಲರಿಗೂ ಮಹಾದಾನಂದವನ್ನುಂಟು ಮಾಡುತ್ತಿದ್ದನು.

ರಾಜ ವೇದಿಕೆಯ ಮೇಲೆ ಆ ಹುಟ್ಟಿದ ಹಬ್ಬಕ್ಕಾಗಿ ಹೊಸದಾಗಿ ಚಿನ್ನದ ರೂವಾರಿಗಳಿಂದ ರೂಪಿಸಲ್ಪಟ್ಟ ರತ್ನಖಚಿತ ಪೀಠದಲ್ಲಿ ಬಾಲಕ ಭೋಜನನ್ನು ಕುಳ್ಳಿರಿಸಿದರು.

ಮುಹೂರ್ತದ ವೇಳೆಗೆ ಸರಿಯಾಗಿ ರಾಜ ಪುರೋಹಿತರು ಯಥಾವಿಧಿಯಂತೆ ಮಗುವಿಗೆ ಶುಭಮಂಗಳಕರವಾದ ಹುಟ್ಟಿದ ಹಬ್ಬದ ಕಾರ್ಯ ಮುಗಿಸಿದರು. ಅಭೂತ ಪೂರ್ವವಾಗಿ ಜರುಗಿದ ಆ ಹುಟ್ಟಿದ ಹಬ್ಬದಿಂದ ಅಮಿತ ಆನಂತಾನಂದಭರಿತರಾದರು ರಾಜ ದಂಪತಿಗಳು. ಒಡ್ಡೋಲಗದಲ್ಲಿ ನೆರೆದಿದ್ದ ಎಲ್ಲರೂ ಭೋಜನಿಗೆ ಯಥೇಚ್ಛವಾಗಿ ಉಡುಗೊರೆಯನ್ನ ಕೊಟ್ಟು ಹರಸಿದರು.

ಚಿನ್ನದ ಪೀಠದಲ್ಲಿ ಕುಳಿತಿದ್ದ ಅವನಿಗೆ ಸುಮಂಗಲಿಯರು ಆರತಿ ಮಾಡಿದರು.

ರಾಜ ಪುರೋಹಿತರು ಹಾಗೂ ನೆರೆದಿದ್ದ ನೂರಾರು ಋತ್ವಿಕ ಬ್ರಾಹ್ಮಣರು ವೇದಘೋಷ ಮಾಡುತ್ತಾ "ಆರೋಗ್ಯವಂತನಾಗು............... ಕೀರ್ತಿವಂತನಾಗು. ನಿನ್ನ ಕೀರ್ತಿ ಮೂರು ಲೋಕದಲ್ಲಿಯೂ ಪ್ರಚಾರವಾಗಿ ಸೂರ್ಯ ಚಂದ್ರರು ಇರುವ ತನಕ ಅದು ಶಾಶ್ವತವಾಗಲಿ" ಎಂದು ಹರಸಿದರು.

ಆ ಶುಭ ಸಮಾರಂಭದಲ್ಲಿ ಗಾಯಕರು. ಗಾನ ಹಾಡಿದರು. ನೃತ್ಯ ತಂಡದವರು ನೃತ್ಯ ಮಾಡುತ್ತ ಸೇರಿದ್ದ ಸಭಿಕರ. ರಾಜ ಪರಿವಾರದವರ ಮನಸ್ಸನ್ನು ಸಂತೋಷ ಪಡಿಸಿದರು.

ನಂತರ ಬಂದಿದ್ದ ಎಲ್ಲರಿಗೂ ಅರ್ಘಪಾದ್ಯಾದಿಗಳಿಂದಲೂ. ವೀಳ್ಯ ತಾಂಬೂಲ. ನಾರಿಕೇಳಾದಿಗಳಿಂದಲೂ ಬ್ರಾಹ್ಮಣರಿಗೆ ಧನಕನಕದಾನ ಭೂದಾನ ಗೋದಾನಾದಿ ಸುವರ್ಣನಾಣ್ಯಗಳಿಂದ ಯಥೇಚ್ಛವಾಗಿ ತೃಪ್ತಿಯಾಗುವಂತೆ ಸತ್ಕರಿಸಿ ಉಪಚರಿಸಿದರು.

ಅನಂತರ ಎಲ್ಲರಿಗೂ ಪುಷ್ಕಳ ರಾಜಭೋಜನ.

ಎಲ್ಲ ವೈಭವದಿಂದ ಕೂಡಿದ ಐದನೆ ವರ್ಷದ ಹುಟ್ಟಿದ ಹಬ್ಬವು. ಜನಮನದಲ್ಲಿ ಎಂದೆಂದೂ ಮರೆಯಲಾಗದ ಶುಭದಿನವಾಗಿತ್ತು.

# ಗುರುಕುಲಕ್ಕೆ ಪ್ರಯಾಣ

ಆ ಒಂದು ಶುಭ ದಿನ ಸಿಂಧೂಲರಾಜನು ಭವ್ಯಾಲಂಕೃತವಾದ ಸಭಾಭವನದಲ್ಲಿ ಪಟ್ಟಮಹಿಷಿಯಾದ ಗುಣವತಿ, ಸುಂದರ ಬಾಲಕ ಭೋಜರಾಜರೊಡನೆ ನವರತ್ನಖಚಿತವಾದ ಬಂಗಾರದ ಸಿಂಹಾಸನದಲ್ಲಿ ಮಂಡಿಸಿದ್ದನು.

ಸೇವಕಿಯರು ಚಾಮರ ಬೀಸುತ್ತಿದ್ದರು.

ಸಭಾಭವನದ ಇಕ್ಕೆಡೆಗಳಲ್ಲೂ ಮಹಾಮಂತ್ರಿಗಳು, ರಾಜ ಪುರೋಹಿತರು, ಸಹೋದರನಾದ ಮುಂಜರಾಜ, ಮಹರ್ಷಿಗಳು, ಧರ್ಮಜ್ಞಾನಿಗಳು, ರಾಜನೀತಿ ವಿಶಾರದರು, ರಾಜ್ಯಾಡಳಿತ ಸಲಹೆಗಾರರು ಒಂದು ಸಾಲಿನಲ್ಲಿದ್ದರೆ ಮತ್ತೊಂದೆಡೆಯಲ್ಲಿ ಕವಿಗಳು, ವಿದ್ವಾಂಸರು, ಪಂಡಿತರು, ಕಲಾವಿದರು, ಗಾನ ವಿಶಾರದರು, ವೇದ ಪಾರಂಗತರಾದ ಬ್ರಾಹ್ಮಣೋತ್ತಮರು, ಮಗದೊಂದೆಡೆಯಲ್ಲಿ ಪ್ರಜಾಪ್ರಮುಖರು ನಗರ ನಾಗರೀಕರು ಇವರುಗಳಿಂದ ಆ ಸಭಾಭವನವು ಇವರೆಲ್ಲರ ಸಮಾಗಮದಿಂದ ಅತ್ಯಂತ ಶೋಭಾಯಮಾನವಾಗಿತ್ತು.

ಸ್ವತಹ ವಿದ್ವಾಂಸನು, ಸಂಗೀತ ಪ್ರೇಮಿಯೂ, ಕಲಾರಾಧಕನೂ ಆದ ಸಿಂಧೂಲರಾಜನು - ಅಂದು ಆ ರಾಜಸಭೆಯಲ್ಲಿ ದಕ್ಷಿಣದ ದ್ರಾವಿಡ ದೇಶದಿಂದ ಆಗಮಿಸಿದ್ದ ನಾಟ್ಯ ಕಲಾವಿದರಾದ ಸ್ಫುರದ್ರೂಪಿ ಮಂಗಳ - ಸುಮಂಗಳೆಯರೆಂಬ ಸೋದರಿಯರಿಂದ ಅಮೋಘ ಭರತನಾಟ್ಯ ಕಾರ್ಯಕ್ರಮ ಏರ್ಪಾಟು ಮಾಡಿಸಿದ್ದನು.

ಭರತನಾಟ್ಯ ಪ್ರಾರಂಭವಾಗುವುದಕ್ಕೆ ಮುಂಚೆಯೇ ಪೂರ್ವ ಯೋಜಿತವಾಗಿ ರಾಜ ಸಿಂಧೂಲನ ಆದೇಶದಂತೆ ಮಹಾ ಮಂತ್ರಿಗಳು ರಾಜಕುಮಾರ ಬಾಲಕ ಭೋಜನನ್ನು ವಿದ್ಯಾಭ್ಯಾಸಕ್ಕಾಗಿ ಗುರುಕುಲ ವಾಸಕ್ಕೆ ಕಳುಹಿಸಿಕೊಡಲು ಸಲುವಾಗಿ ಸಕಲ ವೇದ ವೇದಾಂಗ ಪಾರಂಗತರೂ, ಬ್ರಹ್ಮಜ್ಞಾನಿಗಳೂ ಆದ ರಾಜ ಕುಲಗುರುಗಳನ್ನು ರಾಜ ಮರ್ಯಾದೆಯೊಂದಿಗೆ ಆಹ್ವಾನಿಸಿದರು.

ಸಕಲಾಕ್ಕೆ ಸರಿಯಾಗಿ ರಾಜಗುರುಗಳು ಅರಮನೆಯ ಒಡ್ಡೋಲಗಕ್ಕೆ ಆಗಮಿಸಿದರು.

ಅಂದು ಅವರೊಡನೆ ತೇಜಸ್ವಿಗಳಾದ ನಾಲ್ವರು ಶಿಷ್ಯರು ಜೊತೆಗೂಡಿ ಬಂದಿದ್ದರು.

ಕುಲ ಗುರುಗಳು ರಾಜಸಭೆಗೆ ಬರುತ್ತಿದ್ದಂತೆಯೇ ಪತ್ನಿ ಪುತ್ರರೊಡನೆ ಸಿಂಹಾಸನದಿಂದೆದ್ದು ಬಹು ಭಕ್ತಿಯಿಂದ ಕೈ ಜೋಡಿಸಿ ನಮಸ್ಕರಿಸುತ್ತಾ ....... "ಆಚಾರ್ಯರು ದಯಮಾಡಿಸಬೇಕು... ತಮ್ಮ ಆಗಮನದಿಂದ ನಾವುಗಳೆಲ್ಲರೂ ಪರಮ ಪುನೀತರಾದೆವು ..............." ಎಂದು ಸಂತೋಷದಿಂದ ನುಡಿದರು. ನಂತರ ಯಥಾವಿಧಿಯಂತೆ ರಾಜಗುರುಗಳನ್ನು ಯೋಗ್ಯ ರೀತಿಯಲ್ಲಿ ಮರ್ಯಾದೆಗೆ ತಕ್ಕಂತೆ ಸತ್ಕರಿಸಿದನು.

ವಯೋವೃದ್ಧರಾದ ರಾಜ ಗುರುಗಳು ಶತವರ್ಷ ದಾಟಿದ್ದರೂ ಸಹ ಆರೋಗ್ಯವಂತರಾಗಿದ್ದು ಲವಲವಿಕೆಯಿಂದಲೇ ಇದ್ದರು. ಅಷ್ಟೇ ಅಲ್ಲದೆ ಬ್ರಹ್ಮ ತೇಜಸ್ಸು ಅವರ ಮುಖದಲ್ಲಿ ಶೋಭಿಸುತ್ತಿತ್ತು.

"ವಿಜಯೋಸ್ತು ................. ಶ್ರೇಯೋಭಿರಸ್ತು...."

- ಎಂದು ರಾಜನನ್ನು ಹರಸಿದರು.

ಅನಂತರ ತಮಗಾಗಿ ಕಾದಿರಿಸಲಾಗಿದ್ದ ಯೋಗ್ಯ ಪೀಠದಲ್ಲಿ ಉಪಸ್ಥಿತರಾದರು ರಾಜಗುರುಗಳು.

ಪೀಠವನ್ನಲಂಕರಿಸಿದ ರಾಜಗುರುಗಳ ದೃಷ್ಟಿ ರತ್ನಸಿಂಹಾಸನದಲ್ಲಿ ತಂದೆತಾಯಿಗಳ ಮಧ್ಯದಲ್ಲಿ ಕುಳಿತಿದ್ದ ಸುಂದರ ಬಾಲಕ ಭೋಜನತ್ತ ಹರಿಯಿತು. ಪರಮಾಶ್ಚರ್ಯದಿಂದ ಮಹದಾನಂದ ಪುಳಕಿತರಾದರು.

"ಆಹಾ! ಈ ಬಾಲಕನ ಮುಖದಲ್ಲಿ ಅದೆಂತಹ ದಿವ್ಯ ತೇಜಸ್ಸು? ಕಣ್ಣುಗಳಲ್ಲಿ ಅದೆಂತಹ ಅಪೂರ್ವಕಾಂತಿ? ರಾಜಯೋಗಕ್ಕೆ ತಕ್ಕ ವಿಶಾಲವಾದ ಹಣೆ .............. ಮುಖಾರವಿಂದದಲ್ಲಿ ಪ್ರತಿಬಿಂಬಿಸುತ್ತಿರುವ ಆಕರ್ಷಕ ಮಂದಹಾಸದ ಮುಗ್ಧತೆ. ನಿಜವಾಗಿಯೂ ಬ್ರಹ್ಮದೇವನು ಈ ಪುರುಷಾಕೃತಿಯನ್ನು ಅದೆಷ್ಟು ಚೆನ್ನಾಗಿ ರೂಪಿಸಿದ್ದಾನೆ?" ಎಂದು ತಮ್ಮಲ್ಲೆ ಅಂದುಕೊಂಡರು. ಅಂತರ್ಗತವಾಗಿ ಆ ಬಾಲಕನನ್ನೇ ನೋಡುತ್ತ ಸ್ವರ್ಗ ಸುಖವನ್ನನುಭವಿಸಿದ್ದರು. ಪೂರ್ವ ಯೋಜನೆಯಂತೆ ರಾಜಗುರುಗಳ ಸಮಕ್ಷಮದಲ್ಲೆ ನೃತ್ಯ ಕಾರ್ಯಕ್ರಮ ನಡೆಯಿತು.

ಭರತನಾಟ್ಯ ಜರುಗಿದ ಆ ಸಂತೋಷಸಾಗರದಲ್ಲಿ ಕೆಲವು ಘಳಿಗೆ ಮೌನಿಯಾಗಿದ್ದ ಸಿಂಧೂಲರಾಜ.

ಆಗ ರಾಜಗುರುಗಳೇ ಮೌನ ಮುರಿದು ರಾಜನೊಡನೆ "ಹೇ ರಾಜೇಂದ್ರ, ನಿನ್ನ ಅಪೇಕ್ಷೆಯಂತೆ ನಿನ್ನ ಸುಕುಮಾರನಾದ ಭೋಜರಾಜನನ್ನು ವಿಧ್ಯಾಭ್ಯಾಸಕ್ಕಾಗಿ ಗುರುಕುಲಕ್ಕೆ ಕರೆದುಕೊಂಡು ಹೋಗಲು ಬಂದಿದ್ದೇನೆ. ಇಂದು ಪ್ರಯಾಣಕ್ಕೆ ಬಹಳ ಪ್ರಶಸ್ತವಾದ ದಿನವೂ ಆಗಿದೆ" ಎಂದರು ಗುರುಗಳು.

ಆಗ ಮಹಾರಾಣಿಯಾದ ಗುಣವತಿಯು ಮಾತೃ ಸಹಜ ಗುಣದಂತೆ ತಡೆಯಲಾಗದ ವೇದನೆಯಿಂದ ಪರಿತಪಿಸಿದಳು.

"ನನ್ನ ಭೋಜನನ್ನು ಬಿಟ್ಟು ಒಂದು ಕ್ಷಣವೂ ಇರಲಾರೆ. ಹೀಗಿರುವಾಗ ಎಂಟು ವರ್ಷಗಳ ಪರ್ಯಂತರ ಅವನನ್ನಗಲಿ ಹೇಗೆ ತಾನೆ ಜೀವಿಸಲಿ? ಪ್ರತಿದಿನವೂ ಬಗೆ ಬಗೆಯ ಆಟಪಾಠಗಳಿಂದಲೂ ಮುದ್ದಾದ ಮಾತಿನಿಂದಲೂ ತಾಯಿ ಹೃದಯಕ್ಕೆ ಅಮೃತಧಾರೆ ಎರೆದಂತೆ ಸ್ವರ್ಗ ಸುಖವನ್ನುಂಟು ಮಾಡುತ್ತಿರುವ. ಈ ನನ್ನ ಸುಕುಮಾರ

ಭೋಜನನ್ನು ಗುರುಕುಲಕ್ಕೆ ಕಳುಹಿಸಿಕೊಟ್ಟು ಹೇಗೆ ತಾನೆ ಆಗಲಿರಲಿ? ಆ ಮಾನಸಿಕ ವೇದನೆ ತಾಯಿಯಾದವಳಿಗೆ ಮಾತ್ರ ತಿಳಿಯುತ್ತದೆ" - ಎಂದು ತನ್ನ ಪಕ್ಕದಲ್ಲಿಯೇ ಕುಳಿತಿದ್ದ ಸುಂದರಬಾಲಕನಾದ ಭೋಜನನ್ನು ಮತ್ತೆ ಬಿಗಿದಪ್ಪಿ ಮುದ್ದಾಡುತ್ತ ಹೇಳಿದಳು.

ಆಗ ಸಿಂಧೂಲರಾಜನು ಗುಣವತಿಯನ್ನು ಸಮಾಧಾನ ಮಾಡುತ್ತ, "ದುಃಖಿಸಬೇಡ ಗುಣವತಿ, ನಿನ್ನಂತೆ ನನಗೂ ತುಂಬಾ ದುಃಖವಾಗುತ್ತಿದೆ. ನಾನಾದರೂ ಅವನನ್ನು ಹೇಗೆ ಬಿಟ್ಟಿರಲಿ ಹೇಳು? ಆದರೆ ಭವಿಷ್ಯದಲ್ಲಿ ನನ್ನ ಉತ್ತರಾಧಿಕಾರಿಯಾಗುವ ಅವನು ಯೋಗ್ಯ ಶಿಕ್ಷಣ ಪಡೆದು ಸಕಲಗುಣ ಸಂಪನ್ನನಾಗಲೇಬೇಕಲ್ಲವೆ? ಇದು ವ್ಯವಹಾರದ ರೀತಿ ನೀತಿ. ಯುಗಧರ್ಮಕ್ಕೆ ಸರಿಯಾಗಿ ನಾವೂ ನಡೆಯಲೇಬೇಕು. ಇದಕ್ಕಾಗಿ ನೀನು ದುಃಖಿಸುವುದು ಸರಿಯಲ್ಲ. ಇದೀಗ ಕಾಲ ಕೂಡಿ ಬಂದಿದೆ. ಕುಮಾರನು ವಿದ್ಯಾಭ್ಯಾಸಕ್ಕಾಗಿ ಗುರುಕುಲಕ್ಕೆ ಹೋಗಲೇಬೇಕು; ಅವನನ್ನು ಸಂತೋಷದಿಂದ ಗುರುಗಳೊಡನೆ ಗುರುಕುಲಕ್ಕೆ ಕಳುಹಿಸಕೊಡುವುದು ಮಾತಾಪಿತೃಗಳಾದ ನಮ್ಮ ಆದ್ಯ ಕರ್ತವ್ಯವು. ಸಮಾಧಾನ ಮಾಡಿಕೊ" - ಎಂದು ನಾನಾರೀತಿಯಲ್ಲಿ ಸಮಾಧಾನ ಪಡಿಸಿದನು ಸಿಂಧೂಲನು.

ಆಗ ಬಾಲಕ ಭೋಜನು ಸಹ ತನ್ನ ತಾಯಿಯ ಕಣ್ಣೀರನ್ನು ತೊಡೆಯುತ್ತ "ಅಮ್ಮ, ನೀನು ಅಳಬೇಡಮ್ಮ. ನಾನು ಸಂತೋಷದಿಂದ ಗುರುಗಳ ಜೊತೆ ಗುರುಕುಲಕ್ಕೆ ಹೋಗಿ ಅಲ್ಲಿ ಎಲ್ಲ ವಿದ್ಯೆಯನ್ನು ಕಲಿತುಕೊಂಡು, ಬಹು ಬೇಗ ಬಂದು ಬಿಡುತ್ತೇನೆ" - ಎಂದು ಮುದ್ದು ಮುದ್ದಾದ ನುಡಿಗಳಿಂದ ಸಂತೈಸಿದನು.

ಆಗ ಅಮಿತವಾದ ಮಾತೃಪ್ರೇಮದಿಂದ ಭೋಜನನ್ನು ಮತ್ತೊಮ್ಮೆ ಬಿಗಿದಪ್ಪಿ ಮುದ್ದಾಡುತ್ತ, ತನ್ನಲ್ಲಿ ಮನೆ ಮಾಡಿಕೊಂಡಿದ್ದ ದುಃಖವನ್ನು ಶಮನ ಮಾಡಿಕೊಂಡಳು.

ಅದೇ ಸಂದರ್ಭದಲ್ಲಿ ವ್ಯಸನ ಪೀಡಿತಳಾಗಿದ್ದ ಪಟ್ಟಮಹಿಷಿಯನ್ನು ಸಮಾಧಾನದ ಸವಿ ಮಾತಿನಿಂದ ಸಂತೈಸಿ ನುಡಿದ ರಾಜಗುರುಗಳು "ಚಿಂತಿಸಬೇಡ ಮಗಳೆ, ನಿನ್ನ ಮಗನಾದ ಭೋಜನು ಸಾಮಾನ್ಯನಲ್ಲ. ಅವನಲ್ಲಿರುವ ಅಘಾಧವಾದ ಬ್ರಹ್ಮತೇಜಸ್ಸು ಮುಂದೆ ಈ ಭವ್ಯ ಭಾರತಕ್ಕೆ ಅಪೂರ್ವಮಯವಾದ ಜ್ಞಾನದಬೆಳಕನ್ನು ನೀಡುತ್ತದೆ. ದಿವ್ಯವಾದ ಜ್ಞಾನಜ್ಯೋತಿ ಶಕ್ತಿ ಅವನಲ್ಲಡಗಿದೆ. ಈ ನಿನ್ನ ಬಾಲಕನಿಗೆ ಗುರು ಸ್ಥಾನದಲ್ಲಿರುವುದು ನನಗೂ ಸಹ ಪರಮ ಭಾಗ್ಯವಾಗಿದೆ. ನಿನ್ನ ಸುಕುಮಾರನು ಸಕಲ ವಿದ್ಯಾ ಪಾರಂಗತನಾಗಿ ಇಡೀ ಭೂಮಂಡಲದಲ್ಲಿಯೇ ಮಹಾ ಮೇರು ಕೀರ್ತಿಗಳಿಸುವಂಥಾವನಾಗುತ್ತಾನೆ. ಇದು ನನ್ನ ವಾಣಿಯೇ ಮಾತ್ರವಲ್ಲ, ಭಗವಂತನ ವಾಣಿ..... ಸತ್ಯವಾಣಿ" ಎಂದರು ರಾಜಗುರುಗಳು.

ಗುರುಗಳ ಆ ಮಾತಿನಿಂದ ಗುಣವತಿಗೆ ಸಮಾಧಾನವಾಯ್ತು.

ಆಗ ಬಾಲಕ ಭೋಜನು ತನ್ನ ಮಾತಾಪಿತೃಗಳಿಗೂ, ವಯೋವೃದ್ಧರಾದ ರಾಜಪುರೋಹಿತರಿಗೂ, ರಾಜಗುರುಗಳಿಗೂ ಚಿಕ್ಕಪ್ಪ ಮುಂಜರೂಜನಿಗೂ ರಾಜಸಭೆಯಲ್ಲಿದ್ದ ಎಲ್ಲ ಹಿರಿಯರಿಗೂ ಕರ್ತವ್ಯದಂತೆ ಕಾಲು ಮುಟ್ಟಿ ನಮಸ್ಕರಿಸಿದನು.

ಮಹಾರಾಣಿಯಾದ ಗುಣವತಿಯ ದೃಷ್ಟಿಯಲ್ಲಿ ಆ ದೃಶ್ಯ ಹೃದಯಾಂಗಮವಾಗಿತ್ತು. ಎಲ್ಲ ಹಿರಿಯರಿಗೂ ನಮಸ್ಕಾರ ಮಾಡಿದವನೇ ರಾಜಗುರುಗಳ ಬಳಿಗೆ ಬಂದ ಭೋಜನು "ಗುರುಕುಲಕ್ಕೆ ಹೊರಡಲು ಸಿದ್ಧನಿದ್ದೇನೆ ಗುರುಗಳೆ" ಎಂದನು.

ಆಗ ಗುರುಗಳು ಭೋಜನನ್ನು ಆಪಾದಮಸ್ತಕವಾಗಿ ನೋಡಿ "ಇಲ್ಲ... ನೀನಿನ್ನೂ ಸಿದ್ಧನಿಲ್ಲ" - ಎಂದು ಗೂಡಾರ್ಥವಾಗಿ ತಲೆ ಅಲ್ಲಾಡಿಸಿದರು.

"ಅದು ಹೇಗೆ ಗುರುಗಳೆ.... ನಾನು ಸಂತೋಷದಿಂದಲೇ ತಮ್ಮೊಡನೆ ಗುರುಕುಲಕ್ಕೆ ಬರಲು ಸಿದ್ಧನಾಗಿಯೇ ಬಂದಿದ್ದೇನೆ" ಎಂದನು.

"ಅದು ಸರಿ ಭೋಜ ಆದರೆ..... " ಎಂದು ರಾಜ ಸಿಂಧೂಲನನ್ನೊಮ್ಮೆ ಅವ್ಯಕ್ತವಾಗಿ ನೋಡುತ್ತ, ಬಾಲಕನ ಕಡೆ ಮುಖ ಮಾಡಿ ನುಡಿದರು ಗುರುಗಳು.

ಅವರ ಗೂಡಾರ್ಥ ನೋಟ ರಾಜನಿಗೂ ಸಹ ಅರ್ಥವಾಗಲಿಲ್ಲ.

ಅವರ ಸಂದೇಹವನ್ನು ನಿವಾರಿಸುವುದು ಗುರುಗಳ ಕರ್ತವ್ಯವಾಗಿತ್ತು. ಗುರುಗಳು ಹೇಳಿದರು.

"ಮಗು ಭೋಜ, ಯಾರು ಯಾರು ಎಲ್ಲಿ ಎಲ್ಲಿ ಹೇಗೆ ಹೇಗೆ ಇರಬೇಕು? ಯಾವ ರೀತಿ ಇರಬೇಕು? ಆ ರೀತಿ ಇದ್ದರೆ ಮಾತ್ರ ಶೋಭಿಸಬಲ್ಲರು. ನೋಡು..... ನನ್ನ ಜೊತೆಯಲ್ಲಿ ಬಂದಿರುವ ಈ ವಿದ್ಯಾರ್ಥಿಗಳನ್ನ" ಎಂದು ತಾವು ಕರೆದುಕೊಂಡು ಬಂದಿದ್ದ ಆ ನಾಲ್ವರು ಶಿಷ್ಯರತ್ತ ಬೊಟ್ಟು ಮಾಡಿ ತೋರಿಸುತ್ತ "ನೋಡು ಭೋಜ! ಈ ನನ್ನ ಶಿಷ್ಯರು ಯಾವ ರೀತಿ ಆಶ್ರಮ ಯೋಗ್ಯವಾದ ಸಾಧಾರಣ ಉಡುಗೆ ತೊಡಿಗೆಯಿಂದ ಬಂದಿದ್ದಾರೆ. ಅದೇ ರೀತಿ ನೀನು ಸಹ ನಿನ್ನ ಈ ರಾಜ ಉಡುಪನ್ನು ಬದಲಾಯಿಸಿಕೊಂಡು ಗುರುಕುಲಕ್ಕೆ ಯೋಗ್ಯವಾದ ಸಾಧಾರಣ ಉಡುಪಿನಿಂದ ಬರಬೇಕು. ಗುರುಕುಲದಲ್ಲಿ ರಾಜನ ಮಗ..... ಮಂತ್ರಿಯ ಮಗ ......... ಸಾಮಾನ್ಯರ ಮಗ ಎಂಬ ಯಾವ ಭೇದ ಭಾವವೂ ಇಲ್ಲ. ಅಲ್ಲಿ ಎಲ್ಲ ಹುಡುಗರು ಒಂದೇ ಕುಟುಂಬದ ಸೋದರರಂತೆ ಇರಬೇಕು. ಅಲ್ಲಿ ಯಾವುದೇ ವಿಧವಾದ ತಾರತಮ್ಯಕ್ಕೂ ಅವಕಾಶವಿರುವುದಿಲ್ಲ. "ವಿದ್ಯಾತುರಾಣಾಂ ನ ಸುಖಂ ನ ನಿದ್ರ" ಎಂಬಂತೆ ವಿದ್ಯಾರ್ಥಿಯಾದವನು ಯಾವ ಸುಖಸಂಪತ್ತಿಗೂ ಆಸೆ ಪಡಬಾರದು. ವಿದ್ಯೆಯನ್ನು ಬಯಸುವ ಪ್ರತಿಯೊಬ್ಬ ವಿದ್ಯಾರ್ಥಿಯೂ ಸಹ ಕರ್ತವ್ಯ ಪ್ರಜ್ಞೆಯಿಂದ ಆದರ್ಶವಾದಿಗಳಾಗಿ, ತಮ್ಮ ಶಿಕ್ಷಣದಲ್ಲೆ ಸದಾ ಗಮನವಿಟ್ಟಿರಬೇಕು. ಶ್ರದ್ಧಾಭಕ್ತಿಯಿಂದ ವ್ಯಾಸಂಗ ಮಾಡಬೇಕು. ಆಗ ಮಾತ್ರ ಆ ವಿದ್ಯಾಮಾತೆಯಾದ ಸರಸ್ವತಿ ಒಲಿಯ ಬಲ್ಲಳು ಭೋಜ" - ಎಂದು ಹಿತವಚನದಿಂದ ನುಡಿದರು ಗುರುಗಳು.

ಆಗ ಪಟ್ಟ ಮಹಿಷಿಯಾದ ಗುಣವತಿಗೆ ಪುನಹ ದುಃಖ ಉಂಟಾಯಿತು.

"ಕುಬೇರನ ವೈಭವಕ್ಕಿಂತಲೂ ಮಿಗಿಲಾದ ಅಖಂಡ ವೈಭವದಿಂದ ಕೂಡಿದ ರತ್ನಸಿಂಹಾಸನಾಧೀಶನ ಪುತ್ರನು ಸಾಮಾನ್ಯರಂತೆ ಸಾಧಾರಣ ಉಡುಪಿನಿಂದ ಗುರುಕುಲಕ್ಕೆ ಹೋಗಬೇಕೆ?" ಎಂದು ತೀರದ ವೇದನೆಯಿಂದ ಕೇಳಿದಳು ಮಹಾರಾಜನಲ್ಲಿ.

ಮತ್ತೆ ಮಹಾರಾಜ ಪತ್ನಿಯನ್ನು ಸಂತೈಸಿದನು.

ಸಮಯ ವ್ಯರ್ಥ ಮಾಡದೆ, ಭೋಜ ತತ್‌ಕ್ಷಣವೇ ರಾಜ ಉಡುಪನ್ನು ಬದಲಾಯಿಸಿ, ಆಶ್ರಮವಾಸಿಗಳಿಗೆ ಯೋಗ್ಯವಾದ ಉಡುಪನ್ನು ಧರಿಸಿದವನೇ ಸಭಾಂಗಣಕ್ಕೆ ಬಂದು, ಮತ್ತೊಮ್ಮೆ ಮಾತಪಿತೃಗಳಿಗೆ ಎಲ್ಲ ಹಿರಿಯರಿಗೂ ಸಾಷ್ಟಾಂಗ ನಮಸ್ಕಾರ ಮಾಡುತ್ತ, ತನ್ನ ಚಿಕ್ಕಪ್ಪನಾದ ಮುಂಜರಾಜನ ಬಳಿಗೆ ಬಂದು ಚಿಕ್ಕಪ್ಪನನ್ನೇ ಭಕ್ತಿಭಾವದಿಂದ ನೋಡುತ್ತ ಸಾಷ್ಟಾಂಗಿಸಿದ.

ಆಗ ಮುಂಜರಾಜನು ಮಮತೆಯಿಂದ ಬಾಲಕ ಭೋಜನನ್ನು ಬಿಗಿದಪ್ಪಿ ಮುದ್ದಿಟ್ಟನು. ಅಂತರ್ಯದಲ್ಲಿ ದುಃಖ ತುಂಬಿದ್ದರೂ ಸಹ ಅದನ್ನು ತೋರಿಸಿಕೊಳ್ಳದೆ ಹೊರ ದೃಷ್ಟಿಯಲ್ಲಿ ಧೈರ್ಯ ತಂದುಕೊಂಡು ನುಡಿಯುತ್ತ" ಭೋಜ, ನೀನು ಯಾವುದಕ್ಕೂ ಚಿಂತೆ ಮಾಡಬೇಡ. ನಾವೆಲ್ಲರೂ ಆಗಾಗ್ಗೆ ಗುರುಕುಲಕ್ಕೆ ಬಂದು ನಿನ್ನ ಯೋಗಕ್ಷೇಮವನ್ನು ವಿಚಾರ ಮಾಡುತ್ತಲೇ ಇರುತ್ತೇವೆ. ನೀನು ಧೈರ್ಯದಿಂದ ಗುರುಕುಲಕ್ಕೆ ಹೋಗಿ ಬಾ. ಅಲ್ಲಿ ಗುರುಗಳು ಹೇಳಿದಂತೆ ಕೇಳುತ್ತ ಗುರುಗಳ ವಚನವನ್ನು ಚಾಚು ತಪ್ಪದೆ ಪರಿಪಾಲಿಸುತ್ತ, ಶ್ರದ್ಧೆಯಿಂದ ವಿದ್ಯಾಭ್ಯಾಸ ಮಾಡು... ಹೋಗಿ ಬಾ" ಎಂದು ಅನೇಕ ಹಿತನುಡಿಗಳಿಂದ ತಲೆ ನೇವರಿಸುತ್ತ ನುಡಿದನು ಮುಂಜರಾಜನು.

ಆಗ ಅಲ್ಲಿ ನೆರೆದಿದ್ದ ಎಲ್ಲರ ಕಣ್ಣಂಚಿನಲ್ಲೂ ನೀರೂರಿತ್ತು. ಅದೊಂದು ಹೃದಯ ವಿದ್ರಾವಕ ಸನ್ನಿವೇಶವಾಗಿತ್ತು.

ಗುರುಕುಲಕ್ಕೆ ಹೋಗುತ್ತಿರುವ ಭೋಜನನ್ನು ಎಲ್ಲರು ಮುಕ್ತ ಕಂಠದಿಂದ ಹರಸಿ ಹಾರೈಸಿದರು.

ಗುರುಗಳ ಬಳಿಗೆ ಬಂದ ಭೋಜನು ಅವರ ಶಿಷ್ಯರೊಡನೆ ಕೂಡಿಕೊಂಡು, ಗುರುಕುಲಕ್ಕೆ ಪ್ರಯಾಣ ಸನ್ನದ್ಧನಾದನು.

ಅರಮನೆಯ ಮಹಾದ್ವಾರದಲ್ಲಿ ಗುರುಗಳಿಗಾಗಿ ನಾಲ್ಕು ಆಕರ್ಷಕ ಕುದುರೆಗಳಿಂದ ಶೋಭಿತವಾದ ಚಿನ್ನದ ರಥ ಸಿದ್ಧವಾಗಿ ನಿಂತಿತ್ತು.

ಎಲ್ಲರೂ ಆ ಚಿನ್ನದ ರಥದಲ್ಲಿ ಕುಳಿತರು.

ಭೋಜನನ್ನು ಬೀಳ್ಕೊಡಲು ಆ ರಾಜಸಭೆಯಲ್ಲಿದ್ದ ಎಲ್ಲರೂ ಗುಂಪುಗೂಡಿ, ಮಹಾದ್ವಾರದವರೆಗೂ ಬಂದು ತುಂಬಿದ ಅಂತಃಕರಣದಿಂದ ಬೀಳ್ಕೊಟ್ಟರು.

ಗುರುಶಿಷ್ಯರನ್ನು ಹೊತ್ತ ಆ ರಥವು ಗುರುಕುಲವನ್ನು ಕುರಿತು ಸಾಗಿತು.

ನೋಡಲು ಅತಿ ಸುಂದರವಾದ, ದಷ್ಟ ಪುಷ್ಟವಾದ ಸಾಕಷ್ಟು ಎತ್ತರ ಉಳ್ಳ ಆಕರ್ಷಣೀಯವಾದ ನಾಲ್ಕು ಶಕ್ತಿಶಾಲಿ ಬಿಳೀ ಕುದುರೆಗಳಿಂದ ಎಳೆಯಲ್ಪಟ್ಟ ರತ್ನಖಚಿತ ಚಿನ್ನದ ರಥದ ಮುಂದಿನ ಪೀಠದಲ್ಲಿ ವೇದ ವೇದಾಂತ ಮಹರ್ಷಿಗಳಾದ ರಾಜಗುರುಗಳು ಆಸೀನರಾಗಿದ್ದರು. ಅವರಿಗೆ ಎದುರು ಪೀಠದಲ್ಲಿ ಸುಂದರ ಬಾಲಕ ರಾಜಕುಮಾರ

ಭೋಜನು ಕುಳಿತಿದ್ದನು. ಗುರುಗಳೊಡನೆ ಬಂದಿದ್ದ ಆ ನಾಲಕು ಬಾಲಕ ವಿದ್ಯಾರ್ಥಿಗಳು ಗುರುಗಳ ಪಾದದ ಬಳಿ ಅಂದರೆ ಯಾವುದೇ ಪೀಠವಲ್ಲದ ಜಾಗದಲ್ಲಿ ಕುಳಿತಿದ್ದರು.

ಆಗ ಭೋಜನಿಗೆ ಏಕೋ ಮುಜುಗರವಾಯ್ತು. "ತನ್ನ ಪಕ್ಕದಲ್ಲಿಯೇ ಆ ನಾಲ್ಕು ಹುಡುಗರಿಗೂ ಕುಳಿತು ಕೊಳ್ಳಲು ಸ್ಥಳವಿದ್ದಾಗ್ಯೂ ಸಹ, ಆ ರೀತಿ ಕೆಳಗೆ ಗುರುಗಳ ಕಾಲ ಹತ್ತಿರ ಏಕೆ ಕುಳಿತಿದ್ದಾರೆ?" ಎಂದು ತನ್ನನ್ನು ತಾನೇ ಪ್ರಶ್ನಿಸಿಕೊಂಡು, ಆ ಬಾಲಕರೊಡನೆ ಮಧುರವಾದ ನುಡಿಗಳಿಂದ ಸಂಭಾಷಿಸುತ್ತ "ಎಲೈ ಮಿತ್ರರೆ, ನೀವೆಲ್ಲರೂ ಇಲ್ಲಿಯೇ ನನ್ನ ಪಕ್ಕದಲ್ಲಿಯೇ ಕುಳಿತುಕೊಳ್ಳಿ. ಇಲ್ಲಿ ಎಲ್ಲರಿಗೂ ಸ್ಥಳವಿದೆ ಬನ್ನಿ" ಎಂದನು.

ರಾಜಕುಮಾರನ ಆ ಮಾತಿಗೆ ಎಲ್ಲರೂ ಬೆಚ್ಚಿದರು. ಯಾವುದೋ ಅವ್ಯಕ್ತ ಭಯ. ಅಷ್ಟೇ ಗೌರವ ಭಾವನಾ ನೋಟದಿಂದ ಭೋಜ ತದೇಕನಾಗಿ ನೋಡಿದ. ಆ ನೋಟವನ್ನು ಹೆಚ್ಚುಕಾಲ ಎದುರಿಸಲಾಗದೆ ಎಲ್ಲರೂ ತಲೆ ತಗ್ಗಿಸಿ ಮೌನಿಗಳಾದರು.

"ಓಹೋ, ತಿಳಿಯಿತು. ನಾನು ರಾಜಕುಮಾರ, ನನ್ನ ಪಕ್ಕದಲ್ಲಿ ಹೇಗೆ ತಾನ ಕುಳಿತುಕೊಳ್ಳುವುದು ಎಂಬ ಶಂಕೆ ನಿಮಗಿದೆ. ನೀವೇನೂ ಸಂಕೋಚ ಪಡಬೇಕಾಗಿಲ್ಲ. ನಾನು ರಾಜಕುಮಾರನಾದರೂ ಇಲ್ಲಿ ನಾವೆಲ್ಲರು ವಿದ್ಯೆ ಕಲಿಯಲು ಬಂದಿರುವ ವಿದ್ಯಾರ್ಥಿಗಳು. ವಿದ್ಯಾರ್ಥಿಗಳಾದ ನಮ್ಮಲ್ಲಿ ಮೇಲುಕೀಳೆಂಬ ಯಾವ ವಿಧವಾದ ಭೇದಭಾವನೆಯೂ ಇರಬಾರದು..... ಬನ್ನಿ ಕುಳಿತುಕೊಳ್ಳಿ" ಎಂದು ವಾತ್ಸಲ್ಯತುಂಬಿದ ಅಕ್ಕರೆಯಿಂದ ನುಡಿದ.

ಭೋಜನ ಪ್ರೀತಿಯ ಮಾತಿಗೆ ಆ ವಿದ್ಯಾರ್ಥಿಗಳು ಸಂತೋಷಗೊಂಡರಾದರೂ ಸಹ ಆಗ ಮತ್ತೊಂದು ರೀತಿಯ ನಿಘೂಡವಾದ ಆಂತರಿಕ ಭಾವನೆ ಆ ವಿದ್ಯಾರ್ಥಿಗಳೆಲ್ಲರಲ್ಲೂ ಮೂಡಿಹರಿದಿತ್ತು. ಮೇಲೆ ಕುಳಿತಿದ್ದ ತಮ್ಮ ಗುರುಗಳತ್ತ ಮಿಂಚಿನ ನೋಟ ಬೀರಿ ಕ್ಷಣಾರ್ಧದಲ್ಲಿ ತಲೆ ತಗ್ಗಿಸಿ ಬಿಟ್ಟರು.

ಆ ವಿದ್ಯಾರ್ಥಿಗಳ ವಿನಯ ತುಂಬಿದ ಭಕ್ತಿಭಾವನೆ ಭೋಜನಿಗೆ ಅರ್ಥವಾಗದಿರಲಿಲ್ಲ. 'ಹೌದು!, ಈ ವಿದ್ಯಾರ್ಥಿಗಳು ಗುರುಗಳ ವಿಷಯದಲ್ಲಿ ಬಹಳ ವಿನಯಶಾಲಿಗಳು, ಸಕಲ ವಿದ್ಯಾಪಾರಂಗತರು . ಮಹಾಜ್ಞಾನಿಗಳು ಹಿರಿಯರಲ್ಲಿ ಪಿತಾಮಹರು ಆದ ಅವರಿಗೆ ಸರಿಸಮಾನವಾಗಿ ಕುಳಿತುಕೊಳ್ಳುವುದು ಸರಿಯಲ್ಲ" ಎಂಬುದೆ ಆ ವಿದ್ಯಾರ್ಥಿ ಬಾಲಕರ ಮನದಲ್ಲಿದ್ದ ವಿಚಾರ." ಇದನ್ನು ಅರ್ಥಮಾಡಿಕೊಂಡ ಭೋಜನು "ನಾನು ಸಹ ಅವರಿಗೆ ಸರಿ ಸಮಾನವಾಗಿ ಕುಳಿತುಕೊಳ್ಳಬಾರದು" ಎಂದರಿತು ತಾನು ಕುಳಿತಿದ್ದ ಸಾಲುಪೀಠದಿಂದೆದ್ದು ಆ ವಿದ್ಯಾರ್ಥಿ ಬಾಲಕರ ಜೊತೆಗೂಡಿ ಕುಳಿತನು.

ಭೋಜನ ಆ ಎಲ್ಲ ಸದ್ಗುಣ ವಿನಯ ಭೂಷಣಗಳನ್ನು ಗಮನಿಸುತ್ತಿದ್ದ ರಾಜಗುರುಗಳು ತಮ್ಮ ಮನಸ್ಸಿನಲ್ಲಿಯೇ ಸಂತೋಷ ಪಡುತ್ತ "ಆಹಾ! ಭೋಜನು ಈ ಇಳಿ ವಯಸ್ಸಿನಲ್ಲಿಯೇ ಅದೆಂತಹ ಪ್ರಜ್ಞಾವಂತನಾಗಿದ್ದಾನೆ. ತಾನೊಬ್ಬ ರಾಜಕುಮಾರನಾದರೂ ಸಹ ಅವನಲ್ಲಿ ಕಿಂಚಿತ್ ದರ್ಪವಾಗಲಿ, ಅಹಂಕಾರವಾಗಲಿ

ಸ್ವಾರ್ಥಬುದ್ಧಿಯಾಗಲಿ ಇಲ್ಲದಿರುವುದು ಬಹಳ ಸಂತೋಷಕರ ವಿಷಯ" ಎಂದು ಭೋಜನನ್ನು ಬಹುವಾಗಿ ಮನದಲ್ಲೆ ಕೊಂಡಾಡಿದರು.

ಸಾಕಷ್ಟು ವೇಗವಾಗಿಯೇ ಹೋಗುತ್ತಿತ್ತು ರಥವು. ಮುನ್ನೆಚ್ಚರಿಕೆ ಕ್ರಮವಾಗಿ ನಾಲ್ಕು ಜನ ಅಶ್ವಾರೂಢ ಸಮವಸ್ತ್ರ ಸಶಸ್ತ್ರಧಾರಿ ಅಂಗರಕ್ಷಕರ ಮುಂದಾಳತ್ವದಲ್ಲಿ ಧಾರಾನಗರವನ್ನು ಹಿಂದಕ್ಕೆ ಹಾಕಿ ರಾಜ ಗುರುಗಳ ಪರಮ ಪವಿತ್ರ ಸ್ಥಳವಾದ 'ಗುರುಕುಲ' ವನ್ನು ಸಮೀಪಿಸಿ ಸಾಗುತ್ತಿತ್ತು.

ಪ್ರಕೃತಿ ಸೌಂದರ್ಯದ ದಾರಿಯಲ್ಲಿ ರಥವು ಮುಂದೆ ಮುಂದೆ ಹೋಗುತ್ತಲೇ ಇತ್ತು. ನಿಸರ್ಗದ ಚೆಲುವನ್ನು ವೀಕ್ಷಿಸುತ್ತಾ ಕುಮಾರ ಭೋಜ ಸಂತೋಷದಿಂದಲೇ ಇದ್ದ.

ಸಾಲು ಬೆಟ್ಟಗಳ ತಪ್ಪಲಲ್ಲಿ ಸಾಲು ಸಾಲಾಗಿ ಗುಂಪುಗುಂಪಾಗಿ ಬೃಹದಾಕಾರವಾಗಿ ಬೆಳೆದು ಆಹ್ಲಾದಕರ ಸಂತೋಷವನ್ನುಂಟು ಮಾಡುತ್ತಿದ್ದ ಬಗೆ ಬಗೆಯ ಗಗನ ಚುಂಬಿ ವೃಕ್ಷಗಳ ಸಮೂಹದ ಸಿರಿ ಸೊಬಗು ಬಹು ವರ್ಣನಾತೀತವಾಗಿತ್ತು.

"ಪರಮಾತ್ಮನ ಸಂಕಲ್ಪ ಮಾತ್ರದಿಂದ ರಚಿತವಾದ ಆ ಅದ್ಭುತ ರಮ್ಯ ಪ್ರಕೃತಿ ಸೌಂದರ್ಯವನ್ನು ನೋಡುವುದಕ್ಕೂ ಸಹ ಪರಮಭಾಗ್ಯ ಒದಗಿ ಬಂದಿರಬೇಕು" ಎಂದು ಆ ಸುಂದರ ಬಾಲಕ ಭೋಜನ ರಸಿಕ ಹೃದಯ ನುಡಿಯುತ್ತಿತ್ತು.

ರಥವು ಮತ್ತಷ್ಟು ಗುರುಕುಲದ ಹತ್ತಿರ ಬರುತ್ತಿದ್ದಂತೆ ವನಸಿರಿಯ ಮಡಿಲಲ್ಲಿ ಅಲ್ಲಲ್ಲೆ ಗುಂಪುಗುಂಪಾಗಿ ಸಾಲು ಸಾಲಾಗಿ ಮಾನವರಿಗಾಗಿಯೆ ಹೊತ್ತುನಿಂತ ಅನೇಕಾನೇಕ ಬಗೆಬಗೆಯ ಹಣ್ಣುಹಂಪಲುಗಳು ಗಿಡಮರಗಳಿಂದಲೂ ಸುಗಂಧ ಪರಿಮಳವನ್ನು ಸೂಸುವ ಬಗೆಬಗೆಯ ಪುಷ್ಪಗಳಿಂದಲೂ ಕೂಡಿದ್ದು, ಆ ಸುತ್ತಮುತ್ತಲಿ ಪ್ರದೇಶವೆಲ್ಲಾ ಅಲೌಕಿಕ ಸೌಂದರ್ಯದಿಂದ ಕೂಡಿತ್ತು.

ಆ ಸೌಂದರ್ಯ ಸಿರಿ ಸಂಪತ್ತಿಗೆ ಮತ್ತಷ್ಟು ವಿಹಂಗಮ ನೋಟ ಬೀರುವಂತೆ ಅಲ್ಲಲ್ಲೆ ಮಿಂಚಿನ ವೇಗವಲ್ಲಿ ಇತ್ತಿಂದತ್ತ ಅತ್ತಿಂದಿತ್ತ ಓಡಾಡುತ್ತಿದ್ದ ಗಂಡು ಸಾರಂಗ, ಹೆಣ್ಣು ಜಿಂಕೆ, ಗರಿ ಕೆದರಿದ ನವಿಲು, ಬಿಳೀ ಮೊಲ ಮುಂತಾದ ಶಾಂತ ಸ್ವಭಾವದ ವನ್ಯ ಜೀವಿಗಳ ಸೊಬಗು ಬಹುವರ್ಣನಾತೀತವಾಗಿತ್ತು.

ಆ ಪ್ರಕೃತಿ ದೇವಿಯ ಸಿರಿಸೊಬಗಿನ ಅನಂತ ವೈಭವವನ್ನೇ ನೋಡುತ್ತ ತನ್ನ ಸಹಪಾಠಿಗಳೊಂದಿಗೆ ಪಯಣದ ಆನಂದವನ್ನು ಅನುಭವಿಸಿದ ರಾಜಕುಮಾರ ಭೋಜ.

# ಗುರುಕುಲದಲ್ಲಿ

ಚಿನ್ನದ ರಥದಿಂದ ರಾಜಗುರುಗಳು ಹಾಗೂ ಅವರ ಶಿಷ್ಯರು ಇಳಿಯುತ್ತಿದ್ದಂತೆಯೇ ಭೋಜರಾಜನು ಸಹ ರಥದಿಂದಿಳಿದನು.

ಆ ರಾಜರಥವನ್ನು...... ರಾಜಕುಮಾರ ಭೋಜನನ್ನು ಕಂಡು ಮಹಾ ಕುತೂಹಲಿ ಸಂತೋಷಭರಿತರಾದ ಗುರುಕುಲದ ಋಷಿ ಮಾತೆಯರು.... ಋಷಿ ಪತ್ನಿಯರು... ಋಷಿ ಕನ್ಯೆಯರು......... ವಿದ್ಯಾಭ್ಯಾಸಕ್ಕಾಗಿ ನಾನಾದೇಶಗಳಿಂದ ಬಂದಿದ್ದ ನೂರಾರು ವಿದ್ಯಾರ್ಥಿಗಳು ರಾಜಕುಮಾರ ಭೋಜನಿದ್ದ ಸ್ಥಳಕ್ಕೆ ಧಾವಿಸಿ ಬಂದರು - ಬ್ರಹ್ಮ ತೇಜಸ್ಸಿನಿಂದಲೂ ಕೂಡಿದ ಬಾಲಕ ಭೋಜನನ್ನು ಕಂಡು ಮಂತ್ರಮುಗ್ಧರಾದರು.

ನೋಡಿದ ಮಾತ್ರಕ್ಕೆ ಪರಮಾಶ್ಚರ್ಯವನ್ನುಂಟು ಮಾಡುವಂತಹ..... ಎಂಬತ್ತೈದು ವರ್ಷಗಳು ಮೀರಿದ್ದರೂ ಸಹ ಕೊಂಚವೂ ಸಹ ಹುರುಪು ಉತ್ಸಾಹ ಕುಗ್ಗದ........... ಕಾಂತಿಯುಕ್ತ ದೇಹದಿಂದ ಕೂಡಿದ ಮುಪ್ಪಿನ ಮುತ್ತೈದೆಯಾಗಿ ಶೋಭಿಸುತ್ತಿದ್ದ ರಾಜಗುರುಗಳ ಪತ್ನಿಯು ಬಾಲಕ ಭೋಜನ ಬಳಿಗೆ ಬಂದು, ಬಹು ಪ್ರೀತಿಯಿಂದ, ತಲೆ ನೇವರಿಸುತ್ತಾ ಮಮತೆಯಿಂದ, "ಮಗು ಭೋಜ...... ದೂರದಿಂದ ಬಂದ ನಿನಗೆ ಆಯಾಸವಾಗಿದೆಯೆ? ಹಸಿವಾಗುತ್ತದೆಯೆ? ಕುಡಿಯಲು ಹಾಲು ತಂದು ಕೊಡಲೆ? ತಿನ್ನಲು ಹಣ್ಣು ಏನಾದರೂ............. " ಎಂದು ತುಂಬು ಹೃದಯದಿಂದ ಕೇಳಿದರು.

ಆ ವೃದ್ಧ ಮಾತೆಯ ಅಮೃತ ವಾಣಿಯಿಂದಲೇ ಸಂತುಷ್ಟನಾದ ಭೋಜನು ಆ ಮಹಾತಾಯಿಯ ಪಾದವನ್ನು ತನ್ನೆರಡು ಪುಟ್ಟ ಕೋಮಲ ಕೈಗಳಿಂದ ಮುಟ್ಟಿ ನಮಸ್ಕಾರ ಮಾಡುತ್ತ, ತನ್ನ ಸುತ್ತಲು ನೆರೆದಿದ್ದ ಎಲ್ಲರನ್ನೊಮ್ಮೆ ದಿವ್ಯವಾಗಿ ನೋಡುತ್ತ "ಈಗ ನನಗೆ ಏನು ಬೇಡ ಮಾತೆ, ನನಗೆ ಈಗ ಯಾವ ರೀತಿಯ ಹಸಿವು ಆಗುತ್ತಿಲ್ಲ, ನಿಮ್ಮೆಲ್ಲರನ್ನು ನೋಡಿದ ಮಾತ್ರದಿಂದಲೇ ನನ್ನ ಹಸಿವು ಬಾಯಾರಿಕೆಯ ಬಾಧೆಗಳು ಇಲ್ಲವಾಗಿದೆ. ನಿಮ್ಮೆಲ್ಲರನ್ನು ಕಂಡು ತುಂಬ ಸಂತೋಷವಾಗುತ್ತಿದೆ ನನಗೆ". ಎಂದು ತನ್ನ ಮುದ್ದಾದ ನುಡಿಗಳಿಂದ ನುಡಿದ ಭೋಜ.

ಆಗ ಅಲ್ಲಿದ್ದ ಎಲ್ಲರಿಗೂ ಹೃದಯಕ್ಕೆ ಅಮೃತಧಾರೆ ಎರೆದಂತಾಗಿ ಪರಮಾನಂದಭರಿತರಾದರು.

ಅಲ್ಲಿಯೇ ಇದ್ದ ರಾಜಗುರುಗಳು ಭೋಜನ ಸಮೀಪಕ್ಕೆ ಬಂದು ತಮ್ಮ ದಿವ್ಯ ಹಸ್ತದಿಂದ ಮಸ್ತಕವನ್ನು ನೇವರಿಸಿ ಮಧುರನುಡಿಗಳಿಂದ ಮಾತನಾಡುತ್ತ "ಮಗು ಭೋಜ....... ಈಗ ನೀನು ವಿಶ್ರಾಂತಿ ತೆಗೆದುಕೊ........ ನಾಳೆ ಬೆಳಿಗ್ಗೆ ಬ್ರಾಹ್ಮೀ ಮುಹೂರ್ತಕ್ಕೆ ಸರಿಯಾಗಿ ಪಾಠವನ್ನು ಪ್ರಾರಂಭ ಮಾಡುತ್ತೇನೆ" ಎಂದರು.

ರಾಜಗುರುಗಳ ಹಿತನುಡಿಗೆ ತಲೆಬಾಗಿ ನುಡಿಯುತ್ತ "ಹಾಗೆಯೇ ಆಗಲಿ ಗುರುದೇವಾ" ಎಂದು ವಂದಿಸಿದ.

ಭೋಜನ ಗುರುಕುಲ ಪ್ರಯಾಣದಲ್ಲಿ ಮಹಾರಾಜರು ರಕ್ಷಣೆಯ ದೃಷ್ಟಿಯಿಂದ ತನ್ನ ತಮ್ಮ ಮತ್ತು ಆತನ ಪತ್ನಿ ಭಾನುಮತಿಯನ್ನು ಜೊತೆಯಲ್ಲಿ ಕಳುಹಿಸಿದ್ದನು. ತಾಯಿ ಆದವಳು ಅಲ್ಲಿಯ ತನಕ ಪ್ರಯಾಣ ಮಾಡಲು ಸಾಧ್ಯವಾಗದುದಕ್ಕೆ ಚಿಕ್ಕಮ್ಮನಾದರೂ ಜೊತೆಯಲ್ಲಿ ಇರಲಿ ಎಂದೇ ಹಾಗೆ ಏರ್ಪಾಡು ಮಾಡಲಾಗಿತ್ತು. ಗುರುಕುಲದ ಅತಿ ಸನಿಹದಲ್ಲೆ ಅವರ ಬಿಡಾರವಿತ್ತು.

ಗುರುಕುಲದಲ್ಲಿ ಭೋಜನಿಗೆ 'ಮಾತೃ ದೇವೋಭವ' ಎಂಬಂತೆ ಭಾನುಮತಿಯೇ ಭೋಜನ ಪಾಲಿಗೆ ಪ್ರಥಮ ದೇವರಾಗಿದ್ದಳು. ಭೋಜನ ಮೇಲಿನ ಅಪಾರವಾದ ಮಮತೆಯನ್ನು ಮಹಾಮಂತ್ರಿಯಲ್ಲಿ ತೋಡಿಕೊಂಡಿವಳಾಗಿ "ತನ್ನ ಮಗನಾದ ಭೋಜನು ವಿದ್ಯಾಭ್ಯಾಸಕ್ಕಾಗಿ ಗುರುಕುಲ ವಾಸಕ್ಕೆ ಹೋದರು ಸಹ ಅಲ್ಲಿಯೂ ಸಹ ಅವನಿಗೆ, ಪ್ರತಿನಿತ್ಯ ತನ್ನ ಅರಮನೆಯಲ್ಲಿ ನಡೆಯುವ ವೈಭವ ಪದ್ಧತಿಯಂತೆ, ಊಟೋಪಚಾರಗಳಲ್ಲಿಯೇ ಆಗಲಿ - ನಿದ್ರೆಯಲ್ಲಿಯೇ ಆಗಲಿ - ಆಟಪಾಠಗಳಲ್ಲಿಯೇ ಆಗಲಿ - ಕಾಲಾಕಾಲಕ್ಕೆ ಸರಿಯಾಗಿ ಯಾವುದಕ್ಕೂ ಕೊರತೆ ಇಲ್ಲದ ಹಾಗೆ ನಡೆಯಬೇಕೆಂಬ ಬಯಕೆಯಿಂದ, ಮಾತೃವಾತ್ಸಲ್ಯದಿಂದ ಮಹಾರಾಣಿಯವರು ನೀಡಿದ ಆದೇಶವನ್ನು ಶಿರಸಾವಹಿಸಿ ಅನುಭವಿ ರಾಜಸೇವಕರಿಂದ ಗುರುಕುಲಕ್ಕೆ ಅತಿ ಸಮೀಪವೂ ಅಲ್ಲದ ಅತಿ ದೂರವೂ ಅಲ್ಲದ ಒಂದು ರಮ್ಯ ಮನೋಹರ ಪ್ರದೇಶದಲ್ಲಿ ಎಲ್ಲ ರೀತಿಯ ಸೌಕರ್ಯವಿರುವ ಹಾಗೆ ಸಾಕಷ್ಟು ವಿಸ್ತಾರವಾಗಿ ಬಹುವಾಗಿ ರಾಜಿಸುವಂಥ ಆಕರ್ಷಕ ಬಣ್ಣ ಬಣ್ಣಗಳಿಂದ ಕೂಡಿದ್ದ 'ರಾಜ ಬಿಡಾರ' ವನ್ನು ನಿರ್ಮಾಣ ಮಾಡಿಸಿದ್ದನು. ಆ ರಾಜ ಬಿಡಾರವು ಹಂಸತೂಲಿಕತಲ್ಪದಿಂದಲೂ ನಿಲುವುಗನ್ನಡಿ, ಬಗೆ ಬಗೆಯ ಚಿತ್ರಚಿತ್ರಿತ ಪೀಠೋಪಕರಣಗಳಿಂದಲೂ ನಾಲ್ಕಾರು ವಿಶಾಲವಾದ ಅಲಂಕೃತ ಕೊಠಡಿಗಳಿಂದಲೂ, ಅಡಿಗೆ ಶಾಲೆ, ಸ್ನಾನದ ಮನೆ ಮುಂತಾದ ಎಲ್ಲ ರೀತಿಯ ಸೌಕರ್ಯವಿರುವ ಹಾಗೆ ನಿರ್ಮಾಣಮಾಡಿಸಿದ್ದರು ಮಹಾಮಂತ್ರಿಗಳು. ಅಷ್ಟು ಮಾತ್ರವೇ ಅಲ್ಲದೆ, ಆ ರಾಜಶಿಬಿರವನ್ನು ಸದಾ ಕಾಯಲು ಸಮವಸ್ತ್ರ ಸಶಸ್ತ್ರಧಾರಿಗಳಾದ ರಾಜಭಟರು ಅಡಿಗೆಯವರು ಪರಿಚಾರಕರು, ಪ್ರತಿದಿನ ಗುರುಕುಲಕ್ಕೆ ಹೋಗಿ ಬರಲು ಚಿನ್ನದ ರಥ, ಕುದುರೆಗಳು ವಿಶಿಷ್ಟವಾದ ರಾಜಭೋಗಗಳು ಸಿದ್ಧವಾಗಿತ್ತು.

ಆದರೆ ಭೋಜನಾದರೂ "ವಿದ್ಯಾತುರಾಣಾಂ ನ ಸುಖಂ ನ ನಿದ್ರಾ" ಎಂಬ ಹಿರಿಯೋಕ್ತಿಯಂತೆ ಗುರುಕುಲಕ್ಕೆ ವಿದ್ಯಾಭ್ಯಾಸಕ್ಕಾಗಿ ಬಂದ ಅವನಿಗೆ ಅದೊಂದು ಬೇಡವಾಗಿತ್ತು.

ಭೋಜನ ಯೋಗಕ್ಷೇಮವನ್ನು ನೋಡಿಕೊಳ್ಳುವುದಕ್ಕಾಗಿಯೇ ನೇಮಿಸಲಾಗಿದ್ದ ಇಬ್ಬರು ಪ್ರಮುಖ ಅಂಗರಕ್ಷಕರು ಅವನ ಬಳಿಗೆ ಬಂದು ವಿನಯವನ್ನು ಸೂಸುತ್ತ "ಯುವರಾಜರಿಗೆ ಜಯವಾಗಲಿ..... ತಾವೀಗ ರಾಜಬಿಡಾರಕ್ಕೆ ದಯಮಾಡಿಸಬೇಕು, ಅಲ್ಲಿ ತಮಗಾಗಿ ಎಲ್ಲ ಸಿದ್ಧತೆಗಳು ಏರ್ಪಾಟಾಗಿದೆ" ಎಂದರು.

ಆಗ ಭೋಜನು ರಾಜಭಟರೊಂದಿಗೆ ವಿನಯವಾಗಿ ನುಡಿಯುತ್ತ "ಎಲೈ ರಾಜಭಟರೆ, ನಾನು ಇಲ್ಲಿಗೆ ಬಂದಿರುವುದು ವಿದ್ಯೆಯನ್ನು ಕಲಿಯುವುದಕ್ಕೋಸ್ಕರವೇ ಹೊರತು, ಪುಷ್ಕಳವಾದ ರಾಜಭೋಜನವನ್ನುಂಡು ಹಾಯಾಗಿ ಮಲಗುವುದಕ್ಕೋಸ್ಕರವಲ್ಲ - ನೀವು ಇಲ್ಲಿಂದ ಹೊರಟು ಹೋಗಿ, ನಾನು ಈ

ಗುರುಕುಲದಲ್ಲಿಯೇ ಇರುತ್ತೇನೆ. ನನ್ನ ಈ ಮಾತೆಯ ಬಳಿಯಲ್ಲಿಯೆ ಇರುತ್ತೇನೆ" ಎಂದು ಅಲ್ಲಿಯೇ ಇದ್ದ ಸುಂದರವಾದ ಕರು ಒಂದು ತಾಯಿ ಹಸುವನ್ನು ಮುದ್ದಿಸುತ್ತಿದ್ದ (ನೆಕ್ಕುತ್ತಿದ್ದ) ಹಸುಕರುವನ್ನು ನೋಡುತ್ತ ನುಡಿದ ಪ್ರಜ್ಞಾವಂತನಾದ ಭೋಜ.

ಆ ರಾಜಭಟರು ಮರುಮಾತನಾಡದೆ ರಾಜಭಕ್ತಿಯಿಂದ ವಂದಿಸಿ ಹೊರಟು ಹೋದರು.

ಭೋಜನು ರಾಜಗುರುವಿನ ವೃದ್ಧ ಧರ್ಮಪತ್ನಿಯೊಡನೆ ಅವರು ವಾಸಿಸುತ್ತಿದ್ದ ಪರ್ಣ ಕುಟೀರಕ್ಕೆ ಹೊರಟನು.

ಅಲ್ಲಿ ರಾತ್ರಿ ಮಿತವಾದ ಫಲ ಆಹಾರಾಧಿಗಳನ್ನು ಮುಗಿಸಿದ ಭೋಜನು ತಾನೊಬ್ಬ ಮಹಾವಿದ್ಯಾವಂತನಾಗಬೇಕೆಂಬ ತೀವ್ರ ಆಸೆಯಿಂದ ಆ ದಿನಗಳನ್ನು ಎದುರು ನೋಡುತ್ತ, ಚಾಪೆಯ ಮೇಲೆ ತನ್ನ ತೋಳನ್ನ ಆಸರೆಯಾಗಿಟ್ಟು ಮಲಗಿದ. ದೂರ ಪ್ರಯಾಣದ ಆಯಾಸವಾಗಿದ್ದರಿಂದ ಬಹಳ ಬೇಗ ನಿದ್ರಾಪರವಶನಾದ.

ಗುರುಗಳೆ ಅವನಿಗೆ ಮೇಲು ಹೊದಿಕೆಯನ್ನು ಹೊದಿಸಿದರು.

ಆಗ ಗುರುಗಳು ತನ್ನ ವೃದ್ಧ ಪತ್ನಿಯೊಡನೆ ಹೇಳುತ್ತ "ಆಹಾ ಭಾರ್ಯೆ! ನೋಡು. ಈ ಹಸುಗಂದನಾದ ಪ್ರಜ್ಞಾಗುಣವುಳ್ಳ ಭೋಜನು ಹೇಗೆ ಮಲಗಿದ್ದಾನೆ........ ಅಲ್ಲಿ ಅರಮನೆಯ ರಾಜವೈಭವದಲ್ಲಿ ಹಂಸತೂಲಿಕಾತಲ್ಪದಲ್ಲಿ ಮಲಗಿ ನಿದ್ರಿಸಬೇಕಾದವನು ಇಂದು ಈ ನಮ್ಮ ಜೋಪಡಿಯಲ್ಲಿ (ಗುಡಿಸಲು) ಕೇವಲ ಚಾಪೆಯ ಮೇಲೆ ಮಲಗಿ ನಿದ್ರಿಸುತ್ತಿದ್ದಾನೆ............ ಈ ಬಾಲಕನ ಗುಣ ಎಂತಹ ವೈರಾಗ್ಯ ಗುಣ. ಅಲ್ಲಿ ಇವನ ತಾಯಿ ಒಂದು ದೇಶದ ಮಹಾರಾಣಿ. ಇವನ ಸುಖಕ್ಕೋಸ್ಕರ ಸಕಲ ರಾಜಭೋಗವನ್ನು ಏರ್ಪಾಡು ಮಾಡಿಸಿದಳು. ಅದೆಲ್ಲವನ್ನು ನಿರಾಕರಿಸಿ ಇಲ್ಲಿಯೇ ಬಂದಿರುವನು. ಈತನ ಭವಿಷ್ಯ ಬಹು ಉಜ್ವಲ ಭವಿಷ್ಯವಾಗಬಲ್ಲದು" ಎಂದು ಪತ್ನಿಯೊಡನೆ ಭೋಜನ ಗುಣಗಾನ ಮಾಡಿದರು. ನಿದ್ರಾದೇವಿ ಎರಿದಂತೆ ನಿದ್ರೆಯಲ್ಲಿ ತಲ್ಲೀನರಾದರು ಆ ಗುರುದಂಪತಿಗಳು.

ಬ್ರಾಹ್ಮೀ ಮುಹೂರ್ತಕ್ಕೆ ಸರಿಯಾಗಿ ನದಿಯ ಸ್ನಾನಕ್ಕೆ ಹೊರಡಲನುವಾದರು ಗುರುಗಳು. ವಿಶ್ವಾಮಿತ್ರನನ್ನನುಸರಿಸಿ ಹೊರಟ ಶ್ರೀ ರಾಮನಂತೆ ಗುರುಗಳನ್ನು ಹಿಂಬಾಲಿಸಿ ತಾನು ಸಹ ನದಿಗೆ ತೆರಳಿದ್ದ ಭೋಜ.

--

# ರಾಜದಂಪತಿಗಳು ಗುರುಕುಲದಲ್ಲಿ

ಭೋಜನು ವಿದ್ಯಾಭ್ಯಾಸಕ್ಕಾಗಿ ಗುರುಕುಲಕ್ಕೆ ಹೋಗಿ ಎರಡು ವರ್ಷಗಳ ಕಳೆದಿತ್ತು.

ಅರಮನೆಯ ಅಂತಃಪುರದಲ್ಲಿದ್ದ ಮಹಾರಾಣಿ ಗುಣವತಿಗೆ ತನ್ನ ಮುದ್ದು ಕುವರನನ್ನು ಕಾಣುವ ಬಯಕೆ ದಿನದಿನಕ್ಕೂ ಅತಿಯಾಗಿ ಕಾಡುತ್ತಿತ್ತು. ಕನಸುಮನಸಿನಲ್ಲೂ ಅವನೇ ತುಂಬಿ ಹೋಗಿದ್ದ. ಆ ರೀತಿಯಾಗಿ ಚಡಪಡಿಸುತ್ತಿದ್ದ ಮಹಾರಾಣಿಯೂ ತನ್ನ ಆಪ್ತಸಖಿಯೊಡನೆ ಭೋಜನಿಗಾಗಿಯೇ ನಿರ್ಮಿಸಲಾಗಿದ್ದ ಚಿತ್ರ ಶಾಲೆಗೆ ಬಂದಳು. ಹಾಗೆ ಬಂದ ಅವಳು ಆ ವಿಶಾಲ ಚಿತ್ರಶಾಲೆಯನ್ನು ಸುತ್ತು ಹಾಕಿದಳು. ಆ ದಿನಗಳಲ್ಲಿ ಪ್ರತಿ ನಿತ್ಯವೂ ತನ್ನ ಜೊತೆಯಲ್ಲಿ ಬಂದು ಬಗೆಬಗೆಯ ಚೇಷ್ಟೆಗಳನ್ನು ಮಾಡುತ್ತಾ ಮುದ್ದು ಮುದ್ದು ಮಾತುಗಳಿಂದ ವಿನೋದವಾಗಿ ಸಂತೋಷ ಪಡಿಸುತ್ತಾ ಕುಣಿದು ಕುಪ್ಪಳಿಸುತ್ತಾ ನಕ್ಕು ನಲಿದಾಡುತ್ತಿದ್ದ ದಿನಗಳನ್ನು ನೆನಪಿಸಿಕೊಂಡಾಗ ಅವಳ ಹೃದಯ ಹಿಂಡಿದಂತಾಗುತ್ತಿತ್ತು. ಆ ನೆನಪುಗಳು ಮನ ಮಂದಿರವನ್ನು ಆಕ್ರಮಿಸಿಕೊಂಡಿತು.

ಆಗಲೂ ಸಹ ಭೋಜನು ಬಗೆ ಬಗೆಯ ವಿನೋದದ ಆಟ ಪಾಠಗಳಿಂದಲೂ ಕಣ್ಣಾಮುಚ್ಚಾಲೆ ಆಟಗಳಿಂದಲೂ ಮುದ್ದು ಮುದ್ದಾದ ಮಾತುಗಳಿಂದಲೂ ತನ್ನನ್ನು ಅನೇಕ ರೀತಿಯಲ್ಲಿ ಸಂತೋಷ ಪಡಿಸುತ್ತ ಓಡೋಡಿ ಬಂದು "ಅಮ್ಮ ಎತ್ತಿಕೊ ಅಮ್ಮ, ಗಗನದಲ್ಲಿ ಚಂದಾಮಾಮನ ತೋರಿಸುತ್ತೇನೆ ಎತ್ತಿಕೋಮ್ಮಾ" ಎಂದು ನೆನಪಿಸಿಕೊಂಡಂತೆಯೇ ಭ್ರಮಾಪೀಡಿತಳಾದಳು. ಆ ನಿರ್ಮಲ ಗಗನದತ್ತ ನೋಡಿ ಜ್ಞಾಪಿಸಿಕೊಂಡು ಪುತ್ರ ವ್ಯಾಮೋಹದಿಂದ ಪರಿತಪಿಸುತ್ತಿದ್ದಳು.

ಹೇಗಾದರೂ ಸರಿಯೇ. ಗುರುಕುಲಕ್ಕೆ ಹೋಗಿ ಭೋಜನನ್ನು ನೋಡಿಯೇ ತೀರಬೇಕೆಂದು ಸಂಕಲ್ಪಿಸಿದ್ದಳು. ಅದೇ ಗುಂಗಿನಲ್ಲಿ ತನ್ನ ಆಪ್ತ ಸಖಿ ಚಿತ್ರಲೇಖೆಯೊಡನೆ ಅಂತಃಪುರಕ್ಕೆ ಬಂದಳು. ತಾನು ಭೋಜನನ್ನು ನೋಡುವ ಹಂಬಲವನ್ನು ತನ್ನ ಪತಿರಾಯನಾದ ಸಿಂಧೂಲನಲ್ಲಿ ವಿಷಯ ತಿಳಿಸಲು ಮನಸ್ಕಳಾಗಿ ರಾಜ ಸೇವಕಿಯ ಮೂಲಕ ಮಹಾರಾಜರನ್ನು ಏಕಾಂತ ಮಂದಿರದಲ್ಲಿ ಕಾಣಲು ಆ ಸುದ್ದಿಯನ್ನು ಹೇಳಿ ಕಳುಹಿಸಿದಳು. ಅಪ್ಪಣೆಯನ್ನು ಹೊತ್ತ ರಾಜಸೇವಕಿ ಮಹಾರಾಜರ ಏಕಾಂತಭವನವನ್ನು ಪ್ರವೇಶ ಮಾಡಿ, ರಾಜಭಕ್ತಿಯಿಂದ ತಲೆಬಾಗಿ ವಿನಮ್ರಳಾಗಿ ವಿಷಯವನ್ನು ತಿಳಿಸುತ್ತಾ "ಮಹಾರಾಜರಿಗೆ ಜಯವಾಗಲಿ. ಮಹಾರಾಣಿಯವರು ತಮ್ಮನ್ನು ಕಾಣಲು ಬರುವುದಾಗಿ ತಿಳಿಸಿದ್ದಾರೆ" ಎಂದಷ್ಟೆ ನುಡಿದಳು. ಅಪ್ಪಣೆಗಾಗಿ ಕಾದು ನಿಂತಳು. ಪುಣ್ಯವಶಾತ್ ಆ ಸಮಯದಲ್ಲಿ ಸಿಂಧೂಲರಾಜನು ಸಹ ಮಹಾಮಂತ್ರಿಯೊಡನೆ ರಾಜಕಾರ್ಯ ಒಂದನ್ನು ಕುರಿತು ಸಮಾಲೋಚಿಸುತ್ತಿದ್ದನು. ರಾಜಸೇವಕಿಗೆ ಹೇಳುತ್ತ "ಬರಬಹುದು ಎಂದು ತಿಳಿಸು" ಎಂದು ಅಪ್ಪಣೆ ಮಾಡಿದರು.

ಮಹಾರಾಜರಿಂದ ಅಪ್ಪಣೆ ಹೊತ್ತು ನಿರ್ಗಮಿಸಿದ್ದಳು, ರಾಜಸೇವಕಿ.

ವಿಷಯವನ್ನರಿತ ಮಹಾ ಮಂತ್ರಿಗಳು ಸಹ ರಾಜರಿಗೆ ವಂದಿಸಿ ಹೊರಟುಹೋದರು.

ಮಹಾರಾಣಿ ಅಂತಃಪುರದಿಂದ ಮಹಾರಾಜರ ಏಕಾಂತ ಮಂದಿರಕ್ಕೆ ಪ್ರತ್ಯೇಕವಾದ ವಿಶೇಷ ದಾರಿ ಇತ್ತು. ಆ ದಾರಿಯಲ್ಲಿ ಮಹಿಳಾ ಸೇವಕಿಯರು ಮಾತ್ರವಲ್ಲದೆ, ಪುರುಷರು ಯಾರೊಬ್ಬರು ಸುಳಿಯುವಂತಿಲ್ಲ. ಮಹಾರಾಣಿಯವರು ಮಹಾರಾಜರನ್ನು ನೋಡಲು ಬಿಜಯಿಸುತ್ತಿರುವ ವಿಷಯ ತಿಳಿದಂತೆ, ಏಕಾಂತ ಮಂದಿರದ ಮಹಾದ್ವಾರದ ಕಾವಲು ಭಟರು ಯಾರೊಬ್ಬರೂ ಬಾರದ ಹಾಗೆ ಸೂಕ್ತ ಮುನ್ನೆಚ್ಚರಿಕೆ ಕ್ರಮ ಕೈ ಗೊಂಡಿದ್ದರು.

ಆಪ್ತಸಖಿ ಚಿತ್ರಲೇಖೆಯೊಂದಿಗೆ ಅಂತಃಪುರದಿಂದ ಹೊರಟು ವಿಶೇಷ ದಾರಿಯಲ್ಲಿ ರಾಜಮಂದಿರಕ್ಕೆ ಬಂದಳು ಮಹಾರಾಣಿ. ಚಿತ್ರಲೇಖೆಯು ಮಹಾರಾಣಿಯೊಂದಿಗೆ ಬಾಗಿಲವರೆಗೆ ಮಾತ್ರ ಬಂದು ಮತ್ತೆ ಮುಂದೆ ಹೆಜ್ಜೆ ಇಡಲಿಲ್ಲ, ರಾಜರನ್ನು ನೋಡಲು ಬಂದ ಮಹಾರಾಣಿಯವರ ಏಕಾಂತಕ್ಕೆ ತೊಂದರೆ ಆಗಬಾರದೆಂದೇ ಅವಳು ಹೊರಬಾಗಿಲಲ್ಲೇ ನಿಂತಳು. ರತ್ನಖಚಿತ ಪೀಠದಲ್ಲಿ ಕುಳಿತಿದ್ದ ಸಿಂಧೂಲನೂ ಸಹ ಆಗ ಹರ್ಷಚಿತ್ತನಾಗಿಯೇ ಇದ್ದನು.

ಸರ್ವಾಲಂಕಾರಭೂಷಿತಳಾಗಿ ಬಂದ ಪಟ್ಟದರಸಿಯನ್ನು ಕಂಡ ಸಿಂಧೂಲನಿಗೆ ಪರಮಾಶ್ಚರ್ಯವಾಯಿತು. ರಾಣಿಯೊಂದಿಗೆ ಸಂತೋಷದಿಂದಲೆ ಮಾತನಾಡುತ್ತ "ಏನು ಮಹಾರಾಣಿಯವರ ಸವಾರಿ ಇತ್ತ ಚಿತ್ತೈಸಿದೆ....... ಬಹುಶಹ ಮಹಾರಾಣಿಯವರಿಗೆ ಹುಟ್ಟಿದ ಹಬ್ಬ ಅಂತ ಕಾಣುತ್ತೆ, ಅದಕ್ಕಾಗಿ ಸಿಹಿ ಕೊಡಲು ಬಂದಿರುವ ಹಾಗೆ ಕಾಣುತ್ತಿದೆ" ತನ್ನ ಕೆನ್ನೆಯನ್ನೇ ಸವರಿಕೊಳ್ಳುತ್ತ ವಿನೋದವಾಗಿ ನುಡಿದ.

ಆಗ ಮಹಾರಾಣಿ ಹೃದಯಕ್ಕೆ ಕಚಗುಳಿ ಇಟ್ಟಂತಾಗಿತ್ತು....... ಆದರೆ ತಾನು ಬಂದಿರುವ ಉದ್ದೇಶವೇ ಬೇರೆಯಾಗಿತ್ತು.

"ಥೂ ಹೋಗೀಂದ್ರೆ....... ಈ ಗಂಡಸರಿಗೆ ಯಾವಾಗಲೂ ಅದೇ ಬಯಕೆ.......... ನನಗೇನು ಹುಟ್ಟಿದ ಹಬ್ಬವೂ ಅಲ್ಲ, ಪಟ್ಟದ ಹಬ್ಬವೂ ಅಲ್ಲ. ಈಗ ನಾನು ಬಂದಿರುವುದು.........." ಎಂದು ಮಾತನ್ನು ಅಷ್ಟಕ್ಕೆ ನಿಲ್ಲಿಸಿದಳು.

"ಏಕೆ ಸಂಕೋಚ ಹೇಳು"

"ಈಗ ನನಗೆ ನಿಮ್ಮ ಮುದ್ದಿನ ಮಗನನ್ನು ಕಾಣುವ ಆಸೆ ಅತಿಯಾಗಿದೆ........." ಎಂದು ಸಹಜವಾದ ನಾಚಿಕೆಯ ಸ್ವಭಾವದಿಂದಲೇ ಜಡೆ ತುದಿಯನ್ನು ತನ್ನ ಕೋಮಲ ಕಿರುಬೆರಳಿನಿಂದ ತಿರುವುತ್ತ ನುಡಿದಳು".

"ಓ, ಅಷ್ಟೇನಾ........ ವಿಷಯ" ಎಂದು ವಿಷಯ ಹಗುರವಾಗಿ ತಂದುಕೊಂಡವನಂತೆ ನಟಿಸುತ್ತಾ ನುಡಿದ.

"ಹೌದು ಹೌದು, ಆ ವಿಷಯ ಗಂಡಸರಾದ ನಿಮಗೆ ಹೇಗೆ ತಾನೆ ಗೊತ್ತಾಗಬೇಕು. ನೀವು ಒಂದು ಹೆಣ್ಣಾಗಿ, ಹೆತ್ತು ಹೊತ್ತು ಸಾಕಿ ಸಲುಹಿದ್ದರೆ ತಾನೆ ಆ ತಾಯಿ ಆದವಳ ಪುತ್ರವಾತ್ಸಲ್ಯ ಗೊತ್ತಾಗುವುದು" ಎಂದು ಮುಂಗೋಪ ತುಂಬಿದ ಸಿಟ್ಟಿನಿಂದ ಹೃದಯಕ್ಕೆ ನಾಟುವಂತೆ ಚುಚ್ಚಿ ಮಾತನಾಡಿದಳು - ಪುತ್ರನನ್ನು ಕಾಣು ಹಂಬಲದಿಂದ.

"ನಿನ್ನಂತೆ ಪುತ್ರವಾತ್ಸಲ್ಯ ನನಗೂ ಸಹ ಇದೆ. ಭೋಜನನ್ನು ಕಾಣುವ ಅಕ್ಕರೆ ಆಸೆ ನನಗೂ ಉಂಟಾಗಿದೆ. ಆದರೆ ಅನೇಕ ರಾಜಕಾರ್ಯಗಳಲ್ಲಿ ಮಗನನ್ನು ಕಾಣುವ ದಿನವನ್ನು ಮುಂದೂಡಿಕೊಂಡೇ ಬರುತ್ತಿದ್ದೆ. ಈಗ ನೀನೂ ನನಗೆ ಆ ವಿಷಯವನ್ನು ಜ್ಞಾಪಕಕ್ಕೆ ತಂದಿದ್ದೂ ಒಳ್ಳೆಯದೆ ಆಯಿತು. ಈ ಕೂಡಲೆ ಗುರುಕುಲಕ್ಕೆ ಹೋಗಲು ತಕ್ಕ ಏರ್ಪಾಟನ್ನು ಮಾಡಿಸುತ್ತೇನೆ ಆಗಬಹುದೆ"

"ತಡ ಮಾಡಬಾರದು. ಆದಷ್ಟು ಬೇಗನೆ ಏರ್ಪಾಡು ಮಾಡಬೇಕು. ನಾನಿನ್ನು ಬರುತ್ತೇನೆ."

"ಎಲ್ಲಿ.... ಅಂದ್ಹಾಗೆ ಹೇಗಿದ್ರೂ ಬರೋದು ಬಂದಿದ್ದೀರಿ. ಒಂದು ಸಿಹಿ............ನ್ನು ಕೊಟ್ಟು ಹೋಗಬಾರದೆ!?" - ಎಂದು ಮೋಹಕ ನಗೆ ಬೀರುತ್ತ ನುಡಿದ ಸಿಂಧೂಲರಾಜ.

"ಅದು ಗುರುಕುಲಕ್ಕೆ ಹೋಗಿ, ಮುದ್ದು ಕುವರ ಭೋಜನನ್ನು ನೋಡಿ ಬಂದ ನಂತರ" ಎಂದು ಹೇಳಿ ಹೊರಟೇ ಬಿಟ್ಟಳು.

ನಂತರ ಏಕಾಂತ ಮಂದಿರದಿಂದ ಹೊರಗೆ ಬಂದ ಅವಳು,

"ಛೆ ಛೆ.... ನಾನೆಂತಹ ತಪ್ಪು ಮಾಡಿಬಿಟ್ಟೆ. ಅವರು ಕೇಳಿದ ಸಿಹಿ ಕೊಟ್ಟು ಬಂದಿದ್ದರೆ ಅದೆಷ್ಟು ಸಂತೋಷ ಪಡುತ್ತಿದ್ದರು ಅವರು" ಎಂದು ನೊಂದು ನುಡಿದುಕೊಂಡಳು. ಸಿಹಿ ಮುತ್ತು ಕೊಡಲು ಪುನಹ ರಾಜಮಂದಿರದೊಳಗೆ ಹೋಗಲು ಅಪೇಕ್ಷಿಸಿದಳು. ಆದರೆ ಅಷ್ಟರಲ್ಲೆ ಆಪ್ತಸಖಿ ಚಿತ್ರಲೇಖೆ ಅವಳನ್ನು ಸಮೀಪಿಸಿ ಬಂದು ಬಿಟ್ಟಿದ್ದಳು.

ಸಿಹಿಮುತ್ತನ್ನೇ ಮನದಲ್ಲಿ ಮೆಲುಕು ಹಾಕುತ್ತಾ ಅಂತಃಪುರವನ್ನು ಸೇರಿದ್ದಳು ಮಹಾರಾಣಿ ಗುಣವತಿ.

ಸಿಂಧೂಲರಾಜನು ಪೂರ್ವಯೋಜಿತವಾಗಿ ತನ್ನ ಪತ್ನಿ ಪರಿವಾರದೊಂದಿಗೆ ಗುರುಕುಲಕ್ಕೆ ಹೋಗುವುದಕ್ಕೆ ಮರುದಿನ ಮುಂಚಿತವಾಗಿಯೆ ಅರಮನೆಯ ಮಹಾಮಂತ್ರಿಗಳನ್ನು, ರಾಜಪುರೋಹಿತರನ್ನು, ಹಾಗೂ ರಾಜನ ಸಹೋದರ ಮುಂಜರಾಜನನ್ನು ತನ್ನ ಏಕಾಂತ ಮಂದಿರಕ್ಕೆ ಕರೆಸಿಕೊಂಡು ಪ್ರಯಾಣಕ್ಕೆ ಸಕಲ ಸಿದ್ಧತೆಗಳನ್ನು ಏರ್ಪಾಡು ಮಾಡುವಂತೆಯೂ ಜೊತೆಯಲ್ಲಿ ಅವರುಗಳು ಬರುವಂತೆಯೂ ಆಜ್ಞಾಪಿಸಿದನು. ಅಷ್ಟೇ ಅಲ್ಲದೆ, ಗುರುಕುಲಕ್ಕೆ ಪ್ರಯಾಣ ಮಾಡುವ ಸುದ್ಧಿಯನ್ನು ವಾರ್ತಾವಾಹಿಗಳ ಮೂಲಕ ಸೂಕ್ತ ರೀತಿಯಾಗಿ ಎಲ್ಲ ಕಡೆಗೂ ಬೇಗ ಮುಟ್ಟಿಸುವಂತೆಯೂ ಆಜ್ಞಾಪಿಸಿದನು. ಅದರಂತೆ ಮಹಾಮಂತ್ರಿಯು ವಾರ್ತಾವಾಹಿ

ರಾಜದೂತರನ್ನು ಡಂಗೂರಕಾರರನ್ನು ಕಳುಹಿಸಿಕೊಟ್ಟು, ಧಾರಾನಗರದಿಂದ ಗುರುಕುಲ ಆಶ್ರಮದವರೆವಿಗೆ ಮಾರ್ಗದ ಮಧ್ಯೆ ಸಿಗುವ ಎಲ್ಲಾ ಹಳ್ಳಿ ಊರು ಪಟ್ಟಣಗಳಿಗೆ ಹಾಗೂ ಗುರುಕುಲಕ್ಕೆ ರಾಜರ ಆಗಮನದ ಸುದ್ದಿಯನ್ನು ಪ್ರಚಾರಿಸುವಂತೆ ಆಜ್ಞೆ ಮಾಡಿದ್ದನು.

ಅವರಂತೆ ವಾರ್ತಾವಾಹಿಗಳು ಹಾಗೂ ಡಂಗೂರಕಾರರು ಅಶ್ವಾರೂಢರಾಗಿ ಪ್ರಯಾಣ ಬೆಳಸಿ, ಎಲ್ಲಾ ಊರು ಪಟ್ಟಣಗಳಿಗೂ ಡಂಗೂರ ಹೊಡೆಸಿ ರಾಜರು ಬಿಜಯಿಸುವ ಸುದ್ದಿಯನ್ನು ಮುಂದಾಗಿ ಪ್ರಚಾರ ಮಾಡಿದ್ದರು.

ಗುರುಕುಲಕ್ಕೆ ಹೊರಡುವ ಆ ದಿನ ಅರಮನೆಯ ಮಹಾದ್ವಾರದ ಮುಂದೆ ಮೂರು ಚಿನ್ನದ ರಥಗಳು ಸಿದ್ಧವಾಗಿ ನಿಂತಿತು. ಮುಂದೆ ಇದ್ದ ರಾಜರಥವು ರಾಜಲಾಂಛನದಿಂದ ಶೋಭಿಸುತ್ತಿತ್ತು. ಸಕಾಲಕ್ಕೆ ಸರಿಯಾಗಿ ಆಗಮಿಸಿದ ರಾಜದಂಪತಿಗಳು ಮುಂದಿನ ರಥದಲ್ಲಿ ಕುಳಿತರು. ಆದರಂತೆ ಹಿಂದಿದ್ದ ರಥದಲ್ಲಿ ಮಹಾಮಂತ್ರಿ ಹಾಗೂ ರಾಜಕುಲ ಗುರುಗಳು ಆಸೀನರಾದರು.

ಅದರಂತೆ ಮುಂಜರಾಜನು ಸಹ ತನ್ನ ಪತ್ನಿ ಭಾನುಮತಿಯೊಂದಿಗೆ ರಥದಲ್ಲಿ ಬಂದು ಕುಳಿತನು.

ಅಶ್ವರೋಹಿ ಕಾವಲು ಭಟರು ಸಹ ಸಶಸ್ತ್ರ ಸಮವಸ್ತ್ರಧಾರಿಗಳಾಗಿ ಈಟಿ ಹಿಡಿದು ರಥಗಳು ಹಿಂದೆ ಮುಂದೆ ಸಿದ್ಧರಾಗಿದ್ದರು.

ನಿಶ್ಚಿತ ಸಮಯಕ್ಕೆ ಸರಿಯಾಗಿ ಮೂರು ರಥಗಳು ಗುರುಕುಲದತ್ತ ಪ್ರಯಾಣ ಬೆಳೆಸಿದವು.

ಸಾಕಷ್ಟು ವೇಗವಾಗಿಯೇ ಸಾಗುತ್ತಿದ್ದ ಆ ಚಿನ್ನದ ರಾಜರಥವು ಧಾರಾನಗರವನ್ನು ಹಿಂದಕ್ಕೆ ಹಾಕಿ ಮುಂದೆ ಮುಂದೆ ಸಾಗುತ್ತಿತ್ತು. ರಥದ ಹಿಂದೆ ಮುಂದೆ ಸಶಸ್ತ್ರ - ಸಮವಸ್ತ್ರಧಾರಿಗಳಾದ ಅಂಗರಕ್ಷದಳದ ರಾಜಭಟರುಗಳು ಅಶ್ವಾರೂಢರಾಗಿ, ಬಹು ಎಚ್ಚರಿಕೆಯಿಂದ ಆ ಪ್ರದೇಶದ ಸುತ್ತಲೂ ಗಮನಿಸುತ್ತ ಸಾಗುತ್ತಿದ್ದರು. ಆ ರಾಜಭಟರುಗಳಾದರೋ ಆ ಕಾಲಕ್ಕೆ ತಕ್ಕಹಾಗೆ ಎಂಟು ಅಡಿ ಎತ್ತರ ಉಳ್ಳವರಾಗಿಯೂ, ಸ್ಫುರದ್ರೂಪಿಗಳಾಗಿಯೂ, ದಷ್ಟಪುಷ್ಟರಾಗಿಯೂ, ಆಕರ್ಷಣೀಯವಾಗಿ ಕಾಣುತ್ತಿದ್ದರು. ಭೀಮದೇಹಕ್ಕೆ ತಕ್ಕಂತೆ ಮುಖದ ಮೇಲೆ ಮೀಸೆ ಬಿಟ್ಟಿದ್ದರು. ಇದರಿಂದ ಅವರುಗಳು ಮತ್ತಷ್ಟು ಪ್ರಬಲರಾಗಿ ಕಾಣುತ್ತಿದ್ದರು.

ರಾಜರಥದ ಹಿಂದೆಯೇ ಮಹಾಮಂತ್ರಿ ರಾಜಕುಲಗುರುಗಳು ಉಪಸ್ಥಿತರಿದ್ದ ರಥ ಹಾಗೂ ರಾಜ ಸಹೋದರನಾದ ಮುಂಜರಾಜ ಪತ್ನಿ ಭಾನುಮತಿ ಇವರುಗಳಿಂದ ಕೂಡಿದ ರಥಗಳು ಹಿಂಬಾಲಿಸುತ್ತಿದ್ದವು.

ಆ ಎರಡು ರಥಗಳಿಗೂ ಸಹ ಅಶ್ವಾರೋಹಿ ಅಂಗರಕ್ಷಕರು ಬೆಂಗಾವಲಾಗಿ ಸಾಗುತ್ತಿದ್ದರು.

ಮಾರ್ಗದ ಮಧ್ಯೆ ಅಲ್ಲಲ್ಲೆ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತಿದ್ದ ಮುಗಿಲೆತ್ತರದ ಗಿರಿಧಾಮಗಳು........ ಸುಂದರ ಪುಷ್ಕರಣಿಗಳು......... ಕೊಳಗಳು.....

ದೊಡ್ಡ ದೊಡ್ಡ ಬಂಡೆಗಳಿಂದ ಕೂಡಿದ್ದ ಬೆಟ್ಟ ಗುಡ್ಡಗಳು. ಬೆಟ್ಟದ ಬುಡಗಳಲ್ಲಿ ಕಾಣಬರುತ್ತಿದ್ದ ವಿಶಾಲವಾದ ಕೆರೆ ಕುಂಟೆಗಳು. ದಟ್ಟವಾಗಿ ಬೆಳೆದು ಕಂಗೊಳಿಸುತ್ತಿದ್ದ ಬಗೆಬಗೆಯ ಫಲಪುಷ್ಪ ಗಿಡಮರಗಳಿಂದ ಕೂಡಿದ್ದ ಪ್ರಕೃತಿ ಸೌಂದರ್ಯದ ಸಿರಿಸೊಬಗನ್ನು ಸವಿಯುತ್ತ ಮುಂದೆ ಮುಂದೆ ಸಾಗುತ್ತಿದ್ದರು.

ಪಂಜರದ ಗಿಳಿಯಂತೆ ಅರಮನೆಯ ಅಂತಃಪುರದಲ್ಲಿಯೇ ಸದಾಕಾಲವು ಕಾಲಕಳೆಯುತ್ತಿದ್ದ ಮಹಾರಾಣಿಗೆ ಆ ನೋಟ ಎಂದಿಲ್ಲದ ಸ್ವರ್ಗ ಸಂತೋಷವನ್ನುಂಟು ಮಾಡುತ್ತಿತ್ತು. ಆದಾಗ್ಯೂ ಸಹ ಮಹಾರಾಣಿ ಗುಣವತಿಯ ಮನಸ್ಸು........ "ಗುರುಕುಲ ಇನ್ನೂ ಎಷ್ಟು ದೂರವಿದೆ? ಎಷ್ಟು ಹೊತ್ತಿಗೆ ಸೇರುತ್ತೇವೆ? ಯಾವಾಗ ತನ್ನ ಸುಕುಮಾರನಾಡ ಭೋಜನನ್ನು ಕಣ್ತುಂಬ ನೋಡಿ ಆನಂದಿಸುತ್ತೇನೆ? ಅವನನ್ನು ಅಪ್ಪಿ ಬಿಗಿದಪ್ಪಿ ಮುತ್ತಿನ ಮಳೆಗರೆಯುವ ಸುಸಮಯ ಎಷ್ಟು ಹೊತ್ತಿಗೆ ಲಭಿಸುವುದೊ?" ಎಂದು ಹಂಬಲಿಸುತ್ತಲೇ ಇದ್ದಳು. ಕ್ಷಣ ಒಂದು ಯುಗವಾಗಿತ್ತು ಅವಳಿಗೆ.

ಒಮ್ಮೊಮ್ಮೆ ಪಕ್ಕದಲ್ಲಿಯೇ ಇದ್ದ ತನ್ನ ಪತಿದೇವರನ್ನು ಸಹ ಆತುರಾತುರಳಾಗಿ "ಗುರುಕುಲ ಇನ್ನೂ ಎಷ್ಟು ದೂರವಿದೆ. ಅಲ್ಲಿಗೆ ಯಾವಾಗ ಎಷ್ಟು ಹೊತ್ತಿಗೆ ತಲುಪುತ್ತೇವೆ" ಎಂದೆಲ್ಲ ಹಲವು ವಿಧದಲ್ಲಿ ಪ್ರಶ್ನೆಗಳ ಸುರಿಮಳೆಯನ್ನ ಸುರಿಸಿ ಬಿಡುತ್ತಿದ್ದಳು ಗುಣವತಿ.

ರಾಜರು ಮತ್ತು ರಾಜ ಪರಿವಾರದವರು ಆ ಮಾರ್ಗದಲ್ಲಿ ಬಿಜಯ ಮಾಡುತ್ತಾರೆ ಎಂದು ಆ ಮೊದಲೆ ತಿಳಿಸಿದ್ದರಿಂದ ಆ ಮಾರ್ಗದಲ್ಲಿ ಸಿಗುತ್ತಿದ್ದ ಪ್ರತಿಹಳ್ಳಿ........ ಊರು........ ಪಟ್ಟಣಗಳ ರಾಜರಸ್ತೆಯಲ್ಲಿ ಪ್ರಜೆಗಳು ಅತ್ಯುತ್ಸಾಹಭರಿತರಾಗಿ ತಮ್ಮ ತಮ್ಮ ಪಟ್ಟಣಗಳ ಹಾಗೂ ಗ್ರಾಮಗಳ ಮುಂದೆ ಹಸಿರು ಚಪ್ಪರ ಗೊನೆಬಾಳೆ ತಳಿರು ತೋರಣ ಪುಷ್ಪಗುಚ್ಛ ಪುಷ್ಪಾಹಾರಗಳಿಂದ ಬಹು ವರ್ಣನಾತೀತವಾಗಿ ಅಲಂಕರಿಸಿದ್ದರು. ಅಷ್ಟು ಮಾತ್ರವೇ ಅಲ್ಲದೆ ಪ್ರಜೆಗಳು ಪ್ರತ್ಯಕ್ಷ ದೇವರಿಗೆ ಸಮಾನಾದ ರಾಜರನ್ನು ರಾಜಮಾತೆಯರನ್ನು ಕಾಣಲು ಉತ್ಸಾಹದಿಂದ ಸಾಲುಗಟ್ಟಿ ನಿಂತಿದ್ದರು.

ಕೆಲವರು ರಜತ ತಟ್ಟೆ, ಬಂಗಾರದ ತಟ್ಟೆಗಳಲ್ಲಿ ಸುಗಂಧಿತ ಬಿಡಿ ಪುಷ್ಪಗಳನ್ನು ಹಿಡಿದು ನಿಂತಿದ್ದರು.

ರಾಜ ರಥಗಳು ಬರುತ್ತಿದ್ದಂತೆ ಅಮಿತೋತ್ಸಾಹದಿಂದ ಎಲ್ಲರೂ ಒಕ್ಕೊರಲಿನಿಂದ ಮುಗಿಲು ಮುಟ್ಟುವಂತೆ ವಿಜಯ ಧ್ವನಿ ಮೊಳಗಿಸುತ್ತಾ "ರಾಜ ಸಿಂಧೂಲರಾಜರಿಗೆ ಜಯವಾಗಲಿ, ಚಕ್ರವರ್ತಿ ಸಾರ್ವಭೌಮರಿಗೆ ಜಯವಾಗಲಿ" ಎಂದು ಹರ್ಷದಿಂದ ಕೂಗುತ್ತ ರಾಜರಿಗೆ ಇಮ್ಮಡಿಯ ಸಂತೋಷವನ್ನುಂಟು ಮಾಡುತ್ತಿದ್ದರು.

ಪ್ರಜೆಗಳ ರಾಜಭಕ್ತಿಗೆ ಹರ್ಷಿೀಭೂತನಾದ ಸಿಂಧೂಲರಾಜನು ವಿನಯಭೂಷಿತನಾಗಿ ರಾಜಗಾಂಭೀರ್ಯದಿಂದ ಪ್ರತಿಯೊಬ್ಬರಿಗೂ ಕೈ ಮುಗಿದು. ದರ್ಶನ ಕೊಟ್ಟು ಮುಂದೆ ಮುಂದೆ ಸಾಗುತ್ತಿದ್ದನು.

ಪ್ರಜೆಗಳಿಗೆ ಆದ ರಾಜ ದರ್ಶನ ಮರೆಯಲಾಗದ ಅನುಭವವಾಗಿತ್ತು.

ಮಹಾರಾಣಿ ಗುಣವತಿಯ ಆಸೆ ಆಕಾಂಕ್ಷೆ ಫಲಿಸಿತ್ತು ಎಂಬಂತೆ ರಾಜರಥಗಳು ಗುರುಕುಲ ಆಶ್ರಮಕ್ಕೆ ಬಂದು ಸೇರಿತು.

ಮಹಾರಾಜ ಸಿಂಧೂಲನು ಮತ್ತು ರಾಜಪರಿವಾರವು ಬಿಜಯಿಸಿ ಬರುವ ವಿಷಯ ಆ ಮುನ್ನವೇ ವಾರ್ತಾವಾಹಿಗಳಿಂದ ತಿಳಿದು ಬಂದಿದ್ದರಿಂದ, ಗುರುಕುಲದ ಮುಂದೆ ವಿಶೇಷ ರೀತಿಯಲ್ಲಿ ಆಕರ್ಷಕವಾದ ಹಸಿರು ಚಪ್ಪರ, ತಳಿರು ತೋರಣಗಳಿಂದಲೂ ಆಶ್ರಮವೆಂದು ಶೋಭಿಸುವ ಹಾಗೆ ಕಾವಿ ಬಣ್ಣದ ಸಾಲು ಬಾವುಟಗಳಿಂದಲೂ, ಸುಗಂಧ ಪುಷ್ಪಗುಚ್ಛ ಪುಷ್ಪಹಾರಗಳಿಂದಲೂ ಶೃಂಗಾರಮಯವಾಗಿ ಅಲಂಕರಿಸಿದ್ದರು.

ಆಕರ್ಷಕವಾದ ಬಹು ವಿಶಾಲವಾದ ಗುರುಕುಲದ ಮುಂದೆ ವೇದ ಸ್ವರೂಪರಾದ ಬ್ರಹ್ಮ ಜ್ಞಾನಿಗಳೇ ಆದ ಗುರುಕುಲದ ಗುರುಗಳು ತಮ್ಮ ಎಲ್ಲ ಶಿಷ್ಯರೊಂದಿಗೆ ಕಾದು ನಿಂತಿದ್ದರು. ಶಿಷ್ಯರ ಗುಂಪಿನಲ್ಲಿ ಬಹು ತೇಜಸ್ಸಿನಿಂದ ಕೂಡಿದ ರಾಜಕುಮಾರ ಭೋಜನೂ ಸಹ ನಿಂತಿದ್ದನು.

ರಥದಲ್ಲಿಯೇ ಕುಳಿತು ತನ್ನ ಸುಂದರ ಕುವರ ಭೋಜನನ್ನು ಹುಡುಕುತ್ತಿದ್ದ ಗುಣವತಿಯ ತೀಕ್ಷ್ಣವಾದ ಕಣ್ಣುಗಳು.......... ಭೋಜನು ಕಣ್ಣಿಗೆ ಬಿದ್ದಂತೆ ತಾನು ಕುಳಿತ ರಥದಿಂದ ಧುಮುಕಿ ಬಂದು ಅವನನ್ನು ಬರಸೆಳೆದು ಬಿಗಿದಪ್ಪಿ ಮುತ್ತಿನ ಮಳೆಗರೆಯುವಷ್ಟು ಆತುರ ಕಾತುರಳಾದಳು. ಆದರೆ ಏಕಾ ಏಕಿ ಹಾಗೆ ಮಾಡುವಂತಿಲ್ಲ, ತಾನಾದರೂ ಒಂದು ದೇಶದ ರಾಣಿ. ಆ ಬಂಧನದಿಂದಾಗಿ........ ಆ ರಸಘಳಿಗೆಗಾಗಿ ಕಾಯುತ್ತಿದ್ದಳು..... ಭೋಜನನ್ನು ತನ್ನ ಮಮತೆಯ ನುಡಿಗಳಿಂದ ಮಾತನಾಡಿಸಲು ಕ್ಷಣ ಕ್ಷಣಕ್ಕೆ ಮಿಡಿಯುತ್ತಿತ್ತು ಅವಳ ಮಾತೃ ಹೃದಯ. ಹಾಗೆಯೆ ನಿಟ್ಟುಸಿರು ಬಿಟ್ಟು, ಆ ಸುಯೋಗಕ್ಕಾಗಿ ಕಾತುರದಿಂದ ಕಾಯುತ್ತಿದ್ದಳು.

ರಾಜರಥವು ಗುರುಕುಲದ ಮುಂದೆ ಬಂದು ನಿಂತಂತೆ, ಪೂರ್ವಯೋಜಿತವಾದ ಮಂಗಳವಾದ್ಯಗಳು ಮೊಳಗಿದವು. ನೆರೆದಿದ್ದ ನೂರಾರು ವಿಪ್ರೋತ್ತಮರಿಂದ ಒಕ್ಕೊರಳ ಏಕಕಂಠದಿಂದ ಸುಶ್ರಾವ್ಯವಾದ ವೇದ ಘೋಷ ನೆರೆದಿದ್ದ ಎಲ್ಲ ರಾಜ ಪರಿವಾರದವರ ಹಾಗೂ ತುಂಬಿ ನೆರೆದಿದ್ದ ಎಲ್ಲ ಆಶ್ರಮವಾಸಿಗಳಿಗೆ ಕರ್ಣಾನಂದವನ್ನುಂಟು ಮಾಡಿತ್ತು.

ಗುರುಕುಲದ ಮುಂದೆಯ ಶಿಸ್ತಿನಿಂದ ಸಾಲುಗಟ್ಟಿ ನಿಂತಿದ್ದ ಎಲ್ಲ ವಿದ್ಯಾರ್ಥಿಗಳು ಮಹಾರಾಜ ಸಿಂಧೂಲನನ್ನು ಕಂಡು ಮಹದಾನಂದ ಪರವಶರಾಗಿ ಬಿಟ್ಟಿದ್ದರು. ಎಲ್ಲರೂ ಜಯಕಾರ ಹಾಕುತ್ತ

"ಮಹಾರಾಜರಿಗೆ ಜಯವಾಗಲಿ"

"ಮಹಾರಾಣಿಯರಿಗೆ ಜಯವಾಗಲಿ"

- ಎಂದು ಜಯಕಾರ ಹಾಕಿದರು.

ಸಾಲಾಗಿ ನಿಂತ ಆ ವಿದ್ಯಾರ್ಥಿಗಳನ್ನು ಕಂಡಾಗ ಸಿಂಧೂಲರಾಜನಿಗೆ ಮಹದಾನಂದವಾಯ್ತು.

ವಿದ್ಯಾರ್ಥಿಗಳ ಜೊತೆಯಲ್ಲಿದ್ದ ಬಾಲಕ ಭೋಜನು ತಾನು ಸಹ ಜೊತೆಗೂಡಿ ದನಿಗೂಡಿಸಿ ಜಯಕಾರ ಹಾಕುತ್ತಿದ್ದನು. ವಿದ್ಯಾರ್ಥಿಗಳು ಮಾತ್ರವೆ ಅಲ್ಲದೆ ಅಲ್ಲಿ ರಾಜದರ್ಶನಕ್ಕಾಗಿ ಉತ್ಸಾಹದಿಂದ ಬಂದು ನೆರೆದಿದ್ದ ಸಮಸ್ತ ಆಶ್ರಮವಾಸಿಗಳು ಸಹ ರಾಜ ಸಿಂಧೂಲನಿಗೆ ಜಯಕಾರ ಹಾಕುತ್ತಿದ್ದರು. ಅದೊಂದು ಅಮೋಘ ಅವರ್ಣನೀಯ ಶುಭ ಸಮಾರಂಭದ ಸಂಕೇತವಾಗಿ ವಿಜೃಂಭಿಸುತ್ತಿತ್ತು.

ಆಗ ಗುರುಕುಲದ ವೇದ - ವೇದಾಂಗ ಪಾರಂಗತರಾದ ಬಹು ತೇಜಸ್ವಿಗಳು, ಬ್ರಹ್ಮಜ್ಞಾನಿಗಳೂ ಆದ ಗುರುಕುಲದ ಗುರುಗಳೇ ಮುಂದಾಗಿ ಬಂದು ರಾಜ ಸಿಂಧೂಲನಿಗೆ ತಮ್ಮ ಆಶ್ರಮದ ಗೌರವಾರ್ಥವಾಗಿ ರಾಜಭಕ್ತಿಯನ್ನು ಸೂಸುತ್ತ ಹೂವಿನ ಮಾಲೆ ಹಾಕಿದರು. ನಂತರ ಯಾಥಾವಿಧಿಯಾಗಿ ಪೂರ್ಣ ಕುಂಭದೊಡನೆ ಸ್ವಾಗತಿಸಿದರು.

ನಂತರ ಆಶ್ರಮದ ಗುರುಪತ್ನಿಯರು ಮತ್ತು ನೂರಾರು ಆಶ್ರಮ ಮಹಿಳೆಯರು ಮಹಾರಾಣಿಯನ್ನು ಅತ್ಯಂತ ಆಧರದಿಂದ ಸ್ವಾಗತಿಸಿದರು.

ತನ್ನ ತಾಯಿ ತಂದೆಯರು ತನ್ನನ್ನು ನೋಡುವ ಸಲುವಾಗಿ ಬಂದಿದ್ದರೂ ಸಹ ಆಶ್ರಮದ ಶಿಸ್ತಿಗೆ ಭಂಗವಾಗದಂತೆ ಗುರುಗಳ ಅಪ್ಪಣೆಗಾಗಿ ಕಾಯುತ್ತಿದ್ದ ಭೋಜನು. ಇದನ್ನರಿತ ಗುರುಗಳು "ಮಗು ಭೋಜ......... ಹೋಗು. ನಿನ್ನ ತಾಯಿ ತಂದೆಯರಿಗೆ ನಮಸ್ಕರಿಸಿ ಅವರನ್ನು ಸಂತೋಷ ಪಡಿಸು" ಎಂದು ಹೇಳಿದರು. ತಾಯಿ ಹಸುವನ್ನು ಕಂಡ ಕರುವು ಓಡಿ ಬಂದಂತೆ, ಗುಂಪನ್ನು ಭೇದಿಸಿಕೊಂಡು ತನ್ನ ತಾಯಿಯ ಬಳಿಗೆ ಬಂದು ಪಾದಮುಟ್ಟಿ ನಮಸ್ಕಾರ ಮಾಡುತ್ತ "ಅಮ್ಮ ಚೆನ್ನಾಗಿದ್ದೀಯಮ್ಮ" ಎನ್ನುತ್ತ ಆನಂದ ಬಾಷ್ಪಹರಿಸಿದ. ಆಗ ಆ ತಾಯಿ ಗುಣವತಿಯು ತನ್ನ ಸುಕುಮಾರನಾದ ಸುಂದರ ಬಾಲಕ ಭೋಜನನ್ನು ಅಪ್ಪಿ, ಬಿಗಿದಪ್ಪಿಬಿಟ್ಟಳು.

ಆ ತಾಯಿ ಮಗನ ಪ್ರೇಮಸಾಗರದ ಅಪ್ಪುಗೆಯನ್ನು ನೋಡುತ್ತಿದ್ದ ರಾಜಸಿಂಧೂಲನು ಆನಂದಬಾಷ್ಪ ಹರಿಸಿದ. ತನ್ನ ಎರಡು ಕೈಗಳನ್ನು ಚಾಚಿ ಅಂತಃಕರಣದಿಂದ ನುಡಿಯುತ್ತ"ಭೋಜ ಬಾ ಭೋಜ" ಎಂದು ತುಂಬಿದ ಅಕ್ಕರೆಯಿಂದ ಕರೆ ನೀಡಿದ ಸಿಂಧೂಲರಾಜ. ಆಗ ತಾಯಿಯ ತೋಳ ತೆಕ್ಕೆಯನ್ನು ಬಿಡಿಸಿಕೊಂಡು ತಂದೆಯ ಬಳಿಗೆ ಬಂದ ಭೋಜನು ಉನ್ಮಾದ ಸಂತೋಷದಿಂದ ತನ್ನ ತಂದೆಯನ್ನ ತಾನೇ ಬಿಗಿದಪ್ಪಿದ.

ಆಗ ಅವನ ಸುಂದರವಾದ ತಲೆಗೂದಲನ್ನು ತನ್ನೆರಡು ಕೈಗಳಿಂದ ನೇವರಿಸುತ್ತಾ, "ಮಗು ಭೋಜ ನೀನು ಚೆನ್ನಾಗಿದ್ದೀಯೇನಪ್ಪಾ, ಇಲ್ಲಿ ಎಲ್ಲ ಸೌಕರ್ಯವೂ ನಿನಗಿದೆಯೇ" ಎಂದು ಅಂತಃಕರಣದಿಂದ ಪ್ರಶ್ನಿಸಿದ.

"ಇಲ್ಲಿ ನನಗೆ ಯಾವಕೊರತೆಯೂ ಇಲ್ಲ, ಚೆನ್ನಾಗಿದ್ದೇನೆ ತಂದೆಯೇ" - ಎಂದು ಮಧುರ ನುಡಿಗಳಿಂದ ಉತ್ತರಿಸಿದ. ನಂತರ ಅಲ್ಲಿಯೇ ಇದ್ದ ಎಲ್ಲ ರೀತಿಯಲ್ಲೂ ಹಿರಿಯರಾದ ಹಾಗೂ ಪರಮ ಪೂಜ್ಯರಾದ ರಾಜಕುಲಗುರುಗಳನ್ನು ಮಹಾ ಮಂತ್ರಿಗಳನ್ನೂ ಕಂಡು ಪುನೀತನಾಗಿ ಅಷ್ಟೇ ಭಕ್ತಿ ಭಾವೈಕ್ಯದಿಂದ ಓಡೋಡಿ ಬಂದು ಪಾದ ಮುಟ್ಟಿ ನಮಸ್ಕಾರ ಮಾಡಿದ. ಬಾಲಕ ಭೋಜನ ಭಕ್ತಿಭಾವಕ್ಕೆ ಆನಂದ

ಪರವಶರಾದರು. ಮುಕ್ತಕಂಠದಿಂದ ಆಶೀರ್ವಾದ ಮಾಡುತ್ತ "ಸಕಲವಿದ್ಯಾಪಾರಂಗತನಾಗಿ ಮೇರು ಕೀರ್ತಿಗಳಿಸು" ಎಂದು ನುಡಿದರು.

ಅನಂತರ ಚಿಕ್ಕಪ್ಪನಾದ ಮುಂಜರಾಜನಿಗೂ ಚಿಕ್ಕಮ್ಮ ಭಾನುಮತಿಗೂ ಸಾಷ್ಟಾಂಗ ನಮಸ್ಕಾರ ಮಾಡಿದ.

ಮುಂಜರಾಜನು ಸಹ ಭೋಜನನ್ನು ವಾತ್ಸಲ್ಯದಿಂದ ಮೈದಡವಿ ಮುದ್ದಾಡಿದ್ದನು. ಚಿಕ್ಕಮ್ಮ ಭಾನುಮತಿಯೂ ಸಹ ಸುಂದರ ಬಾಲಕನಾದ ಭೋಜನನ್ನು ಬಿಗಿದಪ್ಪಿ ಮುದ್ದಾಡಿ ಮುತ್ತಿನ ಮಳೆಗರೆದಿದ್ದಳು.

ವಿದ್ಯಾರ್ಥಿದೆಸೆಯಲ್ಲಿದ್ದ ಭೋಜನನ್ನು ಕಂಡು ಎಲ್ಲರೂ ಆನಂದ ಸಾಗರದಲ್ಲಿ ವಿಹರಿಸಿದ್ದರು.

ನಂತರ ಗುರುಕುಲದ ಕುಲ ಗುರುಗಳು ರಾಜದಂಪತಿಗಳನ್ನು ಸಮಸ್ತ ರಾಜ ಪರಿವಾರದವರನ್ನು ಯಥೋಚಿತವಾದ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ಬಗ ಬಗೆಯಾಗಿ ಉಪಚರಿಸಿದ್ದರು.

ಸಿಂಧೂಲರಾಜನು ಪತ್ನಿ ಸಪರಿವಾರ ಸಮೇತನಾಗಿ ಗುರುಕುಲ (ಆಶ್ರಮ) ಕ್ಕೆ ಬಂದಿದ್ದಕ್ಕೆ ಸಾಕ್ಷಾತ್ ಶ್ರೀ ಕೃಷ್ಣ ಪರಮಾತ್ಮನೆ ಆಗಮಿಸಿದಂತೆ ಕುಲಗುರುಗಳ ಆದಿಯಾಗಿ ಆಶ್ರಮವಾಸಿಗಳೆಲ್ಲರು ಆನಂದ ಮಹಾನಂದ ಸ್ವರ್ಗಸುಖವನ್ನನುಭವಿಸಿದ್ದರು.

ಮಾರ್ಗಾಯಾಸದಿಂದ ಬಳಲಿದ್ದ ಎಲ್ಲ ರಾಜ ಪರಿವಾರದವರು ಆ ಮೊದಲ ಪೂರ್ವಬಾವಿಯಾಗಿ ಸಿದ್ಧಗೊಳಿಸಿದ್ದ ಭವ್ಯಾಲಂಕೃತ ರಾಜ ಶಿಬಿರಕ್ಕೆ ವಿಶ್ರಮಿಸಿಕೊಳ್ಳಲು ರಾಜರಥಗಳೊಂದಿಗೆ ತೆರಳಿದರು. ಆ ರಾತ್ರಿ ಅಲ್ಲಿಯೆ ಕಳೆದರು.

ಮಾರನೆ ದಿನ ಪ್ರಾತಃಕಾಲ ಭವ್ಯ ವಿಶಾಲವಾದ ಗುರುಕುಲದ ಪಾಠಶಾಲೆಯು ಬಾಲಕ ಶಿಷ್ಯರಿಂದ ಶೋಭಾಯಮಾನವಾಗಿ ಶೋಭಿಸುತ್ತಿತ್ತು.

ಅದಕ್ಕಿಂತಲೂ . ಮಿಗಿಲಾಗಿ ಎಲ್ಲರಲ್ಲೂ ಶಿಸ್ತು ನಿಯಮ, ಪ್ರತಿಯೊಬ್ಬ ವಿದ್ಯಾರ್ಥಿ ಶಿಷ್ಯರಲ್ಲೂ ಮೈಗೂಡಿದ್ದು ಅದೊಂದು ಪ್ರಶಾಂತ ಮಂದಿರವಾಗಿ ಅತಿಶಯವಾದ ವಾತಾವರಣದಿಂದ ಕೂಡಿತ್ತು.

ತೇಜೋಮಯರಾದ ಗುರುಗಳು ಆ ಸಹಸ್ರಾರು ಮಂದಿ ಶಿಷ್ಯರಿಗೆ ಸಂಸ್ಕೃತದಲ್ಲಿ ಅಂದಿನ ಪಾಠವನ್ನು ಭೋಧಿಸುತ್ತಿದ್ದರು. ವಿದ್ಯಾರ್ಥಿಗಳು ಸಹ ಅಷ್ಟೆ ಭಕ್ತಿಭಾವದಿಂದಲೂ ಅತಿಯಾದ ಶ್ರದ್ಧೆಯಿಂದಲೂ ಗುರುಗಳು ಹೇಳುತ್ತಿದ್ದ ಪಾಠವನ್ನು ಬಹು ಸೂಕ್ಷ್ಮವಾಗಿ ಗ್ರಹಿಸಿ ಮನನ ಮಾಡಿಕೊಳ್ಳುತ್ತಿದ್ದರು.

ಅದೇ ಸಮಯಕ್ಕೆ ಸರಿಯಾಗಿ ರಾಜ ಸಿಂಧೂಲನು ಗುರುಕುಲಕ್ಕೆ ಮಹಾಮಂತ್ರಿ ಮತ್ತು ರಾಜಗುರುಗಳೊಂದಿಗೆ ಬಂದರು. ಆಗ ಅಲ್ಲಿ ನೆರೆದಿದ್ದ ಎಲ್ಲ ವಿದ್ಯಾರ್ಥಿಗಳು ರಾಜ ಗೌರವವನ್ನು ಸೂಸುತ್ತ ಎದ್ದು ನಿಂತರು.

ಬಾಲಕರ ಶಿಸ್ತು ಸಂಯಮವನ್ನು ಕಣ್ಣಾರೆ ಕಂಡ ರಾಜನಿಗೆ ಮಹಾದಾನಂದವಾಯಿತು.

ಆ ಪಾಠಶಾಲೆಯಲ್ಲಿ "ಇವನು ರಾಜನ ಮಗ........ ಅವನು ಮಂತ್ರಿಯ ಮಗ........ ಇನ್ನೊಬ್ಬನು ಸೇನಾಧಿಪತಿಯ ಮಗ........" ಎಂಬ ಯಾವ ಭೇದಭಾವವೂ ಇಲ್ಲದ ಹಾಗೆ ನಾವೆಲ್ಲರೂ ಒಂದೇ ಎಂಬ ಆದರ್ಶದ ಭಾವವನ್ನು ಅನುಸರಿಸಿ ನಡೆಯುವುದೆ ವಿದ್ಯಾರ್ಥಿಗಳ ಮೊದಲ ಕರ್ತವ್ಯವಾಗಿತ್ತು. ರಾಜ ಸಿಂಧೂಲನು ಸಹ ಆ ಆದರ್ಶತೆಯನ್ನು ಪ್ರೋತ್ಸಾಹಿಸುತ್ತಿದ್ದನು.

ಗುರುಕುಲ ಪಾಠಶಾಲೆಯೊಳಗೆ ಪ್ರವೇಶ ಮಾಡಿದ್ದ ರಾಜ ಸಿಂಧೂಲನು ನೆರೆದಿದ್ದ ಶಿಸ್ತಿನ ವಿದ್ಯಾರ್ಥಿಗಳನ್ನು ಗಮನಿಸುತ್ತ ವೇದಿಕೆಯ ಬಳಿಗೆ ಬಂದನು. ರಾಜರನ್ನು ಹಿಂಬಾಲಿಸಿ ಮಹಾ ಮಂತ್ರಿಗಳು, ರಾಜ ಪುರೋಹಿತರು, ಮುಂಜರಾಜನು ಸಹ ಹಿಂಬಾಲಿಸಿ ಬಂದರು.

ವಿಶ್ವ ಖ್ಯಾತಿಯಾದ ಭೂಪತಿಯೊಬ್ಬನು ಸಾಧಾರಣವೊ ಎಂಬಂತಿದ್ದ ಗುರುಕುಲದ ಪಾಠಶಾಲೆಗೆ ಆಗಮಿಸಿದ್ದು ಗುರುಗಳಿಗೆ ರಾಜನ ಆದರ್ಶತೆಯನ್ನು ಕಂಡು ಬೆರಗಾಗಿ ಹೋಗಿದ್ದರು.

ಆಗ ಮಹಾರಾಜರು ಆ ಗುಂಪಿನಲ್ಲಿದ್ದ ವಿದ್ಯಾರ್ಥಿಯೊಬ್ಬನನ್ನು ಕರೆದು ಪ್ರಶ್ನಿಸುತ್ತ "ಮಗು ನಿನ್ನ ಹೆಸರೇನಪ್ಪಾ,"

"ನನ್ನ ಹೆಸರು ಮಾರ್ಕಾಂಡೇಯ ಅಂತ" ಕಂಪಿಸುತ್ತಲೇ ನುಡಿದ.

- ಆಗ ಮಹಾರಾಜನು ಆ ಕಂಪಿಸುವ ಹುಡುಗನನ್ನು ಕುರಿತು ಮತ್ತೆ ಹೇಳುತ್ತ "ಹೆದರಬೇಡ ಧೈರ್ಯವಾಗಿರು....... ಈಗ ನಾನು ನಿನಗೆ ಪ್ರಶ್ನೆಯೊಂದನ್ನು ಕೇಳುತ್ತೇನೆ..... ಸರಿಯಾಗಿ ಉತ್ತರಿಸಬಲ್ಲೆಯಾ" ಎಂದನು ರಾಜ.

"ಉತ್ತರಿಸುತ್ತೇನೆ" ಎಂದು ಧೈರ್ಯ ತುಂಬಿಕೊಂಡೇ ನುಡಿದ ಆ ವಿದ್ಯಾರ್ಥಿ.

"ಈ ಜಗತ್ತಿನಲ್ಲಿ ಮಾನವನನ್ನು ಸಂತೋಷ ತೃಪ್ತಿಪಡಿಸುವ ಎರಡು ವಸ್ತುಗಳಿವೆ ಅದು ಯಾವುದು?"

"ಮೊದಲನೆಯದು ತಾಯಿ........... ಎರಡನೇಯದು ವಿದ್ಯೆ........ ತಾಯಿಗಿಂತ ಮಿಗಿಲಾದ ದೇವರಿಲ್ಲ, ವಿದ್ಯೆಗಿಂತ ಮಿಗಿಲಾದ ಪರಮ ಮಿತ್ರ ಮತ್ತೊಬ್ಬನಿಲ್ಲ." ಎಂದು ನಿರರ್ಗಳವಾಗಿ ಉತ್ತರಿಸಿ ಬಿಟ್ಟ.

ಆಗ ಮಹಾರಾಜ ಸಿಂಧೂಲನಿಗೆ ಮಹಾದಾನಂದವಾಯಿತು. ಆಗ ರಾಜನ ಮಗ ಭೋಜನು ಸಹ ಅಲ್ಲಿಯೇ ಇದ್ದನು. ಆಗ ಸಿಂಧೂಲನು...... ಭೋಜನ ಕಡೆ ಕೈ ಮಾಡಿ "ಮಗು ನೀನು....." ಎನ್ನುತ್ತಿದ್ದಂತೆ ಭೋಜನು ಸಹ ಎದ್ದು ನಿಂತು ವಿನಯಭಾವದಿಂದ ತಂದೆಯ ಮುಖವನ್ನು ನೋಡುತ್ತ ನಿಂತ. ಆಗ ಅವನ ಕಣ್ಣಿಗೆ ತಂದೆ ಮಾತ್ರವಲ್ಲದೆ ವಿಶ್ವಗುರುಗಳಂತೆ ಕಾಣುತ್ತಿದ್ದ ಮಹಾರಾಜನನ್ನು ಕಂಡು ಪುಳಕಿತನಾದ ಭೋಜ.

ಸಿಂಧೂಲರಾಜನು ಭೋಜನನ್ನು ಕುರಿತು ಎಲ್ಲರನ್ನು ಪ್ರಶ್ನಿಸುವಂತೆ ಕೇಳುತ್ತಾ "ಮಗು ನಿನ್ನ ಹೆಸರೇನಪ್ಪ?" ಎಂದು ಪ್ರಶ್ನಿಸಿದರು.

ಆಗ ಅಲ್ಲಿದ್ದ ಎಲ್ಲರಿಗೂ ಪರಮಾಶ್ಚರ್ಯವಾಯಿತು. ಮಿಗಿಲಾಗಿ ಅಲ್ಲಿಯ ರಾಜನ ಪಕ್ಕದಲ್ಲಿಯೇ ನಿಂತಿದ್ದ ಗುರುಗಳಿಗೆ ಮಹಾದಾಶ್ಚರ್ಯವಾಯಿತು. ತಂದೆಯಾದವನು ಮಗನನ್ನೇ 'ನಿನ್ನ ಹೆಸರೇನಪ್ಪ' ಎಂದು ಕೇಳಿದಾಗ ಇನ್ನು ಇದಕ್ಕಿಂತಲೂ ಆದರ್ಶ ಬೇರೊಂದುಂಟೆ ಎಂದು ರಾಜನನ್ನು ಮನದಲ್ಲೆ ಬಹುವಾಗಿ ಗುಣಗಾನ ಮಾಡಿದರು ಗುರುಗಳು. ತನಗೆ ಮಗನಾದರೂ ಸಹ, ವಿದ್ಯಾರ್ಥಿಗಳ ಜೊತೆಯಲ್ಲಿ ಅವನೂ ಒಬ್ಬ ವಿದ್ಯಾರ್ಥಿ ಎಂಬ ದೃಷ್ಟಿಯಿಂದ ಹಾಗೆ "ನಿನ್ನ ಹೆಸರೇನು" ಎಂದು ಕೇಳಿದನು.

ಭೋಜ ಉತ್ತರಿಸಿದ.

"ಒಳ್ಳೇದು. ನೀನು ಇಲ್ಲಿಗೆ ಬಂದು ಎಷ್ಟು ಕಾಲವಾಯಿತು"

"ಎರಡು ವರ್ಷವಾಯಿತು"

"ಇಲ್ಲಿ ನೀನು ಕಲಿತು ಕೊಂಡಿರುವ ಮುಖ್ಯ ವಿಷಯವೇನು? ವಿದ್ಯೆಯಿಂದ ಸಿಗುವ ಲಾಭವೇನು?" ಹೀಗೆಂದು ಪ್ರಶ್ನಿಸಿದ್ದನು ಸಿಂಧೂಲರಾಜ.

ಆಗ ಬಾಲಕನಾದ ಭೋಜನು ಎಲ್ಲ ವಿದ್ಯಾರ್ಥಿಗಳಿಗೂ ಕೇಳಿಸುವ ಹಾಗ ತಂದೆಯನ್ನು ಕುರಿತು ಹೇಳುತ್ತ

"ವಿದೇಶೇಷು ಧನಂ ವಿದ್ಯಾ
ವ್ಯಸನೇಶು ಧನಂ ಮತಿಹಿ
ಪರಲೋಕೆ ಧನಂ ಧರ್ಮಃ
ಶೀಲಂ ಸವತ್ರ ವೈಧವಂ

- ವಿದ್ಯೆಯು ವಿದೇಶಗಳಲ್ಲಿ ಧನರೂಪದಲ್ಲಿ, ಆಪತ್ಕಾಲದಲ್ಲಿ (ಸಂಕಟ) ವಿದ್ಯೆಯನ್ನೊಳಗೊಂಡ ಬುದ್ಧಿಯು ಧನವಾಗಿ ಪರಿಣಮಿಸುತ್ತದೆ.

ಪರಲೋಕದಲ್ಲಿ ವಿದ್ಯೆಯಿಂದ ಸಾಧಿಸದ ಧರ್ಮವೆ ಧನವಾಗಿ ಪರಿಣಮಿಸುತ್ತದೆ ನಡತೆಯೂ ಎಲ್ಲೆಲ್ಲೂ ಧನವಾಗಿ ಪರಿಣಮಿಸುತ್ತದೆ. ತಂದೆಯೇ"

- ಎಂದನು.

ಆ ಉತ್ತರಕ್ಕೆ ರಾಜನು ಬಹುವಾಗಿ ಸಂತೋಷಪಟ್ಟನು. ಪಟ್ಟಮಹಿಷಿಯಾದ ಗುಣವತಿಯು ಮತ್ತೊಮ್ಮೆ ತನ್ನ ಏಕಾಂತಕ್ಕೆ ಕರೆಯಿಸಿಕೊಂಡು ಮಗನ ಅಸಾಧಾರಣ ಬುದ್ಧಿ ಶಕ್ತಿಯನ್ನು ಕೊಂಡಾಡಿ ಮುದ್ದಾಡಿದಳು. ಚಿಕ್ಕಪ್ಪನಾದ ಮುಂಜರಾಜನು ಸಹ ತನ್ನ ಪತ್ನಿ ಭಾನುಮತಿಯೊಂದಿಗೆ ಮತ್ತೊಮ್ಮೆ ಬಾಲಕ ಭೋಜನಿದ್ದಲ್ಲಿಗೆ ಬಂದು ಬಹು ಪ್ರೀತಿಯಿಂದ ಹಿತನುಡಿಗಳನ್ನಾಡಿದನು. ಸಕಲ ವಿದ್ಯಾ ಪಾಂಡಿತ್ಯ ವಿಭೂಷಣನಾಗಿ ಧಾರಾನಗರಕ್ಕೆ ಹಿಂತಿರುಗುವಂತೆ ಹಾರೈಸಿದನು.

ಬಾಲಕ ಭೋಜನನ್ನು ಕಂಡ ಎಲ್ಲರೂ ಮಹದಾನಂದಭರಿತರಾಗಿ ರಾಜ ಪರಿವಾರದೊಂದಿಗೆ ಧಾರಾನಗರವನ್ನು ಕುರಿತು ಪ್ರಯಾಣ ಬೆಳೆಸಿದರು.

# ಭೋಜನ ಅಸ್ತ್ರ-ಶಸ್ತ್ರ ವಿದ್ಯೆ

ಯಾವುದೇ ವಿದ್ಯೆಯು ಕರಗತವಾಗಬೇಕಾದರೆ ಎಳೆ ವಯಸ್ಸಿನಲ್ಲಿ ಶ್ರದ್ಧೆ ಭಕ್ತಿ ಆಸಕ್ತಿಗಳಿಂದ ಕಲಿತರೆ ಮಾತ್ರ ಅವು ಅವಿಚ್ಛಿನ್ನವಾಗಿ ಸಿದ್ಧಿಸಬಲ್ಲದು. ವಿದ್ಯೆಯು ಆಪತ್ಕಾಲದ ನಂಟನು ಹೌದು. ಕೀರ್ತಿಯ ಕಣವು ಹೌದು.

ಇದನ್ನು ಚೆನ್ನಾಗಿಯೇ ಅರಿತಿದ್ದ ಸಿಂಧೂಲರಾಜನು ತನ್ನ ಏಕೈಕ ಕುವರನಾದ ಭೋಜನಿಗೆ ಸಕಲ ವಿದ್ಯಾ ಪಾರಂಗತನಾಗುವುದರ ಜೊತೆಗೆ ಕ್ಷತ್ರಿಯ ಕುಲಕ್ಕೆ ಬಹು ಮುಖ್ಯವಾಗಿ ಬೇಕಾದ ಹಾಗೂ ಅತ್ಯವಶ್ಯಕವಾದ ಎಲ್ಲ ರೀತಿಯ ಅಸ್ತ್ರ ಶಸ್ತ್ರ ವಿದ್ಯೆ ಧನುರ್ವಿದ್ಯೆ ಕುದುರೆ ಸವಾರಿ, ಆ ಮೂಲಕ ಶತ್ರುಗಳನ್ನು ಹಿಮ್ಮೆಟ್ಟಿಸುವ ವಿಧಾನ, ಚಾಣಾಕ್ಷತೆ, ಚಾಕ ಚಕ್ಯತೆ, ಚತುರೋಪಾಯ, ಇವುಗಳಿಂದ ಕೂಡಿದ ಮಲ್ಲಯುದ್ಧ, ದ್ವಂದ್ವ ಯುದ್ಧ, ಕತ್ತಿ ಕಾಳಗ (ಖಡ್ಗ) ಆನೆಯ ಮೇಲೆ ಕುಳಿತು ಶತ್ರು ಪಕ್ಷದವರೊಡನೆ ಯುದ್ಧ ಮಾಡುವ ವಿಧಾನ, ನದಿಗಳಲ್ಲೂ ಪ್ರವಾಹಗಳಲ್ಲೂ ಸಾಹಸದಿಂದ ಈಜುವ ವಿಧಾನ, ಮುಂತಾದ ಆತ್ಮರಕ್ಷಣೆಗೂ ದೇಶ ರಕ್ಷಣೆಗೂ ಬಹು ಮುಖ್ಯವಾಗಿ ಬೇಕಾದ ಎಲ್ಲ ವಿದ್ಯೆಯನ್ನು ಕಲಿಸಬೇಕೆಂದು ಮುನ್ನೆಚ್ಚರಿಕೆಯಾಗಿ ನಿರ್ಧರಿಸಿದನು - ಸಿಂಧೂಲನು. ಅದಕ್ಕಾಗಿ ತನ್ನ ಅರಮನೆಯ ಮಂತ್ರಗಾರಕ್ಕೆ ಮಹಾಮಂತ್ರಿಗಳನ್ನು, ರಾಜ ಪುರೋಹಿತರನ್ನು, ತನ್ನ ಸಹೋದರನಾದ ಮುಂಜಾರಾಜನನ್ನು ಕರೆಸಿಕೊಂಡು ದೀರ್ಘ ಚರ್ಚೆ ನಡೆಸಿದ್ದನು.

ಸಿಂಧೂಲರಾಜನು ತಾನು ಎಷ್ಟೇ ಬುದ್ಧಿವಂತನು, ಚಾಣಾಕ್ಷನು, ರಾಜಧರ್ಮ, ರಾಜನೀತಿಯನ್ನು ಚೆನ್ನಾಗಿ ಅರಿತವನೇ ಆದರೂ ಸಹ ಆ ಮೂವರನ್ನು ಮುಂದಿಟ್ಟು ಕೊಂಡೇ ಅವರುಗಳ ಸಮಯೋಚಿತ ಸಲಹೆಯನ್ನು ಪುರಸ್ಕರಿಸಿಯೇ ರಾಜ್ಯಭಾರ ಮಾಡುತ್ತಿದ್ದನು. ಇದು ಅವನ ರಾಜ್ಯಾಡಳಿತದ ವೈಶಿಷ್ಟ್ಯವಾಗಿತ್ತು.

ಸಿಂಧೂಲರಾಜನ ಅಪೇಕ್ಷೆಯಂತೆ, ಮಹಾಮಂತ್ರಿಯ ಆದೇಶದ ಮೇರೆಗೆ, ಭೋಜನು ವ್ಯಾಸಂಗ ಮಾಡುತ್ತಿದ್ದ ಗುರುಕುಲದ ಸಮೀಪದಲ್ಲಿಯೆ ಯೋಜನ ವಿಸ್ತಾರವುಳ್ಳ ಎಲ್ಲಿ ರೀತಿಯಲ್ಲೂ ಅನುಕೂಲವಾದ ಪ್ರದೇಶದಲ್ಲಿ ಆ ಕೆಲಸದಲ್ಲಿ ಪರಿಣಿತರಾದ ಅನೇಕ ರಾಜ ಸೇವಕರಿಂದ ಅಂದ ಚಂದಮಯವಾದ 'ರಾಜಶಿಬಿರ'ವನ್ನು ನಿರ್ಮಾಣ ಮಾಡಿಸಿದರು.

ಅರಮನೆಯಲ್ಲಿಯೇ ಇದ್ದ ಆಯಾ ವಿದ್ಯೆಗಳಲ್ಲಿ ಅಸಮಾನ ಶೂರರಾದ ವಿಶ್ವಖ್ಯಾತಿ ಪಡೆದಿದ್ದ ಎಲ್ಲರನ್ನು ಆ ರಾಜ ಶಿಬಿರದಲ್ಲಿ ಭೋಜನಿಗೆ ಎಲ್ಲ ವಿದ್ಯೆಯ ತರಭೇತಿ ನೀಡಲು ಕಳುಹಿಸಿಕೊಟ್ಟಿದ್ದರು. ಜೊತೆಗೆ ಭೋಜನು ಎಲ್ಲ ವಿದ್ಯೆಯಲ್ಲೂ ಪ್ರವೀಣನಾಗುವಂತೆ ಸಂಗೀತ (ಗಾನ) ನೃತ್ಯ, ವೀಣೆ, ಮೃದಂಗ ಮುಂತಾದ ಪಾಂಡಿತ್ಯ ವಿದ್ಯೆಗಳಲ್ಲೂ ಸಹ ಅಭ್ಯಾಸ ಮಾಡಲಿ ಎಂಬ ಆಕಾಂಕ್ಷೆಯಿಂದ ಅರಮನೆಯ ಆಸ್ಥಾನ ಸಂಗೀತ ವಿದ್ವಾಸಂರುಗಳನ್ನು ಸಹ ಕಳುಹಿಸಿಕೊಟ್ಟಿದ್ದನು ಮಹಾಮಂತ್ರಿ.

ರಾಜ ಶಿಬಿರಗಳನ್ನು ಹಗಲುರಾತ್ರಿ ಸುರಕ್ಷಿತವಾಗಿ ನೋಡಿಕೊಳ್ಳಲು ನೂರಾರು ರಾಜಸೇವಕರನ್ನು ನೇಮಕ ಮಾಡಲಾಗಿತ್ತು.

ಎಲ್ಲ ವರ್ಗದವರಿಗೂ ಊಟೋಪಚಾರಕ್ಕಾಗಿ ತಕ್ಕ ಏರ್ಪಾಡು ಮಾಡಿಸಿದ್ದನು. ಯಾರೊಬ್ಬರಿಗೂ ಯಾವ ರೀತಿಯಲ್ಲಿಯೂ ತೊಂದರೆಯಾಗದಂತೆ ಎಲ್ಲ ರೀತಿಯ ಸುವ್ಯವಸ್ಥೆಯನ್ನು ಮಾಡಲಾಗಿತ್ತು.

ಹೀಗಾಗಿ ಆ ರಾಜಶಿಬಿರಗಳಿದ್ದ ಸ್ಥಳವು ಅದೊಂದು ಅತ್ಯಾಕರ್ಷಕವಾದ ಪುಟ್ಟ ಪಟ್ಟಣದಂತೆ ಕಂಗೊಳಿಸುತ್ತಿತ್ತು.

ಭೋಜನಾದರೋ ತನಗಾಗಿ ವ್ಯವಸ್ಥೆಗೊಂಡಿದ್ದ ಆ ರಾಜಶಿಬಿರದಲ್ಲಿ ಪ್ರತಿದಿನವೂ ಸಹ ಬಹು ಆಸಕ್ತಿಯಿಂದಲೂ ಶ್ರದ್ಧಾಭಕ್ತಿಯಿಂದಲೂ ಅದಕ್ಕೆ ಮಿಗಿಲಾಗಿ ತನ್ನಲ್ಲಿ ಆ ಎಳೆ ವಯಸ್ಸಿನಲ್ಲಿಯೇ ಹಾಸು ಹೊಕ್ಕಾಗಿ ಮನೆ ಮಾಡಿಕೊಂಡಿದ್ದ 'ಛಲ' ಎಂಬ ಮಹಾ ಸಾಧನೆಯ ಹಾದಿಯಲ್ಲಿ ಎಲ್ಲ ವಿದ್ಯೆಯನ್ನು ಅತ್ಯುತ್ಸಾಹದಿಂದ ಕಲಿಯುತ್ತಿದ್ದನು. ಅದಲ್ಲದೆ ಭೋಜನು ಸಮಯದ ಬೆಲೆಯನ್ನು ಚೆನ್ನಾಗಿ ಅರಿತವನಾಗಿದ್ದನು. ಸಮಯ ಎಂಬುದು ಎಲ್ಲ ಸಂಪತ್ತಿಗಿಂತಲೂ ಅತ್ಯಮೂಲ್ಯವಾದ ಸಂಪತ್ತು. ಸಿರಿ ಸಂಪತ್ತನ್ನು ಬೇಕಾದರೆ ಯಾವ ರೀತಿಯಲ್ಲಾದರೂ ಮತ್ತೆ ಮತ್ತೆ ಗಳಿಸಬಹುದು. ಆದರೆ ಕಳೆದು ಹೋದ ಸಮಯ ಮಾತ್ರ ಮತ್ತೆ ಬಾರದು ಎಂಬ ನಾಣ್ಣುಡಿಯನ್ನು ಅರಿತವನಾಗಿದ್ದನು ಭೋಜನು.

ಆ ರೀತಿಯ ನೀತಿ ನಿಯಮವನ್ನು ಎಡೆ ಬಿಡದೆ ಪಾಲಿಸುತ್ತ ಬಂದಂತೆ ಭೋಜನಿಗೆ ಎಲ್ಲ ವಿದ್ಯೆಯೂ ಕರಗತವಾಗುತ್ತಿತ್ತು.

ಭೋಜನ ವ್ಯಾಸಂಗದ ವೇಳೆಯಲ್ಲಿ ಅಸ್ತ್ರ - ಶಸ್ತ್ರ ವಿದ್ಯೆಯನ್ನು ಚೆನ್ನಾಗಿ ಬಲ್ಲವರೆ ಆದ ಸರದಾರ ಅಚಲಸಿಂಹ ಮತ್ತು ಬುದ್ಧಿಸಾರ ಈ ಇಬ್ಬರು ಭೋಜನ ಎಲ್ಲ ರೀತಿಯ ವಿದ್ಯೆಗೆ ಕಾರಣೀ ಭೂತರಾಗಿ ಶ್ರಮಿಸುತ್ತಿದ್ದರು.

ಇದರಿಂದ ಬಾಲಕನಾದ ಭೋಜನು ಅಚಲಸಿಂಹನನ್ನ ಬಹಳ ಗೌರವದಿಂದಲೆ ಕಾಣುತ್ತಿದ್ದನು. ಮಿಗಿಲಾಗಿ ತನಗೆ ವಿದ್ಯೆ ಹೇಳಿಕೊಟ್ಟ ಅವರುಗಳನ್ನು ಗುರುವೆಂದೇ ಭಾವಿಸಿದ್ದನು.

ಆ ಎಳೇ ವಯಸ್ಸಿನಲ್ಲಿಯೇ ಭೋಜನು ಸರ್ವ ಸಮರ್ಥನಾಗಿ ಸಕಲ ವಿದ್ಯೆಗಳಲ್ಲೂ ಪಾರಂಗತನಾಗಿದ್ದನು.

# ಸಿಂಧೂಲರಾಜ ಮತ್ತು ಗುಣವತಿಯ ಮರಣ

ಈ ಜಗತ್ತಿನಲ್ಲಿ 'ವಿಧಿ' ಎಂಬ ಕಣ್ಣಿಗೆ ಕಾಣದ ಕ್ರೂರಿಯೊಬ್ಬನು ಉತ್ತಮರನ್ನು, ಧರ್ಮಿಷ್ಟರನ್ನು ಬಹುಕಾಲ ಬಾಳಿಸುವುದಿಲ್ಲ ಎಂಬಂತೆ ಮೂರು ಮಾಸಗಳಿಂದಲೂ ಸಿಂಧೂಲರಾಜನು ರಾಜ ಕಾಯಿಲೆಯಿಂದ ನರಳುತ್ತಿದ್ದನು. ಮಹಾಮಂತ್ರಿಗಳು ರಾಜ ಪುರೋಹಿತರು ಮಹಾರಾಣಿ ಆದಿಯಾಗಿ ಮಹಾರಾಜನ ದೇಹ ಸ್ಥಿತಿ ದಿನೆ ದಿನೆ ಕುಗ್ಗುತ್ತಿರುವ ಬಗ್ಗೆ ಬಹುವಾಗಿ ಪರಿತಪಿಸುತ್ತಿದ್ದರು.

ಆದಕ್ಕಾಗಿ ರಾಜಪುರೋಹಿತರು ಮಹಾಮಂತ್ರಿಗಳು ಧಾರಾನಗರದ ರಾಜವೈದ್ಯರು, ಮಾತ್ರವಲ್ಲದೆ ದೇಶವಿದೇಶಗಳಿಂದ ಪ್ರತಿಭಾವಂತ ರಾಜವೈದ್ಯರನ್ನು ಕರೆಸಿಕೊಂಡಿದ್ದರು.

ರಾಜನ ಸಹೋದರ ಮುಂಜುರಾಜನು ಸಹ ತನ್ನ ಹಿರಿಯ ಸೋದರನು, ದೇಶದ ರಾಜನು ಆದ ಸಿಂಧೂಲ ದೇಹಸ್ಥಿತಿ ಬಗ್ಗೆ ತೀವ್ರ ಕಳವಳವುಳ್ಳವನಾಗಿ ಅತ್ಯಂತ ದುಃಖಿಯೂ ಆಗಿ ತಾನೇ ಸ್ವತಹ ರಾಜರಥವನ್ನು ತೆಗೆದುಕೊಂಡು ದೇಶದೇಶಗಳಿಗೆ ಪ್ರಯಾಣ ಬೆಳೆಸಿ, ಗಿಡಮೂಲಿಕೆಗಳಿಂದ ಗುಣಪಡಿಸುವ ಹಾಗೂ ಅನೇಕ ರೀತಿಯ ಚೂರ್ಣಗಳಿಂದ ಗುಣಪಡಿಸುವ ವೈದ್ಯರು, ಯೋಗದಿಂದ ಗುಣಪಡಿಸಲು ಸಾಧ್ಯ ಎಂದು ಅದರಲ್ಲಿನ ನಿಪುಣರನ್ನು ಕರೆತರಿಸಲಾಯಿತು. ಅದರಂತೆ ಕೆಲವಾರು ಆಯುರ್ವೇದ ವೈದ್ಯರನ್ನು ಕರೆತಂದು ಚಿಕಿತ್ಸೆ ಮಾಡಿಸಿದರು.

ಮಹಾರಾಣಿ ಗುಣವತಿಯಾದರೋ ಅತ್ಯಂತ ದುಃಖಿಯಾಗಿ ಕಂಡ ಕಂಡ ದೇವರನ್ನು ಬೇಡಿದಳು...... ದೀನಳಾಗಿ ಪ್ರಾರ್ಥಿಸಿದಳು. ಅನೇಕ ಪುಣ್ಯಕ್ಷೇತ್ರಗಳ ದೇವರಲ್ಲಿ ಹರಕೆ ಹೊತ್ತಳು. ಅಖಂಡ ಭಕ್ತಿಯಿಂದ ಸೇವೆಗಳನ್ನು ವಿಶೇಷ ಪೂಜೆಯನ್ನು ಮಾಡಿಸಿದಳು. ಈ ತನ್ನ ಅರಮನೆಯಂತೆಯೆ ಬಹು ವೈಭವದಿಂದ ಕೂಡಿದ ಅದ್ದೂರಿ ಬಂಗಾರದ ದೇವಾಲಯವನ್ನೇ ಕಟ್ಟಿಸಿಕೊಡುತ್ತೇನೆಂದು ಆರ್ಯಾವರ್ತದ ದಕ್ಷಿಣದಲ್ಲಿರುವ ಬೆಟ್ಟಗಳ ಮಧ್ಯೆ ಅಡಗಿ ಕುಳಿತಿದ್ದ ದೇವ ದಂಪತಿಗಳಾದ ಪದ್ಮಾವತಿ ಶ್ರೀನಿವಾಸನಿಗೆ ಹರಕೆ ಹೊತ್ತಳು.

ಆದರೆ ಆ ಸಮಯದಲ್ಲಿ ಇನ್ನೂ ಪ್ರಣಯ ದಂಪತಿಗಳೇ ಆಗಿದ್ದ ಆ ಏಳು ಮಲೆ ದೇವಾದಿ ದೇವನಿಗೆ ಬಂಗಾರದ ಗುಡಿ ಆಗಲಿ ಯಾವುದೇ ರೀತಿಯ ವೈಭವವೇ ಆಗಲಿ ಬೇಕಿಲ್ಲವಾಗಿತ್ತು.

ಸಿಂಧೂಲರಾಜನನ್ನು ಗುಣಪಡಿಸಲು ದೇಶ ದೇಶಗಳಿಂದ ಬಂದಿದ್ದ ಬಗೆ ಬಗೆಯ ವೈದ್ಯರು ಸಿಂಧೂಲರಾಜನ ರಾಜ ಕಾಯಿಲೆಗೆ ಮೂಕರಾದರು. ಮಹಾರಾಣಿಯೂ ಸೇರಿದಂತೆ ರಾಜ ಕುಟುಂಬದವರು ಮತ್ತಷ್ಟು ಕಂಗಾಲಾದರು. ಯಾರೊಬ್ಬರಿಗೂ ದಿಕ್ಕೇ ತೋಚದಂತಾಯಿತು, ಮರುಗಿದರು. ಮಹಾರಾಣಿ ದುಃಖವಂತೂ ಮುಗಿಲು ಮುಟ್ಟಿತು.

ಧಾರಾನಗರದ ರಾಜನಿಗೆ ಮಹಾ ಕಾಯಿಲೆಯಿದೆ ಎಂದರಿತ ವಿಂಧ್ಯ ಪರ್ವತದ ಮಾಂತ್ರಿಕನೊಬ್ಬ ಆ ಪಟ್ಟಣಕ್ಕೆ ಬಂದಿದ್ದ.

ಮಹಾರಾಜರನ್ನು ಗುಣಪಡಿಸಲು ಮಾಂತ್ರಿಕ ಬಂದು ನಗರದಲ್ಲಿ ಬಿಡಾರ ಮಾಡಿರುವ ಸುದ್ದಿ ಮಹಾಮಂತ್ರಿಗಳಿಗೆ ರಾಜ ಪುರೋಹಿತರಿಗೆ ತಿಳಿಯಿತು. ಆ ವಿಷಯ ಮಹಾರಾಣಿಗೂ ಸಹ ಮಿಂಚಿನ ವೇಗದಲ್ಲಿ ತಿಳಿಯಿತು.

"ಸಧ್ಯ ನನ್ನ ಪತಿದೇವರ ಕಾಯಿಲೆಯನ್ನು ಗುಣಪಡಿಸಲು ಆ ದೇವರೇ ಈ ರೀತಿಯಾಗಿ ಕಳುಹಿಸಿ ಕೊಟ್ಟಿದ್ದಾನೆ" ಎಂದು ದುಃಖ ತಪ್ತಳಾಗಿದ್ದ ಮಹಾರಾಣಿ ಕೊಂಚ ಉಸಿರಾಡುವಂತಾದಳು.

ಕಿಂಚಿತ್ ಸಮಯವನ್ನು ಹಾಳು ಮಾಡದ ಮಹಾಮಂತ್ರಿಗಳು ಮಾಂತ್ರಿಕನನ್ನು ಬರಮಾಡಿಕೊಳ್ಳಲು ರಥ ಒಂದನ್ನು ಸಿದ್ಧ ಪಡಿಸಿದ್ದರು.

ರಾಜ ಧೂತರನ್ನು - ರಾಜಸೇವಕರನ್ನು ಕಳುಹಿಸಿ ಕೊಡುವುದಕ್ಕಿಂತ ಮುಂಜರಾಜನನ್ನೇ ರಥದಲ್ಲಿ ಕುಳ್ಳಿರಿಸಿ ಕಳುಹಿಸಿ ಕೊಟ್ಟಿದ್ದರು.

ಕೆಲವು ತಾಸುಗಳು ಕಳೆದಂತೆ ರಥಾರೂಢನಾಗಿ ಮಾಂತ್ರಿಕನಿರುವ ಸ್ಥಳಕ್ಕೆ ಹೋಗಿ ಮುಂಜರಾಜನು ತ್ವರಗತಿಯಲ್ಲಿ ಆತನನ್ನು ಅರಮನೆಗೆ ಕರೆತಂದನು.

ರಾಜನ ಬಳಿಗೆ ಬಂದ ಮಾಂತ್ರಿಕನು ಒಂದಾವರ್ತಿ ಅಡಿಯಿಂದ ಮುಡಿಯವರೆಗೆ ನೋಡುತ್ತ, ಕೈ ಹಿಡಿದು ನಾಡಿ ಪರೀಕ್ಷೆ ಮಾಡಿದ ನಂತರ ಯಾವುದೊ ಅವ್ಯಕ್ತ ದೃಷ್ಟಿಯಿಂದ ರಾಜನನ್ನೊಮ್ಮೆ ನೋಡಿದ. ಆಗ ನೋಡುವುದಕ್ಕೆ ಸಾಕಷ್ಟು ಭಯಂಕರವಾಗಿಯೇ ಕಾಣುತ್ತಿದ್ದ ಆ ಮಾಂತ್ರಿಕ.

ಕೃಶನಾಗಿದ್ದಾಗ್ಯೂ ಸಹ ಚೆನ್ನಾಗಿಯೇ ಮಾತನಾಡುತ್ತಿದ್ದ ಸಿಂಧೂಲರಾಜನು ಆ ಮಾಂತ್ರಿಕನನ್ನು ಕುರಿತು ಪ್ರಶ್ನಿಸುತ್ತ "ಯಾರು ನೀವು? ಯಾವದೇಶದಿಂದ ಬಂದಿರುವಿರಿ?" ಎಂದು ಕೇಳಿದನು.

"ನನ್ನ ಹೆಸರು ರುದ್ರಸೇನ ಎಂದು. ವಿಂಧ್ಯ ಪರ್ವತದ ತಪ್ಪಲಿನಲ್ಲಿ ವಾಸಿಸುತ್ತಿದ್ದೇನೆ. ಪ್ರಭುಗಳಾದ ತಾವು ಕಾಯಿಲೆಯಿಂದ ನರುಳುತ್ತಿರುವಿರಿ ಎಂದು ವರ್ತಮಾನ ತಿಳಿಯಿತು. ಆದ್ದರಿಂದ ನಾನೇ ಹೊರಟು ಬಂದೆ" ಎಂದನು.

"ಮಂತ್ರಶಕ್ತಿಯಿಂದ ನನ್ನಲ್ಲಿ ಮನೆ ಮಾಡಿಕೊಂಡಿರುವ ಕಾಯಿಲೆ ಗುಣವಾಗಬಲ್ಲದೆ?"

"ಪ್ರಯತ್ನಿಸುತ್ತೇನೆ"

"ನನಗಂತು ಯಾವುದೆ ಮಂತ್ರ ಶಕ್ತಿ ತಂತ್ರ ಶಕ್ತಿ ಯಲ್ಲಿ ನಂಬಿಕೆಯೇ ಇಲ್ಲ. ಅದು ಕೇವಲ ಭ್ರಾಂತಿ. ಅಷ್ಟೇ ಅಲ್ಲ ಅದೊಂದು ಮೂಢನಂಬಿಕೆ ಎಂದೇ ನನ್ನ ಭಾವನೆ"

"ಪ್ರಭು...... ತಮ್ಮ ಭಾವನೆಯನ್ನೇನೋ ಒಪ್ಪಬಹುದು. ಆದರೆ ಯಾವುದೆ ಭಾವನೆಯ ಹಿಂದೆ ನಂಬಿಕೆಯೂ ಸಹ ಅದರಲ್ಲೊಂದು. ನನ್ನ ಮಂತ್ರಶಕ್ತಿಯಿಂದ ಪ್ರಯತ್ನಿಸುತ್ತೇನೆ, ಅದರ ಮೇಲೆ ದೇವರ ಚಿತ್ತ" ಎಂದನು.

ಸಿಂಧೂಲರಾಜನು ಮತ್ತು ಮಾಂತ್ರಿಕ ಇಬ್ಬರ ಮಾತುಕತೆಯ ಸಮಯ ರಾಜಪುರೋಹಿತರು, ಮಹಾಮಂತ್ರಿ ಮತ್ತು ಮುಂಜರಾಜನು ಸಹ ಅಲ್ಲಿಯೇ ಇದ್ದರು.

ಆಗ ಸಿಂಧೂಲರಾಜನು ತಾನು ನರಳುವ ಧ್ವನಿಯಲ್ಲಿಯೇ ರಾಜ ಪುರೋಹಿತರನ್ನು ಪ್ರಶ್ನಿಸುತ್ತ

"ಪೂಜ್ಯರೆ, ಈ ಮಾಂತ್ರಿಕರ ವಿಷಯದಲ್ಲಿ ನೀವೇನನ್ನುವಿರಿ?"

"ನನಗೂ ಸಹ ಅಷ್ಟಾಗಿ ಇದರಲ್ಲಿ ನಂಬಿಕೆಯಿಲ್ಲ, ರಾಜೇಂದ್ರ... ಆದರೆ ಈಜು ಬಾರದವನು ನದಿಯಲ್ಲಿ ಮುಳುಗುವವನಿಗೆ ಆ ಸಮಯದಲ್ಲಿ ಒಂದು ಹುಲ್ಲು ಕಡ್ಡಿ ತೇಲುತ್ತಿದ್ದರೂ ಸಹ ಅದನ್ನ ಹಿಡಿದಾದರೂ ಬದುಕುವ ಆಸೆ ಇದ್ದೇ ಇರುತ್ತದೆ. ಅದರಂತೆ ಸಾವಿನ ಗುಟ್ಟನ್ನೇ ಅರಿಯದ ನಾವು ಯಾವ ರೀತಿಯಲ್ಲಾದರೂ ಬದುಕುವ ಆಸೆ ಇರುವುದು ಸಹಜ. ಆದ್ದರಿಂದ ಪ್ರಯತ್ನಿಸುವುದರಲ್ಲಿ ತಪ್ಪೇನಿಲ್ಲ ಎಂಬುದೇ ನನ್ನ ಭಾವನೆ. ಒಟ್ಟಾರೆ ತಾವು ಯಾವುದಾದರೂ ಒಂದು ರೀತಿಯಲ್ಲಿ ಗುಣಮುಖರಾದರೆ ಸಾಕು......... " ಎಂದರು ರಾಜಪುರೋಹಿತರು.

"ಸರಿ ರುದ್ರಸೇನರೆ, ನಿಮ್ಮ ಪ್ರಯತ್ನ ಸಾಗಲಿ" ಎಂದಷ್ಟೇ ನುಡಿದರು ರಾಜ ಸಿಂಧೂಲನು.

ಆಗ ಮುಂಜರಾಜನೆ ಮುಂದಾಗಿ ಆ ಮಾಂತ್ರಿಕನನ್ನು ತನ್ನ ಏಕಾಂತ ಭವನಕ್ಕೆ ಕರೆದುಕೊಂಡು ಹೋದನು. ರಾಜ ಪುರೋಹಿತರು ಮಹಾಮಂತ್ರಿಗಳು ಸಹ ಜೊತೆಗೂಡಿ ಆ ಏಕಾಂತ ಭವನಕ್ಕೆ ಸಾಗಿ ಬಂದರು. ಎಲ್ಲರೂ ಪೀಠದಲ್ಲಿ ಉಪಸ್ಥಿತರಾದರು.

ಆಗ ರಾಜ ಪುರೋಹಿತರೆ ಮಾತಿಗಾರಂಭಿಸಿ ನುಡಿಯುತ್ತ,

"ರುದ್ರಸೇನರೆ, ಮಹಾ ರಾಜರನ್ನು ಗುಣಪಡಿಸಲು ನೀವು ಮಾಡುವ ಪ್ರಯೋಗವಾದರು ಏನು? ಅದಕ್ಕೆ ನಮ್ಮಿಂದ ಏನಾಗಬೇಕು ತಿಳಿಸಿ"

"ಸಂತೋಷ... ತಿಳಿಸುತ್ತೇನೆ. ಬಹುಶಹ ತಮ್ಮ ಮಹಾರಾಜರಿಗೆ ಯಾವುದೋ ದುಷ್ಟಶಕ್ತಿಯೊಂದು ಕಾಡುತ್ತಿದೆ ಎಂಬುದೇ ನನ್ನ ಮತ. ಆ ದುಷ್ಟ ಶಕ್ತಿಯನ್ನು ಉಚ್ಚಾಟಿಸಲು ಕೆಲವೊಂದು ಪ್ರಯೋಗ ಮಾಡುತ್ತೇವೆ"

"ಯಾವುದು ಆ ಪ್ರಯೋಗ?"

"ಆ ಪ್ರಯೋಗವು ಊರಾಚೆಯಿರುವ ರುದ್ರಭೂಮಿಯಲ್ಲಿಯೇ ನಡೆಯಬೇಕು. ಅಮಾವಾಸ್ಯೆ ಆಗಿರಬೇಕು. ರಾತ್ರಿ ಹನ್ನೆರಡು ಘಂಟೆಯಿಂದ ಎರಡು ಘಂಟೆಯವರೆವಿಗೆ ಆ ದುಷ್ಟಶಕ್ತಿಯನ್ನು ಆವಾಹನೆ ಮಾಡಬೇಕು. ನನ್ನ ಮಂತ್ರ ಸಿದ್ಧಿ ಪ್ರಯೋಗದಿಂದ ಆ ಶಕ್ತಿಯನ್ನು ಬಂಗಾರದ ಮಡಕೆಯಲ್ಲಿ ಬಂಧಿಸಬೇಕು. ಅನಂತರ ಆ ದುಷ್ಟಶಕ್ತಿಯನ್ನು ನಾನೇ ಜೊತೆಯಲ್ಲಿ ತೆಗೆದುಕೊಂಡು ಕಾಶಿ ಕ್ಷೇತ್ರಕ್ಕೆ ಹೊರಟು ಹೊಗುತ್ತೇನೆ" ಎಂದು ನುಡಿದನು.

ಆದರೆ ವಿಧಿನಿಯಮವೋ ಎಂಬಂತೆ ಮಾಂತ್ರಿಕನ ಪ್ರಯೋಗವಾಗುವಷ್ಟರಲ್ಲಿ ಅಂದರೆ ರಾತ್ರಿ ನಾಲ್ಕು ಜಾವ ಕಳೆಯುವಷ್ಟರಲ್ಲಿಯೇ ಸಿಂಧೂಲರಾಜರು ನಿಧನರಾಗಿದ್ದರು.

ತನ್ನ ಪತಿಯ ಮರಣ ವಾರ್ತೆಯನ್ನು ಕೇಳಿದ ಪಟ್ಟಮಹಿಷಿಯಾದ ಗುಣವತಿಗೆ ಒಮ್ಮೆಯೇ ಆಕಾಶವೆ ಕಳಚಿ ತನ್ನ ಮೇಲೆ ಬಿದ್ದಂತೆ ಆಘಾತವಾಯಿತು. ಭೂಮಿಯೇ ಬಾಯಿ ಬಿರಿದು ತನ್ನನ್ನು ನುಂಗುತ್ತಿರುವಂತೆ ದಿಗ್ಭ್ರಮೆಗೊಂಡವಳಾಗಿ ಕಿಟಾರನೆ ಕಿರುಚುತ್ತ ಮೂರ್ಛಿತಳಾಗಿ ದೊಪ್ಪನೆ ನೆಲದ ಮೇಲೆ ಬಿದ್ದಳು. ಆಗ ಅನೇಕ ದಾಸಿಯರು ಓಡೋಡಿ ಬಂದು ಮುಖದ ಮೇಲೆ ನೀರು ಚುಮುಕಿಸಿ, ನಾನಾ ರೀತಿಯಲ್ಲಿ ಸಂತೈಸಿದರು. ಕ್ಷಣಾರ್ಧದಲ್ಲಿಯೇ ಮಹಾಮಂತ್ರಿಗಳು ರಾಜ ಪುರೋಹಿತರು ಮೈದುನ ಆದ ಮುಂಜರಾಜನು ಮತ್ತು ಪತ್ನಿ ಭಾನುಮತಿ ಎಲ್ಲರೂ ಮಹಾರಾಣಿ ಗುಣವತಿದೇವಿಯನ್ನು ಸಂತೈಸುತ್ತಿದ್ದರು.

ಸಿಂಧೂಲರಾಜನ ಹಠಾತ್ ಮರಣವು ಧಾರಾನಗರದಾದ್ಯಂತ ಕಾಡ್ಗಿಚ್ಚಿನಂತೆ ಹರಡಿತು. ಪ್ರಜೆಗಳಿಗೆ ಒಮ್ಮೆಯೆ ಸಹಸ್ರ ಸಿಡಿಲು ಬಡಿದಂತಾಗಿ ತತ್ತರಿಸಿ ಹೋದರು. ಮನೆಮನೆಗಳೆಲ್ಲಾ ಗೋಳಿನ ಮಡುವಾಯಿತು. "ಅಯ್ಯೋ ನಮ್ಮ ದೇಶದ ಧರ್ಮಿಷ್ಠ ರಾಜನೊಬ್ಬನು ಹೋಗಿಬಿಟ್ಟನಲ್ಲ. ಇನ್ನು ಈ ಧಾರಾನಗರದ ಗತಿ ಏನು. ಪ್ರಜೆಗಳಾದ ನಮ್ಮಗಳ ಪಾಡೇನು? ರಾಜರಾದರೋ ಧಾರಾನಗರದ ಪ್ರಜೆಗಳಾದ ಒಂದೊಂದು ಕುಟುಂಬಗಳಿಗೂ ತಂದೆಯ ಸಮಾನನಾಗಿ ನಮ್ಮೆಲ್ಲರ ಹಿತಚಿಂತನೆಯಲ್ಲಿಯೆ ನಮ್ಮ ಸುಖಶಾಂತಿಗಾಗಿಯೆ ರಾಜ್ಯಭಾರ ಮಾಡುತ್ತಿದ್ದನಲ್ಲ. ಅಂತಹ ಆದರ್ಶರಾಜನೊಬ್ಬನು ಇಲ್ಲವಾದಾಗ ಇನ್ನು ಈ ಧಾರಾನಗರದಲ್ಲಿ ನಾವು ಬದುಕಿದ್ದೂ ಪ್ರಯೋಜನವಾದರು ಏನು" ಎಂದು ನಾನಾ ರೀತಿಯಲ್ಲಿ ಗೋಳಿಟ್ಟರು. ಚೀರಿಟ್ಟರು.

ಬಹು ದುಃಖಿತಪ್ತದಿನವಾದ ಅಂದು ಪ್ರತಿಯೊಬ್ಬ ಪ್ರಜೆಯೂ ಸಹ ತನ್ನ ದೈನಂದಿನ ಕರ್ತವ್ಯವನ್ನೆ ಮರೆತು ಹಾಳು ಮೋರೆಯಿಂದ ಪರಿತಪಿಸುತ್ತಿದ್ದರು. ಪ್ರತಿ ಮನೆಯ ಮುತ್ತೈದೆಯರು ಮನೆ ಮುಂದೆ ಸಾರಿಸಿ ಗುಡಿಸಿ ರಂಗವಲ್ಲಿ ಇಡುತ್ತಿದ್ದವರು ಅಂದು ಮನೆ, ಮನೆಅಂಗಳವು ಸೂತಕದ ಅಂಗಳವಾಗಿ ಕ್ಷೋಭೆಯಂತಿತ್ತು.

ಕೊಟ್ಟಿಗೆಯಲ್ಲಿ ಹಸುವಿನ ಹಾಲು ಕರೆಯುತ್ತಿದ್ದ ಮಂಗಳಾಂಗಿಯರು ಆ ಕೆಲಸವನ್ನು ಬದಿಗೊತ್ತಿ ಮೂಲೆಯಲ್ಲಿ ಕುಳಿತು ಪ್ರಲಾಪಿಸುತ್ತಿದ್ದರು......... ಕರುವು ಸಹ ತನ್ನ ಮೊಲೆ ಹಾಲುಣ್ಣದೆ ಸ್ತಬ್ಧವಾಗಿ ನಿಂತಿತ್ತು. ಕೆಚ್ಚಲ ಹಾಲು ತುಂಬಿದ್ದ ಹಸುವು ಆ ಭಾರವನ್ನು ಹೊರಲಾರದೆ 'ಅಂಬಾ ಅಂಬಾ' ಎಂದು ಗೋಳಾಡುತ್ತಿದ್ದವು. ಹೊತ್ತಾರೆ ಎದ್ದು ನೇಗಿಲನ್ನು ಹೊತ್ತು ಹೊಲದ ಕಡೆ ಹೋಗುತ್ತಿದ್ದ ರೈತಾಪಿ ಜನರು ನೇಗಿಲನ್ನು ಅತ್ತ ಎಸೆದು ರಾಜನ ಮರಣದಿಂದಾಗಿ ಅಲ್ಲಲ್ಲಿ ಕುಳಿತು ಪ್ರಲಾಪಿಸುತ್ತಿದ್ದರು. ದೇವಾಲಯಗಳಲ್ಲಿ ಮುಚ್ಚಿದ ಬಾಗಿಲು ಮುಚ್ಚಿದಂತೆಯೇ ಇತ್ತು. ಗುಡಿಗಂಟೆಗಳ ನಾದ ಇಲ್ಲದಾಗಿತ್ತು. ಅಂಗಡಿ ಮುಂಗಟ್ಟುಗಳು ಮುಚ್ಚಿದ್ದವು. ಎಲ್ಲೆಲ್ಲೂ ಗೋಳಿನ ಆಕ್ರಂದನ. ಪ್ರಜೆಗಳ ದುಃಖ ಹೇಳತೀರದಂತಾಗಿತ್ತು.

ಮಹಾರಾಣಿ ಗುಣವತಿಯ ದುಃಖ ಸಾಗರದಂತಾಗಿ ಬಹು ಸಂಕಟದಿಂದ ಗೋಳಿಡುತ್ತಿದ್ದಳು. ಅವಳ ಆಗಿನ ದುಃಖವನ್ನು ಯಾರೊಬ್ಬರು ತಡೆಯಲಾರದಾದರು. ಆ

ದುಃಖವನ್ನು ಶಮನ ಮಾಡಲು ರಾಜಮಹಿಳೆಯರು ಹಾಗೂ ನಾದಿನಿಯಾದ ಭಾನುಮತಿ ಎಲ್ಲರೂ ಅನೇಕ ರೀತಿಯಲ್ಲಿ ತಿಳಿವಳಿಕೆ ಹೇಳಿ ಸಂತೈಸುತ್ತಿದ್ದರು. ಆದರೆ ಪತಿಯನ್ನು ಕಳೆದು ಕೊಂಡ ದುಃಖ ಅಂತಿಂಥ ದುಃಖವಾಗಿರಲಿಲ್ಲ ಅವಳಿಗೆ.

ಸದಾಕಾಲವು ನಗುನಗುತ್ತಿದ್ದ ಆ ವೈಭವದ ಅರಮನೆ ಅಂದು ಹಾಳು ಸ್ಮಶಾನ ಮಂಟಪದಂತೆ ಕಾಂತಿಹೀನವಾಗಿತ್ತು.

ಮಹಾರಾಜ ಸಿಂಧೂಲನ ಅಂತಿಮ ದರ್ಶನವನ್ನು ಪಡೆಯಲು ಲಕ್ಷ ಲಕ್ಷ ಸಂಖ್ಯೆಯಲ್ಲಿ ಧಾವಿಸಿ ಬರುತ್ತಿದ್ದರು. ಆ ರೀತಿ ಬರುತ್ತಿದ್ದ ದುಃಖ ತಪ್ತ ಜನರನ್ನು ನಿಯಂತ್ರಿಸುವುದೆ ಸಾಕು ಸಾಕಾಗಿ ಹೋಗಿತ್ತು ರಾಜಸೇವಕರುಗಳಿಗೆ. ಎಲ್ಲರೂ ಮಹಾರಾಜರ ಅಂತಿಮ ದರ್ಶನ ಪಡೆಯಲು ಸಾಲುಗಟ್ಟಿ ನಿಂತಿದ್ದರು.

ಏಕಾಂತ ಭವನದಿಂದ ಹೊತ್ತು ತಂದ ರಾಜನ ಕಳೆಬರವನ್ನು ಅರಮನೆಯ ಹೊರವರಾಂಡದಲ್ಲಿ ಪ್ರಜೆಗಳ ಅಂತಿಮ ದರ್ಶನಕ್ಕೆ ಅನುಗುಣವಾಗುವಂತೆ ಸ್ಥಳಾಂತರಿಸಿದ್ದರು. ಸಿಂಧೂಲ ರಾಜನ ಶವದ ಸುತ್ತಲೂ ರಾಜ ಪರಿವಾರದವರು ರಾಜಮಹಿಳೆಯರು ತುಂಬಿ ನೆರೆದು ಬಿಕ್ಕಿ ಬಿಕ್ಕಿ ಅಳುತ್ತಿದ್ದರು. ಮುಖ ಮುಚ್ಚಿಕೊಂಡು ಅಯ್ಯೋ ಅಪ್ಪ, ನನ್ನ ದೊರೆಯೆ "ನಮ್ಮನ್ನು ಅನಾಥರನ್ನಾಗಿ ಮಾಡಿ ಈ ಜಗತ್ತನ್ನು ತೊರೆದು ಹೋಗಿ ಬಿಟ್ಟೆಯಾ" ಎಂದು ಗದ್ಗತರಾಗಿ ರೋಧಿಸುತ್ತಿದ್ದರು. ಪ್ರತಿಯೊಬ್ಬರು ಅರಮನೆ ಹಿರಿಯರು ಎಲ್ಲರನ್ನು ಸಂತೈಸುತ್ತಿದ್ದರು.

ಆ ಕರಾಳ ಸುದ್ದಿಯನ್ನು ಕೇಳಿದ ನೆರೆ ರಾಜ್ಯಗಳ ಸಾಮಂತರುಗಳು ದಿಕ್ಕು ತೋಚದೆ ಹಂಸತೂಲಿಕದಲ್ಲಿ ಮಲಗಿದ್ದವರು ತಮ್ಮ ತಮ್ಮ ರಾಜರಥ ರಾಜಗೌರವವನ್ನು ಮರೆತು ತಾವೇ ಧಿಗ್ಭ್ರಮೆಯಿಂದ ಎದ್ದು ಓಡಿ ಹೋಗಿ ಕುದುರೆ ಲಾಯದಲ್ಲಿದ್ದ ಕುದುರೆಯನ್ನು ತಾವೇ ಬಿಚ್ಚಿಕೊಂಡು ಕೇವಲ ಸರದಾರರಂತೆ ಕುದುರೆಯನ್ನೇರಿ ವಾಯುವೇಗದಲ್ಲಿ ಧಾರಾನಗರವನ್ನು ಸೇರಿದರು. ರಾಜ ಪರಿವಾರದ ದುಃಖದಲ್ಲಿ ಭಾಗಿಗಳಾದರು.

ಇನ್ನೂ ಕಿಶೋರಾವಸ್ಥೆಯನ್ನೇ ಕಂಡರಿಯದ ಭೋಜನನ್ನು ಕರೆತರಲು ಮಹಾಮಂತ್ರಿಗಳು ಗುರುಕುಲಕ್ಕೆ ರಥವನ್ನು ನಾಲ್ಕು ಜನ ವಾರ್ತಾಧೂತರನ್ನು ಸರದಾರ ಅಚಲಸಿಂಹನೊಡನೆ ಕಳುಹಿಸಿಕೊಟ್ಟರು. ವಾಯುವೇಗದಲ್ಲಿ ಸಾಗಿದ ರಥ ಗುರುಕುಲ ಸೇರಿತು. ಆ ವೇಳೆಯಲ್ಲಿ ಗುರುಕುಲ ಪಾಠಶಾಲೆಯಲ್ಲಿ ಎಲ್ಲ ವಿದ್ಯಾರ್ಥಿಗಳಿಂದ ಪಾಠ ಪ್ರವಚನಗಳು ನಡೆಯುತ್ತಿತ್ತು. ಭೋಜನು ಸಹ ಅಲ್ಲಿಯೇ ವ್ಯಾಸಂಗ ಮಾಡುತ್ತಿದ್ದನು.

ಕುದುರೆಯಿಂದಿಳಿದ ವಾರ್ತಾಧೂತರು ನೇರ ಪಾಠಶಾಲೆಗೆ ಬಂದರು. ಪಾಠಶಾಲೆಯ ಹೊರಗಡೆ ಕಾವಲಿದ್ದ ಆಸಾಮಿಯು ರಾಜಧೂತರು ಬಂದಿರುವುದನ್ನು ಕುಲಗುರುಗಳಿಗೆ ತಿಳಿಸಿದನು. ಆ ಕೂಡಲೆ ಕುಲಗುರಗಳು "ಇದೇನಿದು - ಯಾವುದೊಂದು ಸುದ್ದಿಯೂ ಇಲ್ಲದೆ ರಾಜರ ರಾಜಧೂತರು ಬರಲು ಕಾರಣವಾದರೂ ಏನು?" ಎಂದು ಚಿತ್ತ ಚಂಚಲರಾದರು ಕುಲಗುರುಗಳು.

"ರಾಜಧೂತರನ್ನ ಬರಹೇಳು" ಎಂದು ಆಜ್ಞಾಪಿಸಿದರು.

ಆದರೆ ಅಚಲಸಿಂಹನು ಹಾಗೆ ಮಾಡಲಿಲ್ಲ "ಒಂದು ರಹಸ್ಯ ವಿಚಾರವಿದೆ. ಆ ವಿಚಾರವನ್ನು ಪಾಠಶಾಲೆಯೊಳಗೆ ಹೇಳುವುದು ಸೂಕ್ತವಲ್ಲ. ದಯವಿಟ್ಟು ಕುಲಗುರುಗಳನ್ನು ಏಕಾಂತವಾಗಿ ಮಾತನಾಡಲು ಬಯಸುತ್ತೇವೆ" ಎಂದು ಅಚಲಸಿಂಹನು ಆ ಆಳಿಗೆ ತಿಳಿಸಿದರು. ಅದರಂತೆ ಕುಲ ಗುರುಗಳಿಗೆ ಹೇಳಿದನು ಆ ಆಳು.

ಆ ಕೂಡಲೆ ಗುರುಗಳು ಅಚಲಸಿಂಹರನ್ನು ಏಕಾಂತದಲ್ಲಿ ಸಂದರ್ಶಿಸಿದರು. ಅಚಲಸಿಂಹನಿಂದ ದುಃಖದ ಸಮಾಚಾರ ಕೇಳುತ್ತಿದ್ದಂತೆ ವಯೋವೃದ್ಧರಾದ ಕುಲ ಗುರುಗಳಿಗೆ ಭಾರಿ ಆಘಾತವಾದಂತಾಯಿತು. ಒಮ್ಮೆಯೆ ಸಹಸ್ರ ಸಿಡಿಲು ಬಡಿದಂತೆ ದುಃಖಿಗಳಾದರು. ಹೇಗೊ ತಮ್ಮ ಆತ್ಮಶಕ್ತಿ ಬಲದಿಂದ ಆ ದುಃಖವನ್ನು ತಡೆದು ಕೊಂಡರು. ಅಲ್ಲಿಯೇ ಇದ್ದ ಗುರುಕುಲದ ಆಳನ್ನು ಕರೆದು ರಾಜಕುಮಾರ ಭೋಜರಾಜರನ್ನು ಗುರುಗಳು ಕರೆಯುತ್ತಿದ್ದಾರೆ ಎಂದು ಹೇಳಿ ಕಳುಹಿಸಿದರು.

ಅದರಂತೆ ಭೋಜನನ್ನು ಕರೆತಂದ. ತನ್ನ ಮುಂದೆ ರಾಜರಥ, ಸರದಾರ ಅಚಲಸಿಂಹ ಇರುವುದನ್ನು ನೋಡಿದ ಭೋಜನಿಗೆ ಏನೊಂದೂ ಅರ್ಥವಾಗಲಿಲ್ಲ. ಆಗ ಗುರುಗಳೆ ಭೋಜರಾಜನಿಗೆ ಹೇಳುತ್ತ "ಭೋಜ ಕುಮಾರ, ನೀನು ಈಗ ರಥವನ್ನೇರು. ನಿನ್ನ ಸಂಗಡ ನಾನು ಬರುತ್ತೇನೆ. ಧಾರಾನಗರಕ್ಕೆ ಹೋಗಿ ಬರೋಣ"

"ಏಕೆ ಗುರುಗಳೆ?"

"ಆ ವಿಷಯವನ್ನು ಈಗ ಪ್ರಶ್ನಿಸಬೇಡ ಭೋಜ" ಎಂದರು.

ಗುರುಗಳ ಮಾತಿಗೆ ಪ್ರತಿಯಾಡದೆ ಉಟ್ಟಬಟ್ಟೆಯಲ್ಲಿ ರಥವನ್ನೇರಿದ. ಗುರುಗಳು ಸಹ ಏನೊಂದು ಹಿಂದೆ ಮುಂದೆ ನೋಡದೆ ಆ ಆಳಿಗೆ ಕಿವಿಯಲ್ಲಿ ರಹಸ್ಯ ವಿಚಾರ ಹೇಳಿ ರಥವನ್ನೇರಿ ಭೋಜನ ಪಕ್ಕದಲ್ಲಿಯೆ ಕುಳಿತರು.

ರಥ ವಾಯುವೇಗದಲ್ಲಿ ಸಾಗಿ ಧಾರಾನಗರವನ್ನು ಸೇರಿತು.

ಎಲ್ಲೆಲ್ಲೂ ಗೋಳಿನ ಬೀಡಾಗಿದ್ದ ಆ ಧಾರಾನಗರವನ್ನು ನೋಡಿದ ಭೋಜನು "ಗುರುಗಳೆ..... ಇಂದೇಕೆ ನಮ್ಮ ಧಾರಾನಗರ ಈ ಸ್ಥಿತಿಯಲ್ಲಿದೆ. ಏಕೆ ಒಬ್ಬರೂ ಸಂತೋಷದಿಂದ ಓಡಾಡುತ್ತಿಲ್ಲ" ಎಂದು ನಾನಾ ರೀತಿಯಲ್ಲಿ ಪ್ರಶ್ನೆ ಹಾಕಿದನು. ಆದರೆ ಭೋಜನ ಯಾವ ಪ್ರಶ್ನೆಗೂ ಉತ್ತರಿಸಲಾಗದೆ ಬಾಯಿಕಟ್ಟಿದಂತಾಗಿತ್ತು ಕುಲ ಗುರುಗಳಿಗೆ.

ರಥ ಅರಮನೆಯೊಳಗೆ ಬರುತ್ತಿದ್ದಂತೆ ಲಕ್ಷೋಪಲಕ್ಷ ಜನರು ಬಾಲಕ ಭೋಜನು ಬರುವುದನ್ನು ಕಂಡು ಮತ್ತಷ್ಟು ಪ್ರಲಾಪಿಸಿದರು.

ಸಾಲುಗಟ್ಟಿ ನಿಂತಿದ್ದ ಅಸಂಖ್ಯ ಪ್ರಜೆಗಳು ಸಿಂಧೂಲ ರಾಜನ ಅಂತಿಮ ದರ್ಶನ ಪಡೆದು ಬರುತ್ತಿದ್ದರು. ಆಗ ಗುರುಗಳೇ ಭೋಜನ ಬೆನ್ನು ತಟ್ಟಿ ಹೇಳುತ್ತ "ಭೋಜ ನೀನಿನ್ನು ಚಿಕ್ಕ ಬಾಲಕ. ನೀನು ಏನೇನು ಅರಿಯದವನು. ನಿನ್ನ ತಂದೆ ಸಿಂಧೂಲರಾಜರು ಸ್ವರ್ಗಸ್ಥರಾಗಿದ್ದಾರೆ" ಎಂದಾಗ ಭೋಜನು ಗೊಳೋ ಎಂದು ಗುರುಗಳ ತೊಡೆಯ

ಮೇಲೆ ತಲೆ ಇಟ್ಟು ಗೋಳಿಟ್ಟನು. ಅಷ್ಟರಲ್ಲೆ ರಾಜ ಪರಿವಾರದವರು ಬಂದು ಅವನನ್ನು ನಾನಾ ರೀತಿಯಲ್ಲಿ ಸಂತೈಸಿಸಿ ರಥದಿಂದ ರಾಜನ ಕಳೇಬರದತ್ತ ಕರೆದೊಯ್ದರು. ತನ್ನ ತಂದೆಯ ಕಳೇಬರವನ್ನು ನೋಡಿ ಮತ್ತಷ್ಟು ದುಃಖದಿಂದ ಪ್ರಲಾಪಿಸಿದ ಭೋಜ. ಆಗ ಅಲ್ಲಿಯೇ ಇದ್ದು, ಅತಿಯಾಗಿ ಸಂಕಟ ಪಡುತ್ತಿದ್ದ ಮಹಾರಾಣಿ ಗುಣವತಿಯು ತನ್ನ ಮಗನನ್ನು ಕಂಡು ಮತ್ತಷ್ಟು ಘೋರವಾಗಿ ಪ್ರಲಾಪಿಸಿದಳು. ಭೋಜನನ್ನು ಬಿಗಿದಪ್ಪಿ ಗೋಳಿಟ್ಟಳು. ಬಿಕ್ಕಿ ಬಿಕ್ಕಿ ಅತ್ತಳು. "ಅಯ್ಯೋ ಭೋಜ..... ನೀನು ತಂದೆಯನ್ನು ಕಳೆದುಕೊಂಡು ತಬ್ಬಲಿಯಾಗಿ ಬಿಟ್ಟೆ, ನಾನು ಈ ಕಠೋರ ದೃಶ್ಯವನ್ನು ನೋಡಲಾರೆ, ಈ ಸಂಕಟವನ್ನು ಅನುಭವಿಸಲಾರೆ" ಎಂದು ಅತಿಯಾಗಿ ಗೋಳಿಡುತ್ತಿದ್ದಳು. ಆಗ ಮುಂಜರಾಜನು ಸೇರಿದಂತೆ ಎಲ್ಲ ರಾಜಮಹಿಳೆಯರು ರಾಣಿ ಗುಣವತಿಯನ್ನು ಸಂತೈಸುತ್ತಿದ್ದರು.

ಚಿಕ್ಕಪ್ಪನನ್ನು ಕಂಡ ಭೋಜನು ಅವನನ್ನು ಬಿಗಿದಪ್ಪಿ ದುಃಖಿಸಿದ್ದನು.

ದುಃಖವನ್ನೇ ಕಂಡರಿಯದ ಹಾಲು ಹೃದಯಿಯಾದ ಮುಗ್ಧ ಭೋಜನನ್ನು ಮುಂಜರಾಜನು ಬೆನ್ನನ್ನು ನೇವರಿಸುತ್ತಾ ಸಂತೈಸಿದ್ದ.

ಅಂದು ಆ ಅರಮನೆಯು ಎಂದಿಲ್ಲದ ದುಃಖಸಾಗರವಾಗಿ ಹೋಗಿತ್ತು. ಶವ ಸಂಸ್ಕಾರಕ್ಕಾಗಿ ಎಲ್ಲ ಏರ್ಪಾಟಾಗುತ್ತಿತ್ತು.

ಇನ್ನೂ ಸಹ ಪ್ರಜೆಗಳು ಸಿಂಧೂಲ ರಾಜನ ಅಂತಿಮ ದರ್ಶನ ಪಡೆಯಲು ಬರುತ್ತಲೇ ಇದ್ದರು.

ಸಿಂಧೂಲರಾಜನ ಕಳೇಬರವನ್ನು ರುದ್ರಭೂಮಿಗೆ ಮೆರವಣಿಗೆ ಮೂಲಕ ಕರೆದೊಯ್ಯಲು ಅತಿಯಾಗಿ ಅಲಂಕರಿಸಿದ್ದ ಹೂವಿನ ಪಲಕ್ಕಿ ರಥ ಸಿದ್ಧವಾಗಿ ಬಂತು. ರಾಜಗೌರವವಾಗಿ ಅರಮನೆಯ ಎಲ್ಲ ಸೇನಾಪಡೆಗಳು, ರಾಜ ಸೇವಕರು, ಯಥಾವಿಧಿಯಂತೆ ರಾಜನಿಗೆ ಅಂತಿಮ ಗೌರವ ಸಲ್ಲಿಸಲು ಸಿದ್ಧರಾದರು.

ಸಿಂಧೂಲನ ಕಳೇಬರವನ್ನು ಸಕಲ ರಾಜಮರ್ಯಾದೆಯೊಂದಿಗೆ ಹೂವಿನ ರಥದಲ್ಲಿರಿಸಿದರು.

ಆದರೇನು? ಅಲ್ಲಿ ಮತ್ತೊಂದು ವಿಧಿ ಕಾದಿತ್ತು. ರಾಜನ ಕಳೇಬರವನ್ನು ಅರಮನೆಯಿಂದ ಹೊರಸಾಗಿಸುತ್ತಿದ್ದಂತೆ ತಡೆಯಲಾರದ ದುಃಖದಿಂದ "ಅಯ್ಯೋ ದೇವರೆ, ನಾನು ಇನ್ನು ಈ ಜಗತ್ತಿನಲ್ಲಿರಲಾರೆ, ನೀವಿಲ್ಲದ ಜಗತ್ತು ನನಗೆ ಬೇಡ" ಎಂದು ಚಿಟಾರನೆ ಚೀರುತ್ತಾ ನೆಲಕ್ಕುರುಳಿದ ಗುಣವತಿಯ ಪ್ರಾಣ ಪಕ್ಷಿ ಹಾರಿ ಹೋಗಿತ್ತು.

ಆಗ ಬಾಲಕ ಭೋಜ "ಅಮ್ಮಾ ನಿನ್ನ ಜೊತೆಯಲ್ಲಿ ನಾನು ಬಂದು ಬಿಡುತ್ತೇನೆ. ನನ್ನನ್ನು ಕರೆದುಕೊಂಡು ಹೋಗಮ್ಮಾ" ಎಂದು ಅತಿಯಾಗಿ ಪ್ರಲಾಪಿಸಿದ. ಅಷ್ಟರಲ್ಲಿ

ರಾಜ ಗುರುಗಳು, ಕುಲ ಗುರುಗಳು ಅವನನ್ನು ಅರಮನೆಯೊಳಗೆ ಕರೆದುಕೊಂಡು ಹೋಗಿ ಬಿಟ್ಟರು.

ವಿಧಿ ವಿಲಾಸವೋ ಎಂಬಂತೆ ಸಿಂಧೂಲರಾಜನ ಕಳೇಬರದ ಜೊತೆಯಲ್ಲಿ ರಾಣಿ ಗುಣವತಿಯ ಕಳೇಬರವನ್ನು ಸಹ ಜೊತೆಗೂಡಿ ಮಲಗಿಸಿದರು. ಈ ಶವಯಾತ್ರ ಮೆರವಣಿಗೆ ಮೂಲಕ ರುದ್ರ ಭೂಮಿಗೆ ಸಾಗಿತ್ತು.

ರಾಜ ಗುರುಗಳು, ಕುಲಗುರುಗಳು, ಮುಂಜರಾಜನು ಹಾಗೂ ಅಚಲಸಿಂಹನು ಏನೊಂದು ಅರಿಯದ ಬಾಲಕ ಭೋಜನಿಗೆ ಧೈರ್ಯ ತುಂಬಿ ರುದ್ರಭೂಮಿಗ ಕರೆತಂದರು. ಯಥಾವಿಧಿಯಾಗಿ ಬಾಲಕ ಭೋಜನಿಂದ ತಂದೆತಾಯಿಯರ ಶವಸಂಸ್ಕಾರ ಮಾಡಿಸಿದರು.

ತಂದೆ ತಾಯಿಗಳನ್ನು ಕಳೆದುಕೊಂಡು ತಬ್ಬಲಿಯಾದ ಭೋಜನು ಚಿಕ್ಕಪ್ಪ ಮುಂಜರಾಜ ಹಾಗೂ ಚಿಕ್ಕಮ್ಮ ಭಾನುಮತಿಯ ಆಧಾರದಿಂದ ಮೂರು ತಿಂಗಳ ಕಾಲ ಇದ್ದು, ದುಃಖ ಶಮನವಾದಂತೆ ವಿದ್ಯಾಭ್ಯಾಸಕ್ಕಾಗಿ ಮತ್ತೆ ಗುರುಕುಲಕ್ಕೆ ಪ್ರಯಾಣ ಮಾಡಿದ.

# ಮುಂಜರಾಜನ ಆಳ್ವಿಕೆ

ಸಿಂಧೂಲರಾಜನ ಮರಣಾನಂತರ ಮುಂಜರಾಜನು ಅಧಿಕಾರರೂಢನಾಗಿ ಸಿಂಹಾಸನವನ್ನೇರಿದನು. ಮೊದಲ ಒಂದೆರಡು ವರ್ಷಗಳು ಸಿಂಧೂಲ ರಾಜನಂತೆಯೇ ಧರ್ಮದಿಂದ ರಾಜ್ಯಾಭಾರ ಮಾಡಿಕೊಂಡು ಬಂದನು.

ಆ ಮಧ್ಯೆ ಅವನ ಧರ್ಮ ಪತ್ನಿಯಾದ ಭಾನುಮತಿಯು ಎರಡು ಗಂಡು ಮಕ್ಕಳಿಗೆ ಜನ್ಮವಿತ್ತಿದ್ದಳು. ದಿನ ದಿನಕ್ಕೂ ಮಕ್ಕಳು ಬೆಳೆಯುತ್ತಿದ್ದಂತೆ ಮುಂಜರಾಜನಿಗೆ ತನ್ನ ಮಕ್ಕಳ ಮೇಲೆ ಮಮತೆ ಮಮಕಾರ ಅತಿಯಾಗುತ್ತಾ ಬಂತು.

ಒಮ್ಮೊಮ್ಮೆ ಹೀಗೂ ಯೋಚನೆ (ದುರಾಲೋಚನೆ) ಮಾಡುತ್ತಿದ್ದ

"ಹೌದು......... ನಾನು ಈಗ ಉತ್ಸುವಾರಿಯಾಗಿ ರಾಜ್ಯಭಾರ ಮಾಡುತ್ತಿದ್ದೇನೆ. ನಿಜ, ಮುಂದೆ ನನ್ನ ಅಣ್ಣನ ಮಗ ಭೋಜರಾಜನು ಸಕಲ ವಿದ್ಯಾಪಾರಂಗತನಾಗಿ ಮರಳಿ ಧಾರಾನಗರಕ್ಕೆ ಬರುತ್ತಾನೆ. ರಾಜಶಾಸನದಂತೆ ಆತನೇ ಈ ಸಿಂಹಾಸನಕ್ಕೆ ಅಧಿಪತಿಯಾಗುತ್ತಾನೆ. ಆಗ ನನ್ನ ಮತ್ತು ನನ್ನ ಮಕ್ಕಳ ಭವಿಷ್ಯವೇನು? ಭೋಜರಾಜನಿಗೆ ಅಧೀನರಾಗಿ ಬಾಳಬೇಕಾಗುತ್ತದೆ. ನನ್ನ ನಂತರ ನನ್ನ ಮಕ್ಕಳಿಗೂ ಸಹ ಯಾವ ಅಧಿಕಾರವೂ ಇರುವುದಿಲ್ಲ. ಹೀಗಿರುವಾಗ ನನ್ನ ಭವಿಷ್ಯವನ್ನು ಹೇಗೆ ರೂಪಿಸಿಕೊಳ್ಳಲಿ? ಈ ಸಿಂಹಾಸನಕ್ಕೆ ನಾನೆ ಆಜೀವ ಪರ್ಯಂತರ ಅಧಿಕಾರಿಯಾಗಿರಲು. ನನ್ನ ನಂತರ ನನ್ನ ಮಕ್ಕಳಿಗೆ ಈ ಸಿಂಹಾಸನ ದೊರಕುವ ಹಾಗೆ ಯಾವ ಉಪಾಯ ಮಾಡಲಿ" ಎಂದು ನಾನಾ ರೀತಿಯಲ್ಲಿ ಯೋಚಿಸಲು ಆರಂಭಿಸಿದನು.

ಇದರಿಂದಾಗಿ ದಿನೇ ದಿನೇ ಆಡಳಿತದಲ್ಲಿ ಬಿಗಿ ತಪ್ಪಿ, ಅಭಿವೃದ್ಧಿ ಕಾರ್ಯಗಳು ಕುಂಠಿತಗೊಂಡವು. ಮುಂಜರಾಜನ ಮನಸ್ಸು ತುಂಬಾ ಅಧಿಕಾರದ ದಾಹವೇ ತುಂಬಿತ್ತು.

ಅದಲ್ಲದೆ ಸಿಂಧೂಲರಾಜನಂತೆ ಮುಂಜರಾಜನು ಅಷ್ಟಾಗಿ ವಿದ್ಯಾವಂತನೂ ಅಲ್ಲ, ಬುದ್ಧಿವಂತನೂ ಅಲ್ಲ. ರಾಜನೀತಿ ರಾಜಧರ್ಮ ಏನೆಂಬುದನ್ನೇ ಅರಿಯದವನು. ಅಣ್ಣನಾದ ಸಿಂಧೂಲರಾಜನು ಒಡಹುಟ್ಟಿದ ತಮ್ಮ ಎಂಬ ಮನೋವಾಂಚಲ್ಯದಿಂದ ಅವನಿಗೆ ಎಲ್ಲಾ ರೀತಿಯ ಪ್ರೋತ್ಸಾಹ ಕೊಡುತ್ತ ಬಂದಿದ್ದನಷ್ಟೆ.

ತನ್ನ ಅಣ್ಣನು ರಾಜ್ಯಭಾರ ಮಾಡುತ್ತಿದ್ದ ವೇಳೆಯಲ್ಲಿ ವಿದ್ವನ್ಮಣಿಗಳಿಗೆ, ಸಂಸ್ಕೃತ ಪಂಡಿತರಿಗೆ ಬ್ರಾಹ್ಮಣರಿಗೆ ಪ್ರೋತ್ಸಾಹ ಕೊಡುತ್ತಿದ್ದಂತೆ ಇವನ ಕಾಲದಲ್ಲಿ ಆ ಪ್ರೋತ್ಸಾಹ ದಿನೇ ದಿನೇ ಕಡಿಮೆಯಾಗುತ್ತ ಬಂತು.

ಯಾವುದೆ ವಿದ್ಯೆಯಲ್ಲೆ ಆಗಲಿ ಸಂಸ್ಕೃತ ವಿದ್ಯೆಯಲ್ಲಿಯೇ ಆಗಲಿ ಅವನಿಗೆ ಆಸಕ್ತಿ ಇಲ್ಲ. ಯಾವುದೆ ಕಲೆಗಳಲ್ಲೂ ಆಸಕ್ತಿ ಇರಲಿಲ್ಲ. ಇದರಿಂದಾಗಿ ಸಂಸ್ಕೃತ ಪಂಡಿತರಿಗೆ ಕಲಾವಿದರಿಗೆ ಪ್ರೋತ್ಸಾಹ ಕಡಿಮೆಯಾಗುತ್ತಾ ಬಂದಂತೆ ಅಂತಹ ಮಹಾನ್ ವಿದ್ಯಾಪಂಡಿತರು ಧಾರಾನಗರವನ್ನೇ ಬಿಟ್ಟು ಬೇರೊಬ್ಬ ರಾಜನ ಆಶ್ರಯಕ್ಕೆ ಹೋಗಬೇಕಾದ ಪರಿಸ್ಥಿತಿಯು ಒದಗಿ ಬಂದಿತ್ತು.

ಅರಮನೆಯಲ್ಲಿ ಆಗಾಗ್ಗೆ ನಡೆಯುತ್ತಿದ್ದ ವಿದ್ಯಾ ವೈಭವದಿಂದ ಕೂಡಿದ ವಿದ್ವತ್ ಸಭೆಗಳು ನಿಂತು ಹೋಗುತ್ತ ಬಂದಿತು. ಪ್ರಜೆಗಳ ಬಗ್ಗೆ ಹಿತಚಿಂತನೆ ಇಲ್ಲೇ ಇಲ್ಲವಾಗಿತ್ತು. ಮಿಗಿಲಾಗಿ ತನ್ನ ರಾಜ್ಯ ಬೊಕ್ಕಸವನ್ನು ಅತಿಯಾಗಿ ತುಂಬಿಸಿಕೊಳ್ಳುವ ದಾಹದಿಂದ ನಗರದ ಪ್ರಜೆಗಳಿಂದ ತೆರಿಗೆ ಸುಂಕ ಅತಿಯಾಗಿ ವಸೂಲಿ ಮಾಡಲು ಆರಂಭಿಸಿದ. ತೆರಿಗೆ ಕೊಡಲು ನಿರಾಕರಿಸಿದ್ದಲ್ಲಿ ಅಂತಹವರಿಗೆ ಸೂಕ್ತ ಶಿಕ್ಷೆ ವಿಧಿಸಬೇಕಾಗಿ ತಿಳಿಸಿದ್ದನು.

ಇದರಿಂದ ಪ್ರಜೆಗಳು ರಾಜನಲ್ಲಿಟ್ಟಿದ್ದ ಪ್ರೀತಿ ಗೌರವಗಳು ದಿನೇ ದಿನೇ ಕಡಿಮೆಯಾಗುತ್ತಾ ಬಂತು.

ಪ್ರಜೆಗಳನ್ನು ನಾನಾ ಬಗೆಯಲ್ಲಿ ಹಿಂಸಿಸಿ ತೆರಿಗೆ ವಸೂಲಿ ಮಾಡುವುದರ ಜೊತೆ ಭರತ ಖಂಡದ ಎಲ್ಲ ರಾಜ್ಯಗಳು ಎಂದಿಗಿಂತ ಹೇರಳವಾದ ಕಪ್ಪ ಕೊಡಬೇಕೆಂದು ಒತ್ತಾಯಿಸುತ್ತಿದ್ದನು. ಇದರಿಂದ ದೇಶ ದೇಶದ ಸಾಮಂತರ ರಾಜರುಗಳಿಗೆ ಮುಂಜರಾಜನ ಮೇಲೆ ಮಿತ್ರತ್ವಕ್ಕೆ ಬದಲಾಗಿ ವೈಶಮ್ಯ ಹೆಚ್ಚಾಯಿತು. ಎಷ್ಟೋ ಜನ ಸಂಸ್ಕೃತ ಪಂಡಿತರು ನಗರವನ್ನೇ ಬಿಟ್ಟು ದೂರವಾಗಿ ಬಿಟ್ಟಿದ್ದರು.

ವಿನಾ ಕಾರಣ ಅನೇಕ ದೇಶಗಳ ಸಾಮಂತ ರಾಜರುಗಳಲ್ಲಿ ದ್ವೇಷ ಭಾವನೆ ಮಾಡುವ ಹಾಗೆ ಅವಿವೇಕತನದಿಂದಲೂ ಅಧಿಕಾರದ ಅಹಂ ಇಂದಲೂ ತಾನೇ ತಾನಾಗಿ ವರ್ತಿಸತೊಡಗಿದ. ಇದರಿಂದ ಎಷ್ಟೋ ರಾಜರುಗಳು ವಿಶ್ವಾಸದಿಂದ ಕೊಡುತ್ತಿದ್ದ ಕಪ್ಪ ಕಾಣಿಕೆಗಳು ನಿಂತು ಹೋದುವು.

ಇದರಿಂದ ದಿನದಿನಕ್ಕೆ ರಾಜ್ಯ ಬೊಕ್ಕಸ ಕಡಿಮೆಯಾಗುತ್ತ ಬಂತು. ನಂತರ ಗುಪ್ತ ನಿಧಿ ಹಣ......... ಅದು ಖರ್ಚಾಗಿ ಬರಿದಾಗುವ ಪರಿಸ್ಥಿತಿ ಒದಗಿ ಬಂತು. ಕೆಲವು ಸಾಮಂತರು ಕಪ್ಪ ಕಾಣಿಕೆಗಳನ್ನು ಕೊಡುವುದನ್ನೆ ನಿಲ್ಲಿಸಿ ಬಿಟ್ಟರು. ಅವರುಗಳೊಡನೆ ಯುದ್ಧಮಾಡುವ ಎದೆಗಾರಿಕೆಯೂ ಇಲ್ಲವಾಗಿತ್ತು ಅವನಲ್ಲಿ. ನಾಗರೀಕರು ಅವನನ್ನು ನಾನಾ ರೀತಿಯಲ್ಲಿ ಶಪಿಸುತ್ತಿದ್ದರು. ಹಾಗೂ ಹೀಗೂ ಮುಂಜರಾಜನ ಆಡಳಿತದ ಐದು ವರ್ಷ ಕಳೆದು ಹೋಗಿತ್ತು.

# ಗುರುಕುಲದಿಂದ ಅರಮನೆಗೆ

ಸಕಲ ವಿದ್ಯಾ ಪಾರಂಗತನಾದ ಭೋಜರಾಜನು ಗುರುಕುಲದಿಂದ ಧಾರಾನಗರಕ್ಕೆ ಆಗಮಿಸುತ್ತಿದ್ದಾನೆ ಎಂಬ ಶುಭವಾರ್ತೆ ಮಿಂಚಿನ ವೇಗದಲ್ಲಿ ಹರಡುತ್ತಿದ್ದಂತೆ, ಆ ಪಟ್ಟಣದ ಸಮಸ್ತ ಪ್ರಜೆಗಳಿಗೆ ಮಹಾದಾನಂದವಾಯ್ತು. ಅತಿಶಯವಾದ ಸಂತೋಷದಿಂದ ಕುಣಿದಾಡಿದರು. ನಕ್ಕು ನಲಿದಾಡಿದರು. ಎಲ್ಲೆಲ್ಲೂ ಉತ್ಸಾಹದ ಅಲೆ ಕಾರಂಜಿಯಂತೆ ಚಿಮ್ಮಿ ಹರಿಯುತ್ತಿತ್ತು. ಮುಂದೆ ತಮ್ಮ ಪಟ್ಟಣವನ್ನಾಳುವ ಮಹಾನಾಯಕ, ರತ್ನಸಿಂಹಾಸನಕ್ಕೆ ಅಧಿಪತಿಯಾಗಲಿರುವ ಭೋಜರಾಜನ ಗೌರವಾರ್ಥವಾಗಿ ನಗರದ ಬೀದಿ ಬೀದಿ ರಾಜಬೀದಿಗಳಲ್ಲೂ ಹಸಿರು ಚಪ್ಪರ ತಳಿರು ತೋರಣಗಳಿಂದಲೂ ಬಣ್ಣಬಣ್ಣದ ಸಾಲು ಬಾವುಟಗಳಿಂದಲೂ. ಬಗೆಬಗೆಯ ಸುಗಂಧ ಪುಷ್ಪಗುಚ್ಛ ಪುಷ್ಪಹಾರಗಳಿಂದಲೂ ಭವ್ಯ ಅರಮನೆಗೂ ಪಟ್ಟಣಕ್ಕೂ ಯಾವುದೆ ಭೇದವಿಲ್ಲದಂತೆ ಭವ್ಯವಾಗಿ ಶೃಂಗರಿಸಿದ್ದರು. ಅಷ್ಟು ಮಾತ್ರವಲ್ಲದೆ ರಾಜರು ಪಟ್ಟಣವನ್ನು ಪ್ರವೇಶಿಸುವ ಮಹಾದ್ವಾರವನ್ನು ಸಹ ಅತಿಶಯ ರೀತಿಯಲ್ಲಿ ಅಲಂಕರಿಸಿದ್ದರು.

ಮಹಾದ್ವಾರದಲ್ಲಿ ರಾಜಲಾಂಛನಗಳು ಹಾರಾಡುತ್ತಿದ್ದವು. ಬೀದಿ ಬೀದಿಗಳಲ್ಲೂ ಸುಗಂಧಮಯವಾದ ನೀರನ್ನು ಚುಮುಕಿಸಿ, ರಂಗವಲ್ಲಿಯಿಂದ ಚಿತ್ರಚಿತ್ರವಾಗಿ ಹಸೆಗೆರೆದಿದ್ದರು. ಅಷ್ಟೇ ಅಲ್ಲದೆ - ತಮ್ಮ ತಮ್ಮ ಮನೆಯ ಬಾಗಿಲುಗಳಿಗೂ ಸಹ ಹಸಿರು ತೋರಣಗಳಿಂದ ಅಲಂಕರಿಸಿದ್ದರು. ಎಲ್ಲೆಲ್ಲೂ ಸಂಭ್ರಮ ಸಡಗರ ಸಂತೋಷ ಹೇಳತೀರದಷ್ಟು ಅವರ್ಣನೀಯವಾಗಿತ್ತು. "ರಾಜಾ ಪ್ರತ್ಯಕ್ಷ ದೇವತಾ" ಎಂಬ ನಾಣ್ನುಡಿಯಂತೆ "ಪರಮಾತ್ಮನೆ ತಾವಿರುವ ಧಾರಾನಗರಕ್ಕೆ ಬರುತ್ತಿದ್ದಾನೆ" ಎಂಬ ಮೇರುಭಾವನೆ ಪ್ರತಿಯೊಬ್ಬರ ಮನದಲ್ಲೂ ಮನೆಮಾಡಿತ್ತು.

ಧಾರಾನಗರದ ಪ್ರಜೆಗಳು ಆ ಪಟ್ಟಣದ ಎಲ್ಲ ದೇವಾಲಯಗಳಲ್ಲೂ.... ಪ್ರಾರ್ಥನಾ ಮಂದಿರಗಳಲ್ಲೂ ಗುರುಕುಲಗಳಲ್ಲೂ ಸಹ ನಾನಾ ವಿಧವಾದ ಸುಗಂಧಮಯವಾದ ಪುಷ್ಪಹಾರಗಳಿಂದಲೂ ತಳಿರು ತೋರಣಗಳಿಂದಲೂ ಅಲಂಕರಿಸಿ ವಿಶೇಷ ಪೂಜೆಗೆ ವ್ಯವಸ್ಥೆಗೊಳಿಸಿದ್ದರು.

ಇತ್ತ ಅರಮನೆಯನ್ನು ಸಹ ಎಲ್ಲ ರೀತಿಯಲ್ಲೂ ವೈಭವಪೂರ್ಣವಾಗಿ ಅತಿಶಯವಾಗಿ ಸಿಂಗರಿಸಿದ್ದರು. ಪ್ರಜೆಗಳ ಉತ್ಸಾಹದಂತೆ ಅರಮನೆಯ ರಾಜ ಪರಿವಾರದವರಿಗೂ, ರಾಜಸೇವಕರಾದಿಯಾಗಿ ಎಲ್ಲರೂ ಉತ್ಸಾಹಭರಿತರಾಗಿ ತಮ್ಮ ಸಂತೋಷವನ್ನು ಒಬ್ಬರಿಗೊಬ್ಬರು ಹಂಚಿಕೊಳ್ಳುತ್ತಾ ಹರ್ಷದಿಂದ ಓಡಾಡುತ್ತಿದ್ದರು.

ಭವ್ಯಾಲಂಕೃತವಾಗಿದ್ದ ರತ್ನಖಚಿತ ಮಹಾದ್ವಾರದ ಬಳಿ ಅರಮನೆಯ ರಾಜ ಪುರೋಹಿತರು, ಅನೇಕ ಉಪಮಂತ್ರಿಗಳು ಸೇನಾಧಿಪತಿಗಳು, ಕುಲಪತಿಗಳು, ಮಠಾಧಿಪತಿಗಳು, ಅರಮನೆಯ ಉನ್ನತ ಅಧಿಕಾರಿಗಳು, ವಿದ್ವನ್ಮಣಿಗಳು, ಸಂಸ್ಕೃತ ಪಂಡಿತರು, ವೇದ ಸ್ವರೂಪರಾದ ಬ್ರಾಹ್ಮಣೋತ್ತಮರು, ಅನೇಕಾನೇಕ ಗಣ್ಯ ವ್ಯಕ್ತಿಗಳು

ಪುರ ಪ್ರಮುಖರು. ಪ್ರಜೆಗಳು ಎಲ್ಲರಾದಿಯಾಗಿ ಕಿಕ್ಕಿರಿದು ನೆರೆದಿದ್ದರು. ಎಲ್ಲರೂ ಭೋಜರಾಜನ ಆಗಮನವನ್ನೇ ಎದುರು ನೋಡುತ್ತಿದ್ದರು.

ಭೋಜರಾಜನನ್ನು ರಾಜವೈಭವದಿಂದಲೂ, ವಿಧಿವತ್ತಾದ ಪೂರ್ಣಕುಂಭ ಸಮೇತವಾಗಿ ಸ್ವಾಗತಿಸಲು ರಾಜ ಪುರೋಹಿತರು ಮಂಗಳಕರವಾದ ಸಕಲ ಸಿದ್ಧತೆಗಳನ್ನು ಅಣಿ ಮಾಡಿಸಿದ್ದರು. ವೇದಘೋಷಮಾಡಲು ತೇಜಸ್ವಿಗಳಾದ ನೂರಾರು ವಿಪ್ರರು ರಾಜ ಪುರೋಹಿತ ಬಳಿನಿಂತಿದ್ದರು.

ರಾಜ ಪುರೋಹಿತರು ಅಂದು ಚಿನ್ನದ ದಾರದ ಅಂಚಿನಿಂದ ಕೂಡಿದ ಪಟ್ಟೆ ಮಡಿವಸ್ತ್ರವನ್ನುಟ್ಟು ರತ್ನಖಚಿತ ಕಾಶ್ಮೀರ ಶಾಲನ್ನು ಹೊದ್ದಿದ್ದರು. ಕೊರಳಲ್ಲಿ ಕಂಠೀಹಾರ, ರುದ್ರಾಕ್ಷಿಹಾರಗಳಿಂದ ಶೋಭಿತರಾಗಿದ್ದರು. ಲಲಾಟದಲ್ಲಿ ಎದ್ದು ಕಾಣುತ್ತಿದ್ದ ವಿಭೂತಿ ಕುಂಕುಮ ಸಾಕ್ಷಾತ್ ಈಶ್ವರ ಸ್ವರೂಪರಂತೆ ಮಹಾ ತೇಜಸ್ಸಿನಿಂದ ಕಾಣುತ್ತಿದ್ದರು.

ಕಡು ಚೆಲುವೆಯರಾದ ನೂರಾರು ಸುಮಂಗಲಿಯರು ಮಧುಪರ್ಕ ಮಂಗಳದ್ರವ್ಯಾದಿಗಳನ್ನು ಹಿಡಿದು ಕಾದು ನಿಂತಿದ್ದರು. ಅವರೆಲ್ಲರೂ ಬಂಗಾರದ ಹರಿವಾಣದಲ್ಲಿ ಸುಗಂಧ ಪುಷ್ಪಗಳು ಹರಿದ್ರಾ ಕುಂಕುಮ ಚಂದನಾದಿಗಳನ್ನು ಹಿಡಿದು ವೈಯ್ಯಾರದಿಂದ ಕುಡಿ ನೋಟ ಬೀರುತ್ತ ನಿಂತಿದ್ದರು. ಎಲ್ಲೆಲ್ಲೂ ಸಂಭ್ರಮ ಸಡಗರ ಇವುಗಳಿಂದ ಕೂಡಿತ್ತು. ನೂರಾರು ಮಂಗಳ ವಾದ್ಯಮೊಳಗುತ್ತಿತ್ತು.

ನೆರೆದಿದ್ದ ಎಲ್ಲರೂ ಬಹು ಕುತೂಹಲದಿಂದ ಭೋಜರಾಜನ ಆಗಮನವನ್ನೇ ನೆಟ್ಟ ದೃಷ್ಟಿಯ ಬಿಟ್ಟ ಕಣ್ಣಿಂದ ನೋಡುತ್ತಿದ್ದರು.

ಆ ಸಮಯಕ್ಕೆ ಸರಿಯಾಗಿ ಅಶ್ವಾರೂಢ ಸರದಾರರಿಬ್ಬರು ವಾಯುವೇಗದಿಂದ ಬರುತ್ತಿದ್ದುದನ್ನು ದೂರದಿಂದಲೇ ಗಮನಿಸಿದ ತೀಕ್ಷ್ಣ ದೃಷ್ಟಿಯ ಸೂಕ್ಷ್ಮ ಬುದ್ಧಿಯುಳ್ಳಂಥ ರಾಜ ಪುರೋಹಿತರು "ಆ ರೀತಿ ಬರುತ್ತಿರುವುದು ಬಹುಶಹ ಮಹಾಮಂತ್ರಿಗಳು ಹಾಗೂ ಭೋಜರಾಜರೇ ಇರಬೇಕು" ಎಂದೇ ಭಾವಿಸಿದರು.

ಹಾಗೆನ್ನುಕೊಳ್ಳುತ್ತಿದ್ದಂತೆ ಆ ಸರದಾರರು ರಾಜ ಪುರೋಹಿತರ ಬಳಿಗೆ ಬಂದು ಸಾಷ್ಟಾಂಗಿಸಿ ವಿಷಯ ತಿಳಿಸುತ್ತ "ಮಹಾಮಂತ್ರಿಗಳು ಭೋಜರಾಜನೊಡನೆ ಚಿನ್ನದ ರಾಜರಥದಲ್ಲಿ ಆಗಮಿಸುತ್ತಿದ್ದಾರೆ" ಎಂದು ಹೇಳಿ ಆ ವಿಷಯವನ್ನು ಮಹಾರಾಜ ಮುಂಜರಾಜರಿಗೆ ತಿಳಿಸಲು ಅರಮನೆಯತ್ತ ಸಾಗಿದರು. ಆ ಸರದಾರ ಮತ್ಯಾರು ಅಲ್ಲದೆ ಅಚಲಸಿಂಹನೆ ಆಗಿದ್ದ. ಮಹಾರಾಜ ಮುಂಜರಾಜನು ಅಂದು ಭೋಜರಾಜನು ಬರುವ ವಿಶೇಷ ದಿನವೇ ಆದ್ದರಿಂದ ತಾನೂ ಸಹ ವಿಶೇಷವಾದ ವಸ್ತ್ರಾಭರಣ ಭೂಷಣ ಪ್ರಾಯನಾಗಿ ಅಲಂಕರಿಸಿಕೊಂಡಿದ್ದನು. ಭೋಜರಾಜನು ಬರುವ ಸುದ್ದಿಯನ್ನೇ ಎದುರು ನೋಡುತ್ತ ತನ್ನ ಏಕಾಂತ ಭವನದಲ್ಲಿ ರತ್ನಖಚಿತ ಪೀಠದಲ್ಲಿ ಉಪಸ್ಥಿತನಾಗಿದ್ದನು.

ಸುದ್ದಿಯನ್ನು ಹೊತ್ತು ತಂದ ಸರದಾರ ಅಚಲ ಸಿಂಹನು ನೇರವಾಗಿ ಮಹಾರಾಜರ ಏಕಾಂತ ಭವನಕ್ಕೆ ಬಂದು ಒಳ ಪ್ರವೇಶಮಾಡಿದನು. ರತ್ನಪೀಠದಲ್ಲಿ ಆಸೀನನಾಗಿದ್ದ ಮುಂಜರಾಜನಿಗೆ ವಂದಿಸಿ ವಿನಮ್ರವಾಗಿ ನುಡಿಯುತ್ತ

"ಮಹಾರಾಜರಿಗೆ......... ಜಯವಾಗಲಿ. ಮಹಾಮಂತ್ರಿಗಳು ಭೋಜರಾಜರನ್ನು ಕರೆತರುತ್ತಿದ್ದಾರೆ. ಇನ್ನೇನು ಪಟ್ಟಣವನ್ನು ಸಮೀಪಿಸಿ ಬರುತ್ತಿದ್ದಾರೆ." ಎಂದು ತಿಳಿಸಿದನು.

"ಒಳ್ಳೇದು ಅಚಲಸಿಂಹ. ಅರಮನೆಯ ಮಹಾದ್ವಾರದ ಮುಂದೆ ರಥಗಳು ಸಿದ್ಧವಾಗಲಿ"- ಎಂದು ಅಧಿಕಾರ ವಾಣಿಯಿಂದಲೇ ನುಡಿದನು ಮುಂಜರಾಜ.

"ಭೋಜರಾಜನು ವಿದ್ಯಾ ಪಾರಂಗತನಾಗಿ ಬಂದು ಬಿಟ್ಟ. ಇನ್ನೇನು ಒಂದೆರಡು ವರ್ಷಗಳಲ್ಲಿ ನನ್ನ ಎಲ್ಲ ಅಧಿಕಾರವನ್ನು ಸಿಂಹಾಸನವನ್ನು ಅವನಿಗೆ ಬಿಟ್ಟು ಕೊಡಬೇಕು" - ಎಂದು ನಿಟ್ಟುಸಿರು ಬಿಡುತ್ತ ಅದ್ಯಾವುದೊ ಅವ್ಯಕ್ತ ದುರಾಲೋಚನೆಯಿಂದ ತನ್ನಲ್ಲಿ ತಾನೇ ನುಡಿದುಕೊಂಡ. ಕೇವಲ ಮೇಲುನೋಟಕ್ಕೆ ಮಾತ್ರ ಎಲ್ಲರ ಮೆಚ್ಚುಗೆಗೆ ಪಾತ್ರನಾಗಿದ್ದ ಮುಂಜರಾಜ.

ಅಧಿಕಾರ ದಾಹ ಪೀಡಿತನಾದ ಮುಂಜರಾಜನು ಮುಂದಿನ ಭವಿಷ್ಯವನ್ನು ಕುರಿತು ಒಳಗೊಳಗೆ ಚಿಂತಿಸುತ್ತಿದ್ದ. ಆ ರೀತಿ ಹೆಚ್ಚು ಚಿಂತಿಸುವಂತಿಲ್ಲ. ಆ ಕಾಲ ಭೋಜರಾಜನು ಬರುವ ಶುಭ ಸಂಭ್ರಮದ ಕಾಲವಾಗಿತ್ತು.

ಕೇವಲ ಕೃತಕವಾದ ಉತ್ಸಾಹ ತಂದುಕೊಳ್ಳುತ್ತ ರಾಜಪರಿವಾರದೊಂದಿಗೆ ತನ್ನ ಏಕಾಂತಭವನದಿಂದ ಹೊರಟು ಮಹಾದ್ವಾರಕ್ಕೆ ಬಿಜಯಿಸಿದನು. ರಾಜಲಾಂಛನದಿಂದ ಕೂಡಿದ ಚಿನ್ನದ ರಥ (ಸಿಂಧೂಲರಾಜನು ಉಪಯೋಗಿಸುತ್ತಿದ್ದ ರಥ) ಸಿದ್ಧವಾಗಿನಿಂತಿತ್ತು.

ಮಂದಸ್ಮಿತನಾಗಿ ರಥದಲ್ಲಿ ಕುಳಿತನು. ಮುಂಜರಾಜನು ಕುಳಿತಂತೆ ಮಿಕ್ಕೆಲ್ಲ ರಾಜಪರಿವಾರದವರು ರಾಜರಥದ ಹಿಂದೆ ನಿಂತಿದ್ದ ರಥಗಳಲ್ಲಿ ಕುಳಿತರು.

ಪಂಚ ಕುದುರೆಗಳಿಂದ ಕೂಡಿದ ರಾಜರಥವು ಅರಮನೆಯಿಂದ ಹೊರಟು ರಾಜಬೀದಿಯ ಮೂಲಕ ಪಟ್ಟಣದ ಮಹಾದ್ವಾರವನ್ನು ಕುರಿತು ಸಾಗುತ್ತಿತ್ತು. ಮಿಕ್ಕ ರಾಜ ಪರಿವಾರದ ರಥಗಳು ಮುಂಜರಾಜನು ಕುಳಿತಿದ್ದ ರಾಜರಥವನ್ನು ಹಿಂಬಾಲಿಸಿದವು.

ಹಾಗೆ ರಾಜಬೀದಿಯಲ್ಲಿ ಸಾಗುತ್ತಿದ್ದ ಮುಂಜರಾಜನು ರಸ್ತೆಯ ಇಕ್ಕೆಡೆಯಲ್ಲೂ ಉದ್ದಕ್ಕೂ ಉತ್ಸಾಹದಿಂದ ಕಾದು ನಿಂತಿದ್ದ ಲಕ್ಷೋಪಲಕ್ಷ ಪ್ರಜೆಗಳನ್ನು ಮತ್ತು ಆತನ ಸ್ವಾಗತಕ್ಕಾಗಿ ರಾಜಬೀದಿಗಳನ್ನು ಅಲಂಕರಿಸಿದ ರೀತಿ ಹಾಗೂ ರಸ್ತೆ ಉದ್ದಕ್ಕೂ ಶೃಂಗರಿಸಿದ ಹಸಿರು ತೋರಣಗಳ ವೈಭವ - ಇವುಗಳನ್ನು ನೋಡಿ ಬೆಕ್ಕಸ ಬೆರಗಾಗಿ ಬಿಟ್ಟಿದ್ದನು.

"ಈ ರೀತಿ ಪ್ರಜೆಗಳು ಇಂಥ ಅಲಂಕಾರವನ್ನು ಐದು ವರ್ಷಗಳ ಅಧಿಕಾರಾವಧಿಯಲ್ಲಿ ಒಂದು ದಿವಸವಾದರೂ ಮಾಡಿರಲಿಲ್ಲವಲ್ಲಾ" ಎಂದು ಮನದಲ್ಲೆ ಅಂದು ಕೊಂಡನು. ಸಾಲದ್ದಕ್ಕೆ ಇಕ್ಕೆಡೆಯಲ್ಲೂ ಸಾಲಾಗಿ ನಿಂತಿದ್ದ ಅಸಂಖ್ಯ ನಾಗರಿಕರಿಂದ ಒಕ್ಕೊರಲಿನಿಂದ ಕೇಳಿ ಬರುತ್ತಿದ್ದ ಜಯಕಾರ "ಭೋಜ ರಾಜರಿಗೆ ಜಯವಾಗಲಿ. ಭೋಜರಾಜರಿಗೆ ಜಯವಾಗಲಿ" ಎಂದು ಮುಗಿಲು ಮುಟ್ಟುವಂತೆ ಜಯಕಾರ ಹಾಕುತ್ತಿದ್ದುದು ಮುಂಜರಾಜನಿಗೆ ಮತ್ತಷ್ಟು ಆತಂಕಕ್ಕೆ ಎಡೆ ಮಾಡಿಕೊಟ್ಟಿತು. ಯಾವುದೋ ಅವ್ಯಕ್ತ ಶಕ್ತಿಯೊಂದು ಕರುಳು ಹಿಂಡಿದಂತಾಗಿತ್ತು -

ಮುಂಜರಾಜನಿಗೆ. ಆದರೆ ಆದ್ಯಾವುದನ್ನು ಹೊರಹೊಮ್ಮದಂತೆ ತಾನೊಬ್ಬ ಆದರ್ಶರಾಜನಾಗಿ ಪ್ರಜೆಗಳಿಗೆ ಗೋಚರಿಸಬೇಕೆಂದು ತನ್ನ ಮನದ ತೊಳಲನ್ನು ತನ್ನ ಹೃದಯ ಮಂದಿರದಲ್ಲೆ ಬಚ್ಚಿಟ್ಟಿದ್ದನು. ತೋರಿಕೆಗೆ ಮಾತ್ರ ತಾನೊಬ್ಬ ವಿಶ್ವಾಸವಂತ ಪ್ರಜಾಪ್ರೇಮಿ ರಾಜನಂತೆ ವರ್ತಿಸುತ್ತಿದ್ದನು.

ಅದಕ್ಕಾಗಿ ಸಮಯವನ್ನು ಕಾಯುತ್ತಿದ್ದನು.

ರಾಜರಥವು ಮಹಾದ್ವಾರಕ್ಕೆ ಬಂದು ಸೇರಿತು. ಆ ವೇಳೆಗೆ ಸರಿಯಾಗಿ ಮಹಾಮಂತ್ರಿಯರೊಡಗೂಡಿದ್ದ ಭೋಜರಾಜನ ರಥವು ಸಹ ಅಲ್ಲಿಗೆ ಬಂದು ಸೇರಿತು.

ಭೋಜರಾಜನ ರಥ ಬಂದಂತೆ ಅಲ್ಲಿ ನೆರೆದಿದ್ದ ಸಮಸ್ತರು ಏಕ ಕಂಠದಿಂದ ನಭೋಮಂಡಲ ಭೇದಿಸುವಂತೆ ಜಯಕಾರ ಹಾಕುತ್ತ,

"ಭೋಜರಾಜರಿಗೆ ಜಯವಾಗಲಿ, ಮಹಾರಾಜ ಭೋಜರಾಜರಿಗೆ ಜಯವಾಗಲಿ, ವಿದ್ವನ್ಮಣಿ ತಿಲಕರಾದ ಭೋಜರಾಜರಿಗೆ ಜಯವಾಗಲಿ, ಸಕಲ ವಿದ್ಯಾ ಪಾಂಡಿತ್ಯ ವಿಭೂಷಣ ಭೋಜರಾಜರಿಗೆ ಜಯವಾಗಲಿ" ಎಂದು ಹರ್ಷೋದ್ಗಾರದ ಜಯಕಾರ ಧ್ವನಿ ಮೊಳಗಿದವು. ನೂರಾರು ಮಂಗಳ ವಾದ್ಯಗಳು, ಜೊತೆಗೆ ಭೇರಿ ದುಂದುಭಿ ಮೊಳಗುತ್ತಿತ್ತು. ಅದಲ್ಲದೆ ಅದೇ ವೇಳೆಗೆ ಸರಿಯಾಗಿ ನೂರಾರು ವಿಪ್ರರಿಂದ ವೇದಘೋಷ ಕೇಳಿಬರುತ್ತಿತ್ತು. ಎಲ್ಲೆಲ್ಲೂ ಸಂಭ್ರಮ ಸಡಗರದ ಆ ಸೊಬಗು ಅವರ್ಣನೀಯವಾಗಿತ್ತು.

ರಾಜ ಪುರೋಹಿತರು ಮಹಾರಾಜ ಮುಂಜರಾಜರ ಸಮ್ಮುಖದಲ್ಲಿ ರಾಜಗೌರವಾರ್ಥವಾಗಿ ಪೂರ್ಣ ಕುಂಭದೊಡನೆ ಮಹಾ ತೇಜಸ್ವಿಯಾದ ಭೋಜರಾಜನ್ನು ಗೌರವಿಸಿದರು. ಆಗ ಭೋಜರಾಜನ ಕೊರಳಿಗೆ ಮುಂಜರಾಜನೇ ಮುಂದೆ ಬಂದು ವಿಜಯ ಮಾಲೆಯನ್ನು ಹಾಕಿ ಸತ್ಕರಿಸಿದ್ದನು.

ಸುಮಂಗಲಿಯರು ಭೋಜರಾಜನ ಹಣೆಗೆ ತಿಲಕವಿಟ್ಟು, ಶುಭದಾರತಿ ಬೆಳಗಿದರು. ಎಲ್ಲ ಮಂಗಳ ಕಾರ್ಯಮುಗಿದಂತೆ ಭೋಜನು, ಹಿರಿಯರು ಪೂಜ್ಯರು ಆದ ರಾಜ ಪುರೋಹಿತರಿಗೂ, ಮಹಾಮಂತ್ರಿಗಳಿಗೂ ನಂತರ ತನ್ನ ಚಿಕ್ಕಪ್ಪನೇ ಆದ ಮಹಾರಾಜ ಮುಂಜರಾಜನಿಗೂ ವಿನಯಾಭರಣ ಭೂಷಿತನಾಗಿ ಎಲ್ಲರಿಗೂ ಸಾಷ್ಟಾಂಗ ನಮಸ್ಕಾರ ಮಾಡಿದನು.

ಎಲ್ಲರು ಅವನನ್ನು ಮುಕ್ತ ಕಂಠದಿಂದ ಹರಸಿ ಹಾರೈಸಿದರು.

ಅದೆಲ್ಲ ಕಾರ್ಯವು ಮುಗಿದಂತೆ ಪ್ರಜೆಗಳ ಅಪೇಕ್ಷೆಯಂತೆ ಭೋಜರಾಜರು ಸಿದ್ಧವಾಗಿ ನಿಂತಿದ್ದ ಪಟ್ಟದ ಆನೆಯ ಮೇಲೇರಿ ಭವ್ಯಾಲಂಕೃತವಾದ ಚಿನ್ನದ ಅಂಬಾರಿಯಲ್ಲಿ ಉಪಸ್ಥಿತನಾದನು.

ಭೋಜರಾಜನನ್ನು ಹೊತ್ತ ಭವ್ಯಾಲಂಕೃತ ಅಂಬಾರಿ ಆನೆಯು ಸಕಲಮಂಗಳ ವಾದ್ಯದೊಡನೆ ಹೊರಟಿತು.

ಅಭೂತಪೂರ್ವ ವೈಭವಸಿರಿಯಲ್ಲಿ ಸಾಗುತ್ತಿದ್ದ ಅಂಬಾರಿ ಆನೆ........ ಮುಂದೆ ಸಾಗುತ್ತಿದ್ದಂತೆ ರಸ್ತೆಯ ಇಕ್ಕೆಡೆಯ ಉಪ್ಪರಿಗೆ ಮನೆಯಲ್ಲಿ ನಿಂತಿದ್ದ ಪುರಮಹಿಳೆಯರು ತಟ್ಟೆಗಳಲ್ಲಿ ತುಂಬಿರಿಸಿದ್ದ ಬಿಡಿ ಪುಷ್ಪಗಳಿಂದ ಪುಷ್ಪವೃಷ್ಟಿಗರೆದರು. ಜಯಕಾರ ಹಾಕುತ್ತಿದ್ದರು.

ಮುಂಜರಾಜನು ಹಾಗೂ ಸಕಲ ರಾಜಪರಿವಾರದವರು ಆ ಪಟ್ಟದ ಆನೆಯನ್ನನುಸರಿಸಿ ಉದ್ದಕ್ಕೂ ಸಾಗುತ್ತಿದ್ದರು. ಮಾರ್ಗದುದ್ದಕ್ಕೂ ಕಿಕ್ಕಿರಿದು ಜನರು ಭೋಜರಾಜರಿಗೆ ಜಯವಾಗಲಿ ಎಂದು ಜಯಕಾರರ ಹಾಕುತ್ತಲೇ ಇದ್ದರು.

ಬಹು ವರ್ಣನಾತೀತವಾದ ಆ ಮೆರವಣಿಗೆ ದಿವ್ಯಾಲಂಕೃತ ರಾಜ ಬೀದಿಗಳ ಮೂಲಕ ಅರಮನೆ ಸೇರಿತ್ತು.

ಸಕಲ ರಾಜ ವೈಭವ, ರಾಜಗೌರವದೊಂದಿಗೆ ಚಿನ್ನದ ಅಂಬಾರಿ ಮೆರವಣಿಗೆಯ ಮೂಲಕ ಅರಮನೆಗೆ ಕರೆತಂದ ಭೋಜನನ್ನು ಮಂಗಳವಾದ್ಯದೊಂದಿಗೆ ರಾಜಭವನಕ್ಕೆ ಸ್ವಾಗತಿಸಿದರು.

ರಾಜಭವನಕ್ಕೆ ಬಿಜಯಿಸುತ್ತಿದ್ದ ಭೋಜನು ಅಲ್ಲಿ ತುಂಬ ನೆರೆದಿದ್ದ ಎಲ್ಲರ ಕಣ್ಣಿಗೆ ಸಾಕ್ಷಾತ್ ಶ್ರೀ ಕೃಷ್ಣ ಪರಮಾತ್ಮನೆ ಆ ರಾಜಭವನಕ್ಕೆ ಬರುತ್ತಿರುವನೊ ಎಂಬಂತೆ ಭಾಸವಾಗುತ್ತಿತ್ತು. ಆ ವೈಭವೋಪೇತ ರಾಜಭವನದಲ್ಲೂ ಸಹ ದೇವ ಕನ್ಯೆಯರಿಗೆ ಸಮಾನರಾದ ನೂರಾರು ಸುಕನ್ಯೆಯರು ಬಂಗರಾದ ಹರಿವಾಣಗಳಲ್ಲಿ ತುಂಬಿರಿಸಿಕೊಂಡಿದ್ದ ಸುಗಂಧ ಪುಷ್ಪಗಳ ವೃಷ್ಟಿಗರೆಯುತ್ತಿದ್ದರು. ಅಂದಿನ ಭೋಜರಾಜನ ವೈಭವವನ್ನು ಎಷ್ಟೇ ವರ್ಣಿಸುತ್ತಾ ಹೋದರು ಅದು ತೀರ ಕಡಿಮೆಯಾದೀತು ಎಂಬಂತೆ, ಅತ್ಯಮೋಘ ವೈಭವ ಸಿರಿಯಲ್ಲಿ ಜರುಗುತ್ತಿತ್ತು.

ಮುಂಜರಾಜನೆ ಮುಂದಾಗಿ ಬಂದು ಭೋಜರಾಜನನ್ನು ಜೊತೆಗೂಡಿ ಕರೆದುಕೊಂಡು ರತ್ನಸಿಂಹಾಸನದ ಬಳಿಗೆ ಬಂದನು. ಆ ಸಿಂಹಾಸನದಲ್ಲಿ ಭೋಜನನ್ನು ಕುಳ್ಳಿರಿಸಿ ತಾನು ಕುಳಿತನು. ಪೂರ್ವಯೋಜಿತವಾಗಿ ಅಂದಿನ ಎಲ್ಲಾ ಕಾರ್ಯಕ್ರಮಗಳು ಮಂಗಳವಾದ್ಯದೊಂದಿಗೆ ಅತ್ಯಂತ ಯಶಸ್ವಿಯಾಗಿ ನಡೆಯಿತು.

# ಮುಂಜರಾಜನ ಅಸೂಯೆ

ಆ ದಿನ ಮುಂಜರಾಜನು ಅರಮನೆಯ ತನ್ನ ಏಕಾಂತ ಭವನದಲ್ಲಿ ಸ್ಥಿಮಿತವಿಲ್ಲದ ಮನಸ್ಸಿನಿಂದ ಮಗ್ಗದ ಲಾಳಿಯಂತೆ ಶತಪತ ತಿರುಗಾಡುತ್ತಾ ಅದೇನನ್ನೋ ಕುರಿತು ದೀರ್ಘವಾಗಿ ಆಲೋಚಿಸುತ್ತಿದ್ದನು.

ಸಿಂಹಾಸನದ ವ್ಯಾಮೋಹ ಹಾಗೂ ಅಧಿಕಾರ ಮನ್ನಣೆಯ ದಾಹದಿಂದ ಉತ್ತಮ ಗುಣಗಳನ್ನೊಳಗೊಂಡಿದ್ದ ಮುಂಜರಾಜನ ನಿರ್ಮಲ ಮನಸ್ಸನ್ನು ದುರ್ನೀತಿಗೆ ಎಡ ಮಾಡಿ ಕೊಟ್ಟಿತ್ತು.

ಕಡೆಗೆ ಅಂತಿಮ ತೀರ್ಮಾನಕ್ಕೆ ಬಂದ ಮುಂಜರಾಜನು ಅಲ್ಲಿಯೇ ಇದ್ದ ಕರೆ ಘಂಟೆಯನ್ನು 'ಠಣ್ ಠಣ್' ಎಂದು ಬಾರಿಸುತ್ತಾ "ಯಾರಲ್ಲಿ?" ಎಂದು ಅಧಿಕಾರವಾಣಿಯಿಂದ ನುಡಿದ.

ಆ ತಕ್ಷಣವೇ ಕರ್ತವ್ಯ ನಿರತನಾಗಿದ್ದ ಸಮವಸ್ತ್ರಧಾರಿ ರಾಜಸೇವಕನೊಬ್ಬನು ಮಹಾರಾಜನ ಮುಂದೆ ಹಾಜರಾಗಿ, ವಿನಮ್ರನಾಗಿ ತಲೆಬಾಗಿ ವಂದಿಸಿ "ಮಹಾರಾಜರಿಗೆ ಜಯವಾಗಲಿ ಅಪ್ಪಣೆಯಾಗಬೇಕು" ಎಂದ.

"ಸರದಾರ ಅಚಲ ಸಿಂಹನನ್ನು ಈ ಕೂಡಲೇ ಇಲ್ಲಿಗೆ ಬರುವಂತೆ ತಿಳಿಸು" ಎಂದು ಆಜ್ಞಾಪಿಸಿದ. "ಅಪ್ಪಣೆ ಪ್ರಭು" ಎಂದು ಆ ಸ್ಥಳದಿಂದ ನಿರ್ಗಮಿಸಿದ ಸೇವಕ.

ಕೊಂಚ ಹೊತ್ತು ಕಳೆದಂತೆ ಅಚಲ ಸಿಂಹನು ರಾಜರ ಮುಂದೆ ಹಾಜರಾಗಿ, ರಾಜಭಕ್ತಿಯಿಂದ ತಲೆಬಾಗಿ ವಂದಿಸಿ "ಪ್ರಭುಗಳಿಗೆ ಜಯವಾಗಲಿ, ತಾವು ನನ್ನನ್ನು ಈ ಕೂಡಲೇ ಇಲ್ಲಿಗೆ ಬರಹೇಳಿರುವುದಾಗಿ ತಿಳಿದು ಬಂತು....." ಎಂದಷ್ಟೇ ಹೇಳಿ ರಾಜನ ಅಪ್ಪಣೆಯನ್ನೇ ನಿರೀಕ್ಷಿಸುತ್ತಾ ನಿಂತ.

ರತ್ನ ಖಚಿತ ಪೀಠದಲ್ಲಿ ದರ್ಪದಿಂದಲೇ ಕುಳಿತಿದ್ದ ಮುಂಜರಾಜನು ಅಚಲ ಸಿಂಹನೊಮ್ಮೆ ಅಪಾದಮಸ್ತಕವಾಗಿ ನೋಡುತ್ತ "ಹೌದು ಅಚಲ ಸಿಂಹ..... ಈಗ ನಿನ್ನಿಂದ ಒಂದು ಮಹತ್ತರವಾದ ರಹಸ್ಯ ಕಾರ್ಯ ಆಗಬೇಕಾಗಿದೆ".

"ಅಪ್ಪಣೆಯಾಗಲಿ ಪ್ರಭು, ಅದೇನೇ ಕಠಿಣ ಕಾರ್ಯವಾಗಲಿ, ಈ ಕೂಡಲೇ ನೆರವೇರಿಸಲು ಸಿದ್ಧನಾಗಿದ್ದೇನೆ" ಎಂದು ವಿನಮ್ರವಾಗಿಯೇ ನುಡಿದ ಅಚಲ ಸಿಂಹ.

"ನೀನೊಬ್ಬ ನಂಬಿಕೆಯ ಭಂಟ ಎಂದು ನನಗೆ ಚೆನ್ನಾಗಿ ಗೊತ್ತು, ಆದ್ದರಿಂದಲೇ ಈ ರಹಸ್ಯ ಕಾರ್ಯದ ಜವಾಬ್ದಾರಿಯನ್ನು ನಿನಗೆ ವಹಿಸುತ್ತಿರುವುದು"ಎಂದು ಅಚಲ ಸಿಂಹನಿಗೆ ಹೇಳುತ್ತಾ, ಹಾಗೆಯೇ ತಾನು ಕುಳಿತಿದ್ದ ರತ್ನ ಖಚಿತ ಪೀಠದಿಂದಲೇ ಆ ವಿಶಾಲದ ಏಕಾಂತ ಭವನವನ್ನೊಮ್ಮೆ ಸುತ್ತಲೂ ಕಣ್ಣು ಹಾಯಿಸಿದ ಮುಂಜರಾಜ.

ಬಂಗಾರದ ಗೋಡೆಗಳಿಂದಲೇ ನಿರ್ಮಾಣವಾಗಿದ್ದ ಬಹು ಶೃಂಗಾರಮಯವಾದ ಏಕಾಂತ ಭವನ ಅದಾಗಿತ್ತು. ಭವನದ ಸುತ್ತಲೂ ಸಾವಿರಾರು ವರ್ಷಗಳ ಇತಿಹಾಸವನ್ನು ಸಾರುವ ರಾಜ ವಂಶ ಪರಂಪರೆಯನ್ನು ನೆನಪಿಗೆ ತರುವ ಆ ಧಾರಾ ನಗರವನ್ನಾಳಿದ

ಅನೇಕ ರಾಜರುಗಳ ಆಳೆತ್ತರದ ಸುಂದರ ಶಿಲ್ಪ ಕಲಾವಿಗ್ರಹಗಳು ಬಹು ಕಾಂತಿಯುಕ್ತವಾಗಿ ಶೋಭಿಸುತ್ತಿತ್ತು.

ಪ್ರತಿಯೊಬ್ಬ ರಾಜರ ವಿಗ್ರಹವೂ ಸಹ ಅತ್ಯಾಕರ್ಷಕವಾದ ಅಮೃತ ಶಿಲೆಯಿಂದಲೇ ಬಲು ಅಂದಚಂದವಾಗಿ ರೂಪಿಸಲ್ಪಟ್ಟಿತ್ತು.

ಆದರೆ ಅಂದು ಮುಂಜರಾಜರ ವಕ್ರದೃಷ್ಟಿಗೆ ಅದೊಂದೂ ಬೇಕಿಲ್ಲವಾಗಿತ್ತು.

ಅತೀ ದುರಾಸೆಯಿಂದ ಕೂಡಿದ ಅವನ ಮನಸ್ಸು ಆಜೀವ ಪರ್ಯಂತರ ತಾನೇ ರಾಜನಾಗಿರಬೇಕೆಂಬ ದುಷ್ಟ ಬಯಕೆ ಹಾಸುಹೊಕ್ಕಾಗಿ ಮನೆ ಮಾಡಿಕೊಂಡಿತ್ತು. ಹಾಗೆ ಸುತ್ತಲೂ ಆ ಏಕಾಂತ ಭವನವನ್ನು ಗಮನಿಸಿದ ಮುಂಜರಾಜನು "ಹೌದು, ನಾನು ಈಗ ಅಚಲ ಸಿಂಹನಿಗೆ ಹೇಳುವ ರಹಸ್ಯ ವಿಚಾರ ..... ಬಹುಶಃ ಹೊರಗಡೆ ದ್ವಾರದ ಬಳಿ ಕರ್ತವ್ಯ ನಿರತನಾಗಿರುವ ಸೇವಕರ ಕಿವಿಗೆ ಕೇಳಿಸಲೂ ಬಹುದು. ಆದ್ದರಿಂದ ಇಲ್ಲಿ ಯಾವುದೇ ನಿಗೂಢ ವಿಷಯವನ್ನು ಪ್ರಸ್ತಾಪಮಾಡುವುದು ಸೂಕ್ತವಲ್ಲ" ಎಂದು ನಿರ್ಧರಿಸಿದ ಮುಂಜರಾಜನು, ಅದೇನು ಯಕ್ಷಿಣಿಯೋ ಅಥವಾ ಮಾಯಾ ವಿದ್ಯೆಯೋ ಎಂಬಂತೆ ತನ್ನ ಎದುರಾಗಿ ನಿಂತಿರುವ ಅಚಲ ಸಿಂಹನಿಗೂ ಸಹ ಗೊತ್ತಾಗದ ರೀತಿಯಲ್ಲಿ ತಾನು ಕುಳಿತಿದ್ದ ರಾಜಪೀಠದ ಕೆಳಗಡೆ ಅತೀ ಸೂಕ್ಷ್ಮವಾದ ಯಂತ್ರವನ್ನು ಕೇವಲ ಕಾಲಿನ ಹೆಬ್ಬೆರಳಿಂದ ಒತ್ತಿದ ಮಾತ್ರಕ್ಕೆ ಸಾಲು ವಿಗ್ರಹಗಳ ಸಾಲಿನಲ್ಲಿ ಲಕ್ಷ್ಮೀ ಸರಸ್ವತಿಯರ ವಿಗ್ರಹಗಳ ಮಧ್ಯೆ ಇದ್ದ ಬಹು ಎತ್ತರವಾದ ಮಹಾ ಕಾಳಿ ವಿಗ್ರಹವು ಇದ್ದಕ್ಕಿದ್ದಂತೆ ಬಹು ಆಶ್ಚರ್ಯ ರೀತಿಯಲ್ಲಿ ಹಿಂದಕ್ಕೆ ಸರಿದು ಆ ಮೂಲಕ ಇನ್ನೊಂದು ಸ್ಥಳಕ್ಕೆ ಹೋಗಲು ದಾರಿ ಮಾಡಿಕೊಟ್ಟಿತು.

ಆ ರೀತಿ ಅಲ್ಲಿ ಗುಪ್ತದ್ವಾರ ಇದೆ ಎಂಬುದು ಯಾರೊಬ್ಬರೂ ಅರಿಯದಾಗಿದ್ದರು.

ಆ ಕೌತುಕ ದೃಶ್ಯವನ್ನು ನೋಡುತ್ತಿದ್ದ ಅಚಲ ಸಿಂಹನಿಗೆ ತನ್ನನ್ನು ತಾನೇ ನಂಬಲಾರದಷ್ಟು ಪರಮಾಶ್ಚರ್ಯವಾಯಿತು. ಸ್ಥಂಭೀಭೂತನಾದ. ತದೇಕ ದೃಷ್ಟಿಯಿಂದ ಆ ಮಹಾ ಕಾಳಿ ವಿಗ್ರಹವನ್ನೇ ನೋಡುತ್ತಾ "ನಾನು ಸುಮಾರು ಮೂರು ದಶಕಗಳಿಂದಲೂ ಈ ಅರಮನೆಯಲ್ಲಿ ಗತಿಸಿ ಹೋದ ಸಿಂಧೂಲ ರಾಜರ ಕಾಲದಿಂದಲೂ ಸಾವಿರಾರು ಬಾರಿ ಈ ಏಕಾಂತ ಕೋಣೆಗೆ ಬಂದು ಹೋಗುತ್ತಲೇ ಇದ್ದೇನೆ. ಆದರೆ ಈ ಸ್ಥಳದಲ್ಲಿ ಮತ್ತೊಂದು ರಹಸ್ಯ ಮಂದಿರವಿರುವುದು ನನಗೇ ತಿಳಿದು ಬಂದಿಲ್ಲವಲ್ಲ" ಎಂದು ಆಶ್ಚರ್ಯವನ್ನು ಸೂಸುತ್ತ, ರೆಪ್ಪೆ ಮುಚ್ಚದ ಕಣ್ಣುಗಳಿಂದ ನೋಡುತ್ತಾ ಅಂತರ್ಗತವಾಗಿ ನುಡಿದುಕೊಂಡ ಅಚಲ ಸಿಂಹ.

"ಏಕೆ ಆ ರೀತಿ ಆಶ್ಚರ್ಯಪಡುತ್ತ ಚಿತ್ರ ಪಟದಂತೆ ನಿಂತು ಬಿಟ್ಟೆ ಅಚಲ ಸಿಂಹ, ನನ್ನನ್ನು ಹಿಂಬಾಲಿಸಿ ಆ ರಹಸ್ಯ ಮಂದಿರಕ್ಕೆ ಬಾ. ಅಲ್ಲಿ ನೀನು ನೆರವೇರಿಸಬೇಕಾದ ವಿಷಯ ತಿಳಿಸುತ್ತೇನೆ" ಎಂದಾಗಲೇ ವಾಸ್ತವ ಲೋಕಕ್ಕೆ ಬಂದ ಅಚಲ ಸಿಂಹನು ಮುಂಜರಾಜನನ್ನು ಹಿಂಬಾಲಿಸಿ ರಹಸ್ಯ ಮಂದಿರ ಪ್ರವೇಶ ಮಾಡಿದ.

ಆ ರಹಸ್ಯಮಂದಿರದ ಕುರಿತು ಮಹಾಮಂತ್ರಿ ರಾಜಪುರೋಹಿತರು ಇಬ್ಬರಿಗೆ ಮಾತ್ರವಲ್ಲದೆ ಯಾರೊಬ್ಬರು ಅರಿಯದಾಗಿದ್ದರು. ಹಾಗೂ ಅದರೊಳಗೆ ಆತನಕ

ಯಾರೊಬ್ಬರೂ ಸುಳಿದಿರಲಿಲ್ಲ. ಮಿಗಿಲಾಗಿ ಅಲ್ಲಿ ಆ ರೀತಿಯಾದ ರಹಸ್ಯಮಂದಿರ ಒಂದಿದೆ ಎಂಬುದು ಯಾರೊಬ್ಬರೂ ಅರಿಯದಾಗಿದ್ದರು.

ಆದರೆ ಮುಂಜರಾಜನ ಅಧಿಕಾರ ದಾಹದ ಅವಿವೇಕತನದಿಂದಾಗಿ ಕೇವಲ ಏಕಶ್ಚಿತ್ ಅರಮನೆಯ ಸರದಾರ ಅಂದು ಆ ರಹಸ್ಯ ಕೋಣೆಗೆ ಹೋಗುವಂಥ ದುರ್ಗತಿ ಒದಗಿ ಬಂದಿತ್ತು.

ಮುಂಜರಾಜನನ್ನು ಹಿಂಬಾಲಿಸಿ ಒಳಗೆ ಬಂದ ಅಚಲಸಿಂಹ. ಅಲ್ಲಿಯೂ ಸಹ ಬಹು ಆಶ್ಚರ್ಯ ರೀತಿಯಲ್ಲಿ ವಿಶಾಲವಾದ ರಹಸ್ಯ ಮಂದಿರದಲ್ಲಿ ಮೂವತ್ತು ಅಡಿ ಎತ್ತರದ ಹಾಗೂ ಇಪ್ಪತ್ತು ಅಡಿ ಅಗಲವುಳ್ಳ 'ಕಮಲಪುಷ್ಪಾಕಾರದ' ಸಾವಿರಾರು ಚಿನ್ನದ ಕೊಪ್ಪರಿಗೆಗಳನ್ನು ಸಾಲು ಸಾಲಾಗಿ ಇರಿಸಲಾಗಿತ್ತು.

ಆ ಎಲ್ಲಾ ಕೊಪ್ಪರಿಗೆಗಳಲ್ಲೂ ಬೆಲೆಯನ್ನೇ ಕಟ್ಟಲಾಗದಂತಹ ವಿಪುಲ ಸಂಪತ್ತಿನಿಂದ ಕೂಡಿದ ಮುತ್ತು ರತ್ನ, ನವರತ್ನ, ವಜ್ರ, ವೈಡೂರ್ಯ, ಹವಳ, ಗೋಮೇದಿಕ, ಪುಷ್ಯರಾಗ, ಮುಂತಾದವು ಮಾತ್ರವೇ ಅಲ್ಲದೆ, ಶೂರ ಸಿಂಧೂಲ ರಾಜನ ಕಾಲದಿಂದಲೂ ಚಲಾವಣೆಯಲ್ಲಿದ್ದ ಚಿನ್ನದ ನಾಣ್ಯಗಳನ್ನು ಸಹ ಅಗಣಿತವಾಗಿ ಶೇಖರಿಸಲ್ಪಟ್ಟಿತ್ತು.

ಆ ವಿಪುಲ ಸಂಪತ್ತನ್ನು ಕಂಡು ಮತ್ತಷ್ಟು ಆಶ್ಚರ್ಯ ಚಕಿತನಾದ ಅಚಲಸಿಂಹ.

ಭೋಜ ರಾಜನ ತಂದೆ ಶೂರ ಸಿಂಧೂಲರಾಜನು ಆ ಅತಿ ಭಾರವಾದ ಚಿನ್ನದ ಕೊಪ್ಪರಿಗೆಗಳನ್ನು ರಹಸ್ಯ ಮಂದಿರಕ್ಕೆ ಸಾಗಿಸಿ ತರಲು, ಅದಕ್ಕಾಗಿ ವಿಶೇಷವಾದ ಗಾಲಿ ಯಂತ್ರೋಪಕರಣಗಳನ್ನು ತಯಾರಿಸಿ ಆ ಮೂಲಕ ಬಲಾಢ್ಯ ಆನೆಗಳ ಮೂಲಕ ಎಳೆತರಿಸಿದ್ದನು.

ರಹಸ್ಯ ಮಂದಿರದಲ್ಲಿಡಲಾಗಿದ್ದ ಆ ವಿಪುಲ ಸಂಪತ್ತನ್ನು ಶೇಖರಿಸಲ್ಪಟ್ಟಿರುವುದು ರಾಜ ಪರಂಪರೆಯ ಯಾವುದೇ ಸ್ವಾರ್ಥಕ್ಕಲ್ಲ, ಧಾರಾನಗರವು ಸೇರಿದಂತೆ ಆರ್ಯಾವರ್ತದ ಎಲ್ಲ (ಚಪ್ಪನ್ನಾರು ದೇಶಗಳು) ದೇಶಗಳಲ್ಲಿ ಯಾವುದೇ ದೇಶವು ಕ್ಷಾಮ ಪೀಡಿತ ದೇಶವಾಗಿ ಸಂಭವಿಸಿದಾಗ ಆ ಗುಪ್ತನಿಧಿ ಸಂಪತ್ತನ್ನು ಯಥೋಚಿತವಾಗಿ ಬಳಸಲಾಗುತ್ತಿತ್ತು.

ಮುಂಜರಾಜನೊಡನೆ ಒಳಪ್ರವೇಶಿಸಿದ ಅಚಲಸಿಂಹನಿಗೆ ಅಲ್ಲಿದ್ದ ವಿಪುಲ ಐಶ್ವರ್ಯ ಸಂಪತ್ತಿನಿಂದ ಕೂಡಿದ ಬಂಗಾರದ ಕೊಪ್ಪರಿಗೆಗಳನ್ನು ನೋಡಿ ಮತ್ತಷ್ಟು ವಿಸ್ಮಯವಾಯಿತು. ತಾನೊಂದು ಮಾಯಾಲೋಕಕ್ಕೆ ಪ್ರವೇಶಿಸಿದಂತೆ ಎಂದಿಲ್ಲದ ಅನುಭವ ಅವನಲ್ಲಿ ಮನೆ ಮಾಡಿಕೊಂಡಿತ್ತು. ಆದರೂ ಹುಟ್ಟು ಆಶಾ ರಹಿತನಾದ ಅಚಲಸಿಂಹನು ಆ ವಿಪುಲ ಸಂಪತ್ತಿನ ಬಗ್ಗೆ ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಳ್ಳದೆ, ಮುಂಜರಾಜನ ಇಂದು ಈ ರಹಸ್ಯ ಮಂದಿರದಲ್ಲಿ ತನಗೇನು ರಹಸ್ಯ ಕಾರ್ಯ ಹೇಳುವನೋ ಎಂಬುದಕಷ್ಟೇ ಕಾತುರನಾಗಿದ್ದನು.

ರಹಸ್ಯ ಮಂದಿರದಲ್ಲಿ ರಾಜ ಪೀಠವನ್ನಲಂಕರಿಸಿದ ಮುಂಜರಾಜನು ಅಲ್ಲಿಯೇ ಇದ್ದ ಮತ್ತೊಂದು ಆಸೀನವನ್ನು ತೋರಿಸುತ್ತಾ "ಅಚಲಸಿಂಹ, ಈ ರಹಸ್ಯ ಮಂದಿರಕ್ಕೆ

ಕಾಲಿರಿಸಿದ ಇಂದಿನಿಂದ ನೀನು ನನ್ನ ಸಖನಂತೆ ಎಂದು ಭಾವಿಸುತ್ತೇನೆ. ಆ ಪೀಠದಲ್ಲಿ ಕುಳಿತುಕೋ. ಈಗ ನಿನಗೆ ಹೇಳ ಬೇಕಾದ ಬಹು ರಹಸ್ಯವಾದ ವಿಚಾರವನ್ನು ಹೇಳುತ್ತೇನೆ" ಎಂದನು.

ಆಗ ಅಚಲಸಿಂಹನು ಮುಂಜರಾಜನನ್ನು ಗೌರವದಿಂದಲೇ ಮಾತನಾಡಿ "ಕ್ಷಮಿಸಬೇಕು ಮಹಾ ಪ್ರಭು. ತಮ್ಮಂತಹ ರಾಜರ ಮುಂದೆ ತಮಗೆ ಸರಿ ಸಮಾನವಾಗಿ ಕುಳಿತುಕೊಳ್ಳುವುದು ಸರಿಯಲ್ಲ. ನಾನೊಬ್ಬ ರಾಜಾಜ್ಞೆಯನ್ನು ಪರಿಪಾಲಿಸುವ ಸರದಾರ" ಎಂದು ನುಡಿದ.

"ಒಳ್ಳೆಯದು. ನಿನ್ನ ಸ್ವಾಮಿ ಭಕ್ತಿಗೆ ಮೆಚ್ಚಿದ್ದೇನೆ. ಆದರೆ........"

"ಈ ಅಚಲಸಿಂಹನಲ್ಲಿ ರಹಸ್ಯ ವಿಚಾರವನ್ನು ಹೇಳಲು ಇನ್ನೂ ಸಂಶಯವೇಕೆ ಮಹಾ ಪ್ರಭು?"

"ಇಲ್ಲ ಇಲ್ಲ ಸಂಶಯವಂತು ಅಲ್ಲ. ಆದರೆ ಈಗ ನಾನು ಹೇಳುವ ರಹಸ್ಯ ವಿಚಾರ ನಿನಗೆ ಕಠಿಣವಾಗಿ ಕಂಡು ಬಂದರೆ?"

"ರಾಜಾಜ್ಞೆ ಎಂದ ಮೇಲೆ ಕಠಿಣ ಎಂಬ ಪ್ರಶ್ನೆಯೇ ಉದ್ಭವಿಸುವಂತಿಲ್ಲ" -ಎಂದು ನಿರಾಯಾಸವಾಗಿಯೇ ಉತ್ತರಿಸಿದ ಚಾಣಾಕ್ಷನಾದ ಅಚಲಸಿಂಹ.

"ಒಂದು ವೇಳೆ ಈಗ ನಾನು ಹೇಳುವ ರಹಸ್ಯವಾದ ವಿಚಾರ ನಿನ್ನಿಂದ ಮತ್ಯಾರಿಗಾದರೂ ತಿಳಿದಿದ್ದೇ ಆದರೆ -

"ಮಹಾ ಪ್ರಭು. ಮೇರು ಪರ್ವತವೇ ಕಳಚಿ ಬಿದ್ದರೂ ಬೀಳಬಹುದು. ಆದರೆ ರಾಜ ರಹಸ್ಯ ವಿಚಾರ ಮಾತ್ರ ಎಂದೆಂದಿಗೂ ನನ್ನಿಂದ ಯಾರೊಬ್ಬರಿಗೂ ತಿಳಿಯಲಾದರು" ಎಂದು ಸಿಡಿಲಿನಂತೆ ಮಾತನಾಡಿದ ಅಚಲಸಿಂಹ.

"ಭೇಶ್. ನಿನ್ನ ಪ್ರಾಮಾಣಿಕತೆಗಿಂತಲೂ ಮಿಗಿಲಾದ ನಂಬಿಕೆಗೆ ನಾನು ಬೆಲೆ ಕೊಟ್ಟು, ಈ ರಹಸ್ಯ ವಿಚಾರವನ್ನು ಹೇಳುತ್ತೇನೆ. ಕೇಳು - ಅಚಲಸಿಂಹ - ಈಗ ಸಿಂಹಾಸನಾಧಿರೂಢನಾಗಿ ಈ ದೇಶವನ್ನು ಆಳುತ್ತಿರುವ ನನಗೆ ಬಹು ಕಂಠಕಪ್ರಾಯನಾದ ಭೋಜರಾಜನನ್ನು ನೀನು ಈ ಕೂಡಲೇ ಚಾಣಾಕ್ಷತನದಿಂದ ಅರಣ್ಯಕ್ಕೆ ಕರೆದುಕೊಂಡು ಹೋಗಿ. ಅಲ್ಲಿ ಅವನ ಶಿರಶ್ಛೇದನ ಮಾಡಿ ಬಿಡಬೇಕು. ಈ ಕಾರ್ಯ ನಿನ್ನಿಂದಾದರೆ ನಾನು ನಿನಗೆ ಈ ಸರದಾರ ಪದವಿಯಿಂದ ಮಂತ್ರಿ ಪದವಿಯನ್ನು ನೀಡುತ್ತೇನೆ. ಅಷ್ಟೇ ಅಲ್ಲ. ಇಲ್ಲಿರುವ ವಿಪುವ ಐಶ್ವರ್ಯ ಸಂಪತ್ತಿನಲ್ಲಿ ನಿನಗೆ ತೃಪ್ತಿಯಾಗುವಷ್ಟು ಸಂಪತ್ತನ್ನು ಕೊಡುತ್ತೇನೆ" ಎಂದನು.

ಮುಂಜರಾಜನು ಆ ರೀತಿ ಹೇಳುತ್ತಿದ್ದಂತೆ ಅಚಲ ಸಿಂಹನಿಗೆ ಒಮ್ಮೆಗೆ ಜಂಘಾಬಲವೇ ಉಡುಗಿ ಹೋದಂತಾಯಿತು. ತಾನು ನಿಂತ ಸ್ಥಳವೇ ಕಂಪಿಸಿದಂತಾಯಿತು.

"ಅಯ್ಯೋ ದೇವರೆ..... ಈ ಅರಮನೆಯಲ್ಲಿ ಮೂರು ದಶಕಗಳಿಂದಲೂ ಪ್ರಾಮಾಣಿಕನಾಗಿ ಕಾರ್ಯ ನಿರ್ವಹಿಸುತ್ತಿದ್ದ ನನಗೆ ಎಂತಹ ಶಿಕ್ಷೆ ಕೊಟ್ಟು ಬಿಟ್ಟೆ

ಪರಮಾತ್ಮ? ಎಂತಹ ಮಾಡಬಾರದ ಪಾಪಕ್ಕೆ ಗುರಿ ಮಾಡಿಬಿಟ್ಟೆ? ನನ್ನ ಇದೇ ಕೈಗಳಿಂದ ಭೋಜನನ್ನು ಎತ್ತಿ ಮುದ್ದಾಡಿದ್ದೇನೆ. ಈಗ ಇದೇ ಕೈಗಳಿಂದ ಆ ಹಸುಳೆಯಾದ ಭೋಜ ರಾಜನನ್ನು ಕೊಲ್ಲಬೇಕಾದ ಪ್ರಸಂಗ ಬಂತೇ" ಎಂದು ಮನದಲ್ಲೇ ಪ್ರಲಾಪಿಸಿದನು. ಅವನಿಗೆ ದಿಕ್ಕೇ ತೋಚದಂತಾಯಿತು. ಒಂದು ವೇಳೆ ಭೋಜರಾಜನನ್ನು ಮುಗಿಸಿ ಬಿಡಲು ನನ್ನಿಂದ ಆಗದು ಎಂದು ಅಲ್ಲಗಳೆದರೆ ದುರಾಶಾ ಪೀಡಿತನಾದ ಮುಂಜರಾಜನು ನನ್ನನ್ನು ಏನು ಮಾಡಲು ಹಿಂಜರಿಯನು ಎಂದು ಕೊಂಡನು.

ಕಡೆಗೆ ದೈವವಶಾತ್ ಸಮಯೋಚಿತವಾದ ಒಂದು ಉಪಾಯ ಹೊಳೆಯಿತು. ಅದನ್ನು ಹೊರಗೆಡಹದೆ ತನ್ನ ಮನದಲ್ಲೇ ಬಚ್ಚಿಟ್ಟು ಮೇಲೆ ನಟನೆಯಾಗಿ ಮುಂಜರಾಜನೊಡನೆ ಮಾತನಾಡುತ್ತಾ -

"ಪ್ರಭುಗಳಲ್ಲಿ ಒಂದು ಮನವಿ"

"ಏನದು?"

"ಭೋಜರಾಜನು ಈಗ ಸಾಮಾನ್ಯರಲ್ಲ. ಹದಿನಾರು ವರ್ಷ ತುಂಬಿದ ಅವರು ಚಿಕ್ಕ ವಯಸ್ಸಿನಲ್ಲೇ ಸಕಲ ವಿದ್ಯಾ ಪಾರಂಗತರಾಗಿ ಬಂದಿರುವುದರ ಜೊತೆಗೆ ಎಲ್ಲಾ ರೀತಿಯ ಶಸ್ತ್ರಾಸ್ತ್ರ ವಿದ್ಯೆಯಲ್ಲಿಯೂ, ಮಲ್ಲಯುದ್ಧದಲ್ಲಿಯೂ ಅಸಮಾನ ಶೂರರಾಗಿ ಬಿಟ್ಟಿದ್ದಾರೆ ಮಹಾಪ್ರಭು. ಈ ಪರಿಸ್ಥಿತಿಯಲ್ಲಿ ಅವರನ್ನು ಅಷ್ಟು ಸುಲಭವಾಗಿ ಎದುರಿಸಲು ನನ್ನಿಂದಲೂ ಸಹ ಸಾಧ್ಯವಾಗದ ಮಾತು. ಮಿಗಿಲಾಗಿ ಅವರಿಗೆ ಪಾಂಡಿತ್ಯ ವಿದ್ಯೆ ಹೊರತಾಗಿ ಮಿಕ್ಕ ಎಲ್ಲಾ ವಿದ್ಯೆಯನ್ನು ನಾನೇ ಕಲಿಸಿ ಕೊಟ್ಟಿದ್ದೇನೆ. ಒಂದು ರೀತಿಯಲ್ಲಿ ಅವರು ನನ್ನನ್ನು ಶಸ್ತ್ರ ವಿದ್ಯೆ ಕಲಿಸಿ ಕೊಟ್ಟ ಗುರು ಎಂಬ ಭಾವನೆಯನ್ನು ಇಟ್ಟು ಕೊಂಡಿದ್ದಾರೆ ಮಹಾಪ್ರಭು. ಹೀಗಿರುವಾಗ.........." - ಎಂದು ಮಾತನ್ನು ಅಷ್ಟಕ್ಕೆ ಮುಗಿಸಿ ಮುಂಜರಾಜನ ಪ್ರತ್ಯುತ್ತರ ಏನು ಬರುವುದೋ ಎಂದು ನಿರೀಕ್ಷಿಸುತ್ತಿದ್ದನು ಅಚಲಸಿಂಹನು.

ಆಗ ಮುಂಜರಾಜನು ಉದ್ವೇಗದ ಧ್ವನಿಯಲ್ಲಿ ದನಿಗೂಡಿಸಿ ಹೇಳುತ್ತಾ, "ಅಚಲಸಿಂಹ..... ಏನೇ ಆಗಲಿ, ಎಂತೇ ಆಗಲಿ, ನಾನು ಹೇಳಿದ ರಹಸ್ಯ ವಿಷಯವನ್ನು 'ರಾಜಾಜ್ಞೆ' ಎಂದು ಭಾವಿಸಿ ನೆರವೇರಿಸಬೇಕು" ಎಂದು ಕರಾರುವಕ್ಕಾಗಿ ನುಡಿದ.

"ರಾಜಾಜ್ಞೆ, ರಾಜಾಜ್ಞೆ" ಎಂದು ಒಂದೆರೆಡು ಬಾರಿ ತನ್ನ ಅಂತರ್ಗತವಾಣಿಯಿಂದ ನುಡಿದುಕೊಂಡ ಅಚಲಸಿಂಹನಿಗೆ ಆ ಕ್ಷಣದಲ್ಲಿ ತಾನೇ ತಾನಾಗಿ ಒಂದು ಉಪಾಯ ಹೊಳೆಯಿತು. ಮುಂಜರಾಜನೊಡನೆ ಮಾತನಾಡುತ್ತಾ -

"ಪ್ರಭುಗಳ ಚಿತ್ತದಲ್ಲಿ ಒಂದು ಸಲಹೆ ಕೇಳಬಹುದೇ?"

"ಏನದು ಆ ನಿನ್ನ ಸಲಹೆ?"

"ಈಗ ಅಸಮಾನ ಶೂರನಾಗಿರುವ ಭೋಜರಾಜರನ್ನು ಯಾವುದೇ ಶಕ್ತಿಯಿಂದ ಗೆಲ್ಲಲು ನನ್ನಿಂದಲೇ ಆಗಲಿ ಬೇರೆ ಯಾರಿಂದಲೇ ಆಗಲಿ ಸಾಧ್ಯವಾಗದ ಮಾತು ಪರಂತು ಯುಕ್ತಿಯಿಂದ ಮಾತ್ರ ಆತನನ್ನು ಯಮ ಸದನಕ್ಕೆ ಕಳುಹಿಸಿ ಕೊಡಬಹುದಾಗಿದೆ. ಆ ನಂಬಿಕೆ ನನಗಿದೆ" ಎಂದು ಮಾರ್ಮಿಕವಾಗಿಯೇ ನುಡಿದನು.

"ಯಾವುದು ಆ ಯುಕ್ತಿ"

"ಅದೇ ನೀವೇ ಹೇಳಿದಂತೆ "ರಾಜಾಜ್ಞೆಗೆ.... ಸದಾ ಸದ್ಧರ್ಮ ನಿರತನಾದ ಭೋಜರಾಜನರು ಆಂಜನೇಯನು ಬ್ರಹ್ಮಾಸ್ತ್ರಕ್ಕೆ ಕಟ್ಟುಬಿದ್ದಂತೆ, ರಾಜಾಜ್ಞೆಗೆ ಮಾತ್ರ ಪ್ರತ್ಯುತ್ತರ ಕೊಡಲಾರರು ಎಂಬುದು ನನ್ನ ಭರವಸೆ."

"ಹಾಗಾದರೆ ಅದಕ್ಕೆ ಈಗ ನಾನೇನು ಮಾಡಬೇಕು. ಬೇಗ ಹೇಳು"

"ಕೇವಲ ಎರಡೇ ಎರಡು ಸಾಲಿನಲ್ಲಿ

"ಭೋಜನನ್ನು ಈ ಕೂಡಲೇ ಶಿರಶ್ಛೇದನ ಮಾಡಲು ಅರಮನೆಯ ಸರದಾರನಾದ ಅಚಲಸಿಂಹನಿಗೆ ರಾಜಾಜ್ಞೆ ವಿಧಿಸಿದ್ದೇನೆ. ಅದನ್ನು ಅಕ್ಷರ ಸಹ ಪರಿಪಾಲಿಸುವುದು"

- ಇಂತು ಮುಂಜರಾಜ"

- ಎಂದು ತಮ್ಮ ಸ್ವಹಸ್ತದಿಂದ ಲಿಖಿತವಾದ ಓಲೆಯೊಂದನ್ನು ರಾಜ ಮುದ್ರೆಯೊಂದಿಗೆ ಕೊಟ್ಟರೆ ಸಾಕು. "ಭೋಜನನ್ನು ಕೊಂದು, ಆತನ ಶಿರವನ್ನು ತಮಗೆ ಒಪ್ಪಿಸುತ್ತೇನೆ, ಆಗಬಹುದೆ"

ಆತುರಗಾರನಾಗಿದ್ದ ಮುಂಜರಾಜನಿಗೆ ಅಚಲಸಿಂಹನ ಸಲಹೆಯೇ ವೇದ ವಾಕ್ಯದಂತೆ ಇತ್ತು. ಆ ಕೂಡಲೇ ಓಲೆಯೊಂದರಲ್ಲಿ ಅಚಲಸಿಂಹನು ಹೇಳಿದಂತೆ ತನ್ನ ಸ್ವಹಸ್ತದಿಂದ ಬರೆದು, ಅದಕ್ಕೆ ರಾಜ ಮುದ್ರೆಯನ್ನು ಒತ್ತಿ - ಅಚಲಸಿಂಹನಿಗೆ ಹಸ್ತಾಂತರಿಸಿದ.

"ಪ್ರಭುಗಳ ಚಿತ್ತ" ಎನ್ನುತ್ತ ರಾಜಾಜ್ಞೆಯ ಸುರುಳಿಯೊಂದಿಗೆ ನಿರ್ಗಮಿಸಿದ ಅಚಲಸಿಂಹ.

# ಅರಣ್ಯದಲ್ಲಿ ಅಚಲಸಿಂಹ ಮತ್ತು ಭೋಜರಾಜ

ಮುಂಜರಾಜನಿಂದ ಪ್ರೇರೇಪಿತನಾದ ಅಚಲಸಿಂಹನು ಯುವರಾಜ ಭೋಜರಾಜನ ಏಕಾಂತಭವನಕ್ಕೆ ಬಂದ. ದ್ವಾರದಲ್ಲಿ ಕರ್ತವ್ಯ ನಿರತನಾಗಿದ್ದ ಕಾವಲು ಭಟನೊಡನೆ ಸಂಭಾಷಿಸುತ್ತ "ಯುವರಾಜರು ಇದ್ದಾರೆಯೇ?" ಎಂದು ಕೋಳಿದ.

"ಇದ್ದಾರೆ"

"ನಾನು ಬಂದಿರುವುದಾಗಿ ತಿಳಿಸು"

"ಅಪ್ಪಣೆ" ಎಂದಷ್ಟೆ ನುಡಿದು ಒಳಪ್ರವೇಶಿಸಿದ.

"ಯುವರಾಜರಿಗೆ ಜಯವಾಗಲಿ, ಅಚಲಸಿಂಹರು ಬಂದಿದ್ದಾರೆ. ತಮ್ಮನ್ನು ಕಾಣಲು ಅಪೇಕ್ಷಿಸುತ್ತಿದ್ದಾರೆ" ಎಂದನು.

"ಬರುವಂತೆ ತಿಳಿಸು" ಎಂದು ನುಡಿದ

ಅಪ್ಪಣೆಯನ್ನು ಹೊತ್ತು ಹೊರಗೆ ಬಂದ ಕಾವಲು ಭಟನು "ಬರಲು ಅಪ್ಪಣೆಯನ್ನು ಕೊಟ್ಟಿದ್ದಾರೆ. ದಯಮಾಡಿಸಬಹುದು" ಎಂದು ವಿನಯದಿಂದ ನುಡಿದ.

ಮನಸ್ಸಿಲ್ಲದ ಅಳಕು ಮನಸ್ಸಿನಿಂದಲೇ ಒಳ ಪ್ರವೇಶ ಮಾಡಿದ ಅಚಲಸಿಂಹ.

ಆಗ ಭೋಜರಾಜನು ಭವ್ಯವಾದ ಪೀಠ ಒಂದರಲ್ಲಿ ಕುಳಿತು, ನಿರ್ಮಲ ಚಿತ್ತನಾಗಿ ಸಂಸ್ಕೃತ ವಾಲ್ಮೀಕಿ ರಾಮಾಯಣದ ಅರಣ್ಯಕಾಂಡದ ಹೃದಯಸ್ಪರ್ಶಿ ಸನ್ನಿವೇಶ...... ಸೀತಾಲಕ್ಷ್ಮಣ ಸಮೇತನಾದ ಶ್ರೀ ರಾಮಚಂದ್ರನು ಅರಣ್ಯದಲ್ಲಿ ಪಾದಯಾತ್ರೆ ಮಾಡುತ್ತ ಸಾಗುತ್ತಿದ್ದ ಪ್ರಕರಣವನ್ನು ಆಹ್ಲಾದಕರ ಚಿತ್ತನಾಗಿ ಓದುತ್ತಿದ್ದನು.

ಮಂದಹಾಸಸ್ಮಿತನಾಗಿ ಬಹು ತೇಜಸ್ಸಿನಿಂದ ಕೂಡಿದ ಭೋಜನನ್ನು ನೋಡಿದ ಅಚಲಸಿಂಹನಿಗೆ ಎಂದಿಲ್ಲದ ವ್ಯಥೆಯಾಯಿತು. "ಆಹಾ! ಅಕಟಕಟ......, ನಾನೆಂತಹ ಹೀನ ಕ್ರೂರ ಕರ್ತವ್ಯ ವೆಸಗಲು ಇಲ್ಲಿಗೆ ಬಂದಿದ್ದೇನೆ. ಇಂತಹ ಪರಮಶ್ರೇಷ್ಠನಾದ, ಮುಂದೆ ಈ ಧಾರಾನಗರವನ್ನಾಳಬೇಕಾದ, ರತ್ನಸಿಂಹಾಸನಕ್ಕೆ ಅಧಿಪತಿಯಾಗಬೇಕಾದ, ಈ ಮಹಾಪುರುಷ ಶ್ರೇಷ್ಠನನ್ನು ಹೇಗೆ ತಾನೆ ಕೊಲ್ಲಲಿ..... ಇದಕ್ಕಿಂತಲೂ ಹೀನವಾದ ಕೃತ್ಯ ಬೇರೊಂದುಂಟೆ ನನಗೆ......? ಎಂತಹ ಕ್ರೂರ ಕಟುಕನೂ ಸಹ ಒಪ್ಪದ ಘೋರ ಕೃತ್ಯ......... ಇವನನ್ನು ವಧೆ ಮಾಡಲು ಬಂದಿರುವೆನಲ್ಲ - ನಾನೆಂತಹ ಪರಮ ಪಾಪಿ" ಎಂದು ಅವನ ಅಂತರಾತ್ಮ ಚುಚ್ಚಿ ನುಡಿದು ದುಃಖದ ಮಡುವಿನಲ್ಲಿ ನೂಕಿತ್ತು.

ಆದರೆ ಮುಂಜರಾಜನಿಗೆ ಮಾತು ಕೊಟ್ಟಿದ್ದಾಗಿದೆ. ಒಂದು ವೇಳೆ ಭೋಜನನ್ನು ಯಮಸದನಕ್ಕೆ ಕಳುಹಿಸದಿದ್ದರೆ ನನ್ನನ್ನು ಸುಮ್ಮನೆ ಬಿಡುವುದಿಲ್ಲ - ಎಂದರಿತ ಅಚಲಸಿಂಹನು ಮನಸ್ಸಿಗೆ ಧೈರ್ಯ ತಂದುಕೊಂಡು ಭೋಜರಾಜನೊಡನೆ ವಿನಯದಿಂದಲೇ ಮಾತನಾಡುತ್ತ -

"ಮಹಾರಾಜರಿಗೆ ಜಯವಾಗಲಿ" ಎಂದನು.

ಆಗ ಭೋಜರಾಜನು ಮನದಲ್ಲೆ ನಗುತ್ತ "ನಾನಿನ್ನು ಮಹಾರಾಜನಾಗಿಲ್ಲವಲ್ಲ ಅಚಲಸಿಂಹರೆ" ಎಂದನು.

"ಹೌದು ಹೌದು..... ತಾವಿನ್ನು ಮಹಾರಾಜರಾಗಿಲ್ಲ ನಿಜ. ಆದರೆ ಮುಂದೆ ಈ ಧಾರಾನಗರವನ್ನಾಳುವ ಮಹಾಪ್ರಭುಗಳಲ್ಲವೇ ತಾವು......" ಎಂದು ಕಪಟತನದಿಂದ ನಾಟಕೀಯವಾಗಿಯೇ ನುಡಿದ. ಅಚಲಸಿಂಹನ ಮುಖದಲ್ಲಿ ಎದ್ದು ಕಾಣುತ್ತಿದ್ದ ಆ ಮಾರ್ಮಿಕ ಭಾವವನ್ನು ಸೂಕ್ಷ್ಮರೀತಿಯಿಂದಲೆ ಗಮನಿಸಿದ್ದನು - ಚಾಣಾಕ್ಷನಾದ ಭೋಜ. ಆದರೂ ಮನಸ್ಸಿಗೆ ಅಷ್ಟಾಗಿ ಗಣನೆಗೆ ತಂದುಕೊಳ್ಳದೆ ಸಹಜವಾಗಿಯೇ ಮಾತನಾಡುತ್ತಾ,

"ಅದು ಸರಿ..... ಈಗ ನೀವು ಬಂದ ಕಾರ್ಯ?"

"ಅಂತಹ ಪ್ರಮಾದ ಕಾರ್ಯವೇನೂ ಇಲ್ಲ. ತಾವು ಅನುಮತಿ ನೀಡಿದ್ದೇ ಆದರೆ..... " ಎಂದು ವಿಷಯವನ್ನು ಅಪೂರ್ಣವಾಗಿ ಹೇಳಿ ನುಡಿದ.

"ಅದೇನು ಹೇಳಿ....., ಅನುಮಾನವೇಕೆ ನನ್ನಲ್ಲಿ"

"ತಾವು ವನವಿಹಾರ ಮಾಡಿ ಬಹಳ ದಿನಗಳಾಗಿ ಹೋಯಿತು. ಆಗಾಗ್ಗೆ ವಾಯುವಿಹಾರ ವನವಿಹಾರ ಮಾಡುವುದರಿಂದ ಧನ್ವಂತರಿಯೋಪಾದಿಯಲ್ಲಿ ಶರೀರದ ಆರೋಗ್ಯಕ್ಕೆ ಸಂಜೀವಿನಿ. ಮಾತ್ರವಲ್ಲದೆ ಅದರಿಂದ ಹೊಸ ಹೊಸ ಅನುಭವಗಳು ಪ್ರಾಪ್ತವಾಗಬಲ್ಲದು ಭೋಜರಾಜರೆ" ಎಂದನು.

"ಬಹಳ ಸಂತೋಷ. ವನವಿಹಾರ ಮಾಡಿಬರಲು ನನಗೂ ಸಹ ಅಪೇಕ್ಷೆಯುಂಟಾಗಿದೆ."

"ಸರಿ..... ನಾನು ರಥವನ್ನು ಸಿದ್ಧಪಡಿಸುತ್ತೇನೆ"

"ರಥದಲ್ಲಿ ಹೋಗುವುದು ಬೇಡ ಅಚಲಸಿಂಹರೇ"

"ಹಾಗಾದರೆ ಚೆನ್ನಾಗಿ ಓಡುವ ಸುಂದರವಾದ ಎರಡು ಕುದುರೆಗಳನ್ನೇ ಆಯ್ಕೆಮಾಡಿ ತರುತ್ತೇನೆ" ಎಂದು ಹುಮ್ಮಸ್ಸಿನಿಂದ ನುಡಿದ ಅಚಲಸಿಂಹ.

"ಕುದುರೆಗಳೂ ಬೇಡ ಅಚಲಸಿಂಹ......." ಎಂದು ತಾನು ಆಗ ಓದುತ್ತಿದ್ದ ಶ್ರೀ ರಾಮದೇವರು ಅರಣ್ಯದಲ್ಲಿ ಪಾದಯಾತ್ರೆ ಮಾಡುತ್ತ ಸಾಗುತ್ತಿದ್ದ ಹೃದಯಂಗಮ ಸನ್ನಿವೇಶವನ್ನು ಕುರಿತು ಮನದಲ್ಲೆ ಮೆಲುಕು ಹಾಕುತ್ತ ಮಾತನ್ನು ಮುಂದುವರಿಸಿ "ನಾವಿಬ್ಬರೂ ನಡದೇ ಹೋಗೋಣ. ಆನಂದವಾಗಿ ಪಾದಚಾರಿಗಳಾಗಿ ಸಾಗುತ್ತ ಸಾಗುತ್ತ ಆ ಅರಣ್ಯದ ಸಿರಿಸಂಪತ್ತನ್ನು ಚೆನ್ನಾಗಿ ಅನುಭವಿಸಿ ಬರೋಣ" ಎಂದು ನುಡಿದ ಭೋಜರಾಜ.

ಆಗ ಅಚಲಸಿಂಹನಿಗೆ ಎದೆ ಝಲ್ ಎಂದಿತ್ತು. ನಡೆದು ಹೋಗುವುದು ಸಾಧ್ಯವಾಗದ ಮಾತು ಎಂದರಿತ ಅಚಲಸಿಂಹನು ಭೋಜರಾಜರೊಡನೆ ಮತ್ತೊಮ್ಮೆ

ವಿನಯ ಸೂಸಿ ಮಾತನಾಡುತ್ತಾ "ನಡೆದು ಹೋದರೂ ಹೋಗಬಹುದೂ. ಆದರೆ ನನ್ನ ವಯಸ್ಸು..... ಐವತ್ತಕ್ಕೆ ಸಮೀಪಿಸಿಬಿಟ್ಟಿದೆ"

"ಓಹೋ. ತಿಳಿಯಿತು. ನಾನು ನಡೆಯಬಹುದು. ಆದರೆ ವಯಸ್ಸಿನಲ್ಲಿ ಹಿರಿಯರಾದ ನೀವು ನಡೆಯುವುದು ಬಹಳ ಕಷ್ಟವಾಗತ್ತೆ ಅಂತ ನಿಮ್ಮ ಅಭಿಪ್ರಾಯ ಅಲ್ಲವೆ ಅಚಲಸಿಂಹರೆ"

"ಹೌದು ಹೌದು" ಎಂದಷ್ಟೆ ನುಡಿದ ಅಚಲಸಿಂಹ.

"ಸರಿ. ಹಾಗಾದರೆ ಎರಡು ಕುದುರೆಗಳನ್ನೇ ಸಿದ್ಧಪಡಿಸಿ. ನಾನು ಸಿದ್ಧನಾಗುತ್ತೇನೆ" ಎಂದ ಭೋಜರಾಜ

- ಸಧ್ಯ ರೊಟ್ಟಿ ಜಾರಿ ತುಪ್ಪಕ್ಕೆ ಬಿತ್ತು ಎಂದು ನೇರವಾಗಿ ಅರಮನೆಯಿಂದ ಕುದುರೆಲಾಯಕ್ಕೆ ಆಗಮಿಸಿದ.

ಬಹುವಿಶಾಲವಾದ ಆ ಕುದುರೆಲಾಯದಲ್ಲಿ ಸುಂದರವಾದ ಕಟ್ಟುಮಸ್ತಾದ ನೂರಾರು ಕುದುರೆಗಳನ್ನು ಸಾಲುಸಾಲಾಗಿ ಕಟ್ಟಿ ಹಾಕಿದ್ದರು. ಎಲ್ಲ ಕುದುರೆಗಳು ಹುಲ್ಲು ಮೇಯುತ್ತಿದ್ದವು. ಹಾಗೆಯೇ ಆ ಕುದುರೆಗಳನ್ನೇ ನೋಡುತ್ತ ಬರುತ್ತಿದ್ದ ಅಚಲಸಿಂಹನು ತನಗೆ ಉತ್ತಮವೆಂದು ತೋರಿದ ಎರಡು ಕುದುರೆಗಳನ್ನು ಆರಿಸಿಕೊಂಡು ಪ್ರಯಾಣಕ್ಕೆ ಸಿದ್ಧಪಡಿಸಿ ತಾನೂ ಸಿದ್ಧನಾದನು.

ಉತ್ಸಾಹಿಯಾದ ತರುಣ ಕಿಶೋರ ಭೋಜನು. ತನಗೆ ಭೂಷಣಪ್ರಾಯವಾದ ವಸ್ತ್ರಾಭರಣವನ್ನು ಧರಿಸಿ ಖಡ್ಗಧಾರಿಯಾಗಿ ಅರಮನೆಯ ಹೊರದ್ವಾರದಲ್ಲಿ ತನಗಾಗಿ ಸಿದ್ಧವಾಗಿ ಕಾದು ನಿಂತಿದ್ದ ಆಕರ್ಷಕ ಕುದುರೆ ಬಳಿಗೆ ಬಂದ. ಕುದುರೆಯ ಮೈಯನ್ನು ಸವರುತ್ತ ಅದಕ್ಕೆ ಸಂತೋಷವನ್ನುಂಟು ಮಾಡಿದ್ದನು.

ಕುದುರೆ ಸವಾರಿ ಮಾಡುವುದರಲ್ಲಿಯೂ ಸಹ ಅದ್ವಿತಿಯವಾದ ತರಬೇತಿ ಪಡೆದಿದ್ದನು ಭೋಜರಾಜ. ಅಲ್ಲಿಯೇ ಖಡ್ಗಧಾರಿಯಾಗಿ ಸಿದ್ಧನಾಗಿ ನಿಂತಿದ್ದ ಅಚಲಸಿಂಹನನ್ನು ಸಂಭೋದಿಸಿ ಮಾತನಾಡುತ್ತ,

"ಅಚಲಸಿಂಹರೆ ಪ್ರಯಾಣ ಮಾಡೋಣವೆ,"

"ಅಗತ್ಯವಾಗಿ. ಈಗ ಕಾಲ ಶುಭಕಾಲವಾಗಿದೆ" - ಎಂದು ಮಾರ್ಮಿಕವಾಗಿಯೆ ನುಡಿದ ಅಚಲಸಿಂಹ.

ಇಬ್ಬರು ಜೊತೆಗೂಡಿ ಕುದುರೆಯನ್ನೇರಿ ಅರಣ್ಯದತ್ತ ಪ್ರಯಾಣ ಬೆಳೆಸಿದರು. ವಾಯುವೇಗವೋ ಎಂಬಂತೆ ಅತಿಯಾದ ವೇಗದಿಂದ ಸಾಗುತ್ತಿದ್ದ ಆ ಎರಡು ಕುದುರೆಗಳು ಧಾರಾನಗರವನ್ನು ಹಿಂದಕ್ಕೆ ಹಾಕಿ ಅರಣ್ಯ ಮಧ್ಯೆ ಸಾಗುತ್ತಿತ್ತು.

ರಾಹುಗ್ರಸ್ತ ಚಂದ್ರನಂತೆ ಕಾಂತಿಹೀನವಾಗಿದ್ದ ಅಚಲಸಿಂಹನ ಮುಖವನ್ನೊಮ್ಮೆ ನೋಡಿ ಪ್ರಶ್ನಿಸುತ್ತಾ "ಅಚಲಸಿಂಹರೆ. ಇಂದೇಕೋ ನೀವು ಮಾರ್ಗಾಯಾಸದಿಂದ ಬಹಳವಾಗಿ ಬಳಲಿರುವಂತೆ ತೋರುತ್ತಿದೆಯಲ್ಲ?"

"ಇಲ್ಲ..... ಇಲ್ಲ...... ಹಾಗೇನೂ ಇಲ್ಲ......" ಎಂದು ತನ್ನ ಕುಯುಕ್ತಿಯ ಕಾರ್ಯಸಾಧನೆಯನ್ನು ಹೃದಯದಲ್ಲೇ ಬಚ್ಚಿಟ್ಟು ತೋರಿಕೆಗೆ ಮಾತ್ರ ನಾಟಕೀಯವಾಗಿ ನುಡಿದ ಅಚಲಸಿಂಹ.

ಮತ್ತೊಮ್ಮೆ ಹೃದಯವನ್ನು ಕೆದಕಿ ಪ್ರಶ್ನಿಸಿದ ಭೋಜನು "ಹಾಗಾದರೆ, ನಿಮ್ಮ ಜೀವನದಲ್ಲಿಯಯೇ ಹಿಂದೆಂದೂ ಒದಗಿರದ ಯಾವುದೋ ಒಂದು ಅಚಾತುರ್ಯಕ್ಕೆ ನೀವು ಸಿಕ್ಕಿ ಭಾದೆ ಪಡುತ್ತಿರುವಂತೆ ನನ್ನ ಮನಸ್ಸು ನುಡಿಯುತ್ತಿದೆ. ಅಂತಹ ಸಮಸ್ಯೆ ಯಾವುದಾದರು ಇದ್ದರೆ ಹೇಳಿ. ನಾನದನ್ನು ಬಗೆಹರಿಸುತ್ತೇನೆ"

- ಎಂದನು ಭೋಜರಾಜ.

ಮಹಾತೇಜಸ್ವಿಯಾದ ಭೋಜನಾದರೋ ನಡುವಿನಲ್ಲಿ ಖಡ್ಗಧರಿಸಿದವನಾಗಿ ಅಚಲಸಿಂಹನೊಡನೆ ಸಂತೋಷಕರವಾದ ಮಾತನಾಡುತ್ತ ಬಹು ಸುಂದರವಾದ ಅರಣ್ಯದಲ್ಲಿ ವನವಿಹಾರ ಮಾಡುತ್ತ ಸಾಗುತ್ತಿದ್ದರು. ಮಾರ್ಗಾಯಾಸವಾಗದ ಹಾಗೆ ಭೋಜರಾಜನೆ ಅಚಲಸಿಂಹನನ್ನು ಕುರಿತು ಅನೇಕವಾದ ಹೊಸ ಹೊಸ ವಿಷಯಗಳನ್ನು ಪ್ರಸ್ತಾಪ ಮಾಡುತ್ತ ವಿನೋದವಾಗಿ ಮಾತನಾಡುತ್ತಲೇ ಇದ್ದ.

ಆದರೆ ಅಚಲಸಿಂಹನಿಗೆ ಅಗ ಅದೊಂದು ಬೇಕಿರಲಿಲ್ಲ. ಎಷ್ಟು ಹೊತ್ತಿಗೆ ಈ ಭೋಜನನ್ನು ಮುಗಿಸಿ ಬಿಡುವೆನೋ ಎಂದು ಹಾ ತೊರೆಯುತ್ತಿತ್ತು. - ಅವನ ಕ್ಷುದ್ರ ಮನಸ್ಸು. ಕೇವಲ ತೋರಿಕೆಗೆ ಮಾತ್ರ ಮಾತನಾಡುತ್ತಿದ್ದನು. ಅರಣ್ಯದಲ್ಲಿ ಜೊತೆಗೂಡಿ ಸಾಗುತ್ತಿದ್ದ ಅವರು ಅಲ್ಲಿಯೇ ಇದ್ದ ಒಂದು ಮನೋಹರವಾದ ಕಾಳಿಕಾದೇವಿಯ ದೇವಾಲಯದ ಬಳಿಗೆ ಬಂದರು. ಆ ಕಾಳಿಕಾದೇವಿ ಗುಡಿಯನ್ನು ಕಂಡ ಭೋಜನು "ಈ ದೇವಾಲಯವನ್ನು ನೋಡಿ ಬರೋಣ ಅಚಲಸಿಂಹರೆ." ಎಂದನು.

"ಪ್ರಭುಗಳ ಚಿತ್ತ" ಎಂದಷ್ಟೆ ನುಡಿದ ನಂತರ ತನ್ನಲ್ಲಿ ತಾನೆ ಮಾತನಾಡಿಕೊಳ್ಳುತ್ತಾ "ಹೌದು ಭೋಜನನ್ನು ಮುಗಿಸಿ ಬಿಡಲು ಇದುವೆ ತಕ್ಕ ಸ್ಥಳವಾಗಿದೆ. ಈ ಸ್ಥಳದಲ್ಲಿ ನಮ್ಮಿಬ್ಬರ ಹೊರತು ಬೇರೆ ಯಾರು ಇಲ್ಲ" ಎಂದು ನಿರ್ಧರಿಸಿದನು.

ಭೋಜರಾಜನು ಆ ಕಾಳಿಕಾದೇವಿ ಗುಡಿಯ ಸುತ್ತಮುತ್ತಣ ಪ್ರಕೃತಿ ಸೌಂದರ್ಯವನ್ನು ವೀಕ್ಷಿಸಬರಲು ಉದ್ಯುಕ್ತನಾಗಿ 'ಅಚಲಸಿಂಹರೆ. ಈ ವನ ಸಿರಿಯ ಸುಂದರ ಸೊಬಗು ತುಂಬ ಚೆನ್ನಾಗಿದೆ. ಬನ್ನಿ ಸ್ವಲ್ಪ ಹೊತ್ತು ಜೊತೆಗೂಡಿ ಸುತ್ತಾಡಿ ಬರೋಣ" ಎಂದು ನುಡಿದನು. ಆದರೆ ಅದೊಂದು ಇಷ್ಟವಿಲ್ಲದ ಅಚಲಸಿಂಹನು "ಇಲ್ಲ ನನಗೆ ಆಯಾಸವಾಗಿದೆ. ನಾನು ಇಲ್ಲಿಯೇ ಕೊಂಚ ಹೊತ್ತು ವಿಶ್ರಮಿಸಿಕೊಳ್ಳುತ್ತೇನೆ. ನೀವು ಹೋಗಿ ಬನ್ನಿ." ಎಂದನು.

"ಸರಿ ನೀವು ಇಲ್ಲಿಯೇ ಇರಿ. ನಾನು ಸುತ್ತಾಡಿ ಬರುತ್ತೇನೆ" ಎಂದು ಹೇಳಿ ವಾಯು ವಿಹಾರ ಮಾಡಿ ಬರಲು ಉತ್ಸಾಹದಿಂದಲೇ ಹೊರಟನು.

ಇತ್ತ ಖಡ್ಗಧಾರಿಯಾದ ಅಚಲಸಿಂಹನ ದುಗುಡ ತುಂಬಿದ ಮನಸ್ಸು ಡೋಲಾಯಮಾನವಾಗಿತ್ತು. ಭೋಜನನ್ನು ತಾನಿರಿಸಿಕೊಂಡಿದ್ದ ಕತ್ತಿಯಿಂದ ಒಂದೇ

ಏಟಿಗೆ ಶಿರಶ್ಛೇದನ ಮಾಡಲು ಹಾತೊರೆಯುತ್ತಿತ್ತು. ಆದರೆ ಅವನ ಮತ್ತೊಂದು ಮನಸ್ಸು "ಹೇ ಪಾಪಿ! ಅಂತಹ ಮುಗ್ಧ ಕಿಶೋರನನ್ನು ವಿನಾಕಾರಣ ಅನ್ಯಾಯವಾಗಿ ಮುಗಿಸಲು ಪ್ರಯತ್ನಿಸುತ್ತಿರುವೆಯಲ್ಲ, ನೀನೆಂತಹ ರಾಜ ದ್ರೋಹಿ..... ದೇಶ ದ್ರೋಹಿ" ಎಂದು ನಾನಾ ರೀತಿಯಲ್ಲಿ ಅವನ ಮನಸ್ಸು ಅವನನ್ನೇ ಹಿಯಾಳಿಸುತ್ತಿತ್ತು. ಹೀಗಾಗಿ ಇತ್ತ ಹುಲಿ ಅತ್ತ ದರಿ ಎಂಬಂತಾಗಿತ್ತು ಅವನ ಪರಿಸ್ಥಿತಿ. ಆದರೂ ಧೈರ್ಯದಲ್ಲಿ ಸಾಹಸದಲ್ಲಿ ಮಹಾಭಾರತದ ದುರ್ಯೋಧನ ಮನಸ್ಸುಳ್ಳವನಾಗಿದ್ದನು. ಅಷ್ಟೇ ಕರುಣೆಯೂ ಇತ್ತು ಅವನಲ್ಲಿ.

ವಾಯುವಿಹಾರ ಮಾಡಿ ಬಂದ ಭೋಜನು ಕೊಳದ ಬಳಿಗೆ ಬಂದನು. ತನ್ನ ಶಿರದ ಮೇಲಿನ ರುಮಾಲನ್ನು, ನಡುವಿನಲ್ಲಿರಿಸಿಕೊಂಡಿದ್ದ ಖಡ್ಗವನ್ನು ನೀಳ ನಿಲುವಂಗಿಯನ್ನು ಹಾಗೂ ಪಾದರಕ್ಷೆಯನ್ನು ಅಲ್ಲಿಯೇ ಇದ್ದ ಚೊಕ್ಕಟವಾದ ಸೋಪಾನದ ಮೇಲಿರಿಸಿ, ಕೊಳದ ಒಂದೊಂದು ಮೆಟ್ಟಿಲು ಇಳಿಯುತ್ತ ನೀರಿದ್ದ ಸ್ಥಳಕ್ಕೆ ಬಂದನು. ಆಗ ಕೊಳದಲ್ಲಿ ಈಜೋಣವೆಂದೆನಿಸಿತ್ತು. ಆದರೆ ಸಮಯ...... ಆಗಲೆ ಹೊತ್ತು ಮೀರಿದ್ದರಿಂದ, ಬರಿ ಕೈಕಾಲು ಮುಖವನ್ನು ತೊಳೆದುಕೊಳ್ಳಲು ನಿರ್ಧರಿಸಿದನು. ಹಾಗೆ ಅಂದುಕೊಳ್ಳುತ್ತಿದ್ದಂತೆ ಅನಿರೀಕ್ಷಿತವಾಗಿ ಕಂಡ ಭಯಾನಕ ದೃಶ್ಯ....... ಬಹುದೊಡ್ಡಗಾತ್ರ ನಾಗಸರ್ಪ ಒಂದು ಕಿರುಪ್ರಾಣಿಯಾದ ಕಾಡು ಕಪ್ಪೆಯೊಂದನ್ನು ಹಿಡಿದು ನುಂಗುತ್ತಿತ್ತು. ಆಗ ಆ ಕಪ್ಪೆಯ ಜೀವವನ್ನು ಉಳಿಸಲು ಮನಸ್ಕನಾಗಿ ಆ ಹಾವನ್ನು ಕೊಲ್ಲಲು ಮಿಂಚಿನವೇಗದಲ್ಲಿ ಮೇಲಿರಿಸಿದ್ದ ಖಡ್ಗವನ್ನು ತೆಗೆದುಕೊಂಡು ಬಂದನು. ಅಷ್ಟರಲ್ಲೆ ಆ ಹಾವು ಕಪ್ಪೆಯ ಮುಕ್ಕಾಲು ದೇಹ ನುಂಗಿ ಬಿಟ್ಟು, ಇನ್ನೇನು ಕಾಲುದೇಹ ಮಾತ್ರ ಉಳಿದಿತ್ತು. ಆಗ ಭೋಜನು ಯೋಚಿಸಿದ್ದು ಹೀಗೆ "ಈಗ ನಾನು ಈ ಖಡ್ಗದಿಂದ ಹಾವನ್ನು ಕೊಂದರೆ ಹಾವು ಸಾಯುತ್ತದೆ. ಕಪ್ಪೆಯೂ ಈಗಾಗಲೇ ಮರಣ ಯಾತನೆಯಲ್ಲಿದ್ದು ಅದೂ ಸಹ ಜೀವ ತೊರೆದು ಬಿಡುತ್ತದೆ. ಎಂತಹ ವಿಪರ್ಯಾಸ...... ಕ್ಷತ್ರಿಯ ಕುಲದಲ್ಲಿ ಹುಟ್ಟಿದ ನಾನು ಕಣ್ಣಾರೆ ಕಂಡ ಒಂದು ಕಿರುಪ್ರಾಣಿಯ ಜೀವವನ್ನು ಉಳಿಸಲಾರದೆ ಹೋದೆನಲ್ಲ...... ಎಲ್ಲ ಆ ವಿಧಿಲೀಲೆ" ಎಂದು ಮಮ್ಮಲ ಮರುಗಿದ. ಅಷ್ಟರಲ್ಲಿ ಕಪ್ಪೆಯನ್ನು ನುಂಗಿದ ಹಾವು ಎಲ್ಲಿಯೋ ಅಡಗಿ ಕಣ್ಮರೆಯಾಗಿತ್ತು.

ಖಡ್ಗವನ್ನು ಅಲ್ಲಿಯೇ ಇರಿಸಿ ಕೈಕಾಲು ಮುಖ ತೊಳೆದುಕೊಂಡು ಜಲಪಾನ ಮಾಡಿದ. ನಂತರ ಖಡ್ಗ ಸಮೇತನಾಗಿ ಕೊಳದ ಮೆಟ್ಟಿಲೇರಿ ಬಂದು ಖಡ್ಗವನ್ನು ತಾನು ಮೊದಲು ಇರಿಸಿದ್ದ ಸ್ಥಳದಲ್ಲಿಯೇ ಇರಿಸಿ. ಅಲ್ಲಿಯೇ ಹತ್ತಿರದಲ್ಲಿದ್ದ ಕಾಳಿಕಾದೇವಿ ದೇವಾಲಯಕ್ಕೆ ಬಂದ. ಆ ಕಾಳೀ ವಿಗ್ರಹವಾದರೋ ಬಹು ಸುಂದರವಾಗಿಯೂ ಹದಿನಾರು ಕೈಗಳನ್ನು ಹೊಂದಿದ್ದು ಒಂದೊಂದು ಕೈಯಲ್ಲೂ ಒಂದೊಂದು ಆಯುಧವನ್ನು ಹಿಡಿದು ಬೃಹದಾಕಾರ ನಿಲುವಿನಲ್ಲಿ ಕಂಗೊಳಿಸುತ್ತಿತ್ತು. ಆ ದೇವಿಯನ್ನು ನೋಡಿದ ಭೋಜನಿಗೆ ಹೃದಯಾಂತರಾಳದಿಂದ ಭಕ್ತಿ ಉಕ್ಕಿ ಹರಿದಿತ್ತು. ಆ ಉನ್ಮಾದ ಸಂತೋಷದಿಂದ..... ಸ್ವಯಂ ಸಂಗೀತ ಬಲ್ಲವನಾದ ಅವನು ಆ ಕಾಳಿಕಾದೇವಿಯನ್ನು ಸ್ತುತಿಸುತ್ತ ತನ್ನ ಮಧುರ ಕಂಠದಿಂದ ಸುಶ್ರಾವ್ಯವಾಗಿ ಗಾನ ಒಂದನ್ನು ಹಾಡಿದ. ದೇವಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಹೊರಬಂದ.

ಆಗ ಭೋಜನು ತನ್ನತ್ತ ಬರುತ್ತಿದ್ದನ್ನು ದೂರದಿಂದ ಗಮನಿಸಿದ ಅಚಲಸಿಂಹನು. ತನ್ನಲ್ಲಿ ತಾನೆ ಮಾತನಾಡಿಕೊಳ್ಳುತ್ತಾ "ಹೌದು..... ಭೋಜರು ಇತ್ತ ಬರುತ್ತಿದ್ದಾರೆ. ಈಗ ಅವರು ನಿರಾಯುಧರಾಗಿಯೇ ಬರುತ್ತಿದ್ದಾರೆ. ಖಡ್ಗಧಾರಿಯಾದ ನಾನು ಈ ಖಡ್ಗದಿಂದ ಒಂದೇ ಬಾರಿಗೆ ತುಂಡರಿಸಿ ಬಿಡುತ್ತೇನೆ. ಆ ರಕ್ತ ಸಿಕ್ತ ರುಂಡವನ್ನು ಈ ನನ್ನ ರುಮಾಲಿನಲ್ಲಿ ಮೂಟೆ ಕಟ್ಟಿಕೊಂಡು ಹೋಗಿ ನನ್ನ ಧಣಿಯಾದ ಧಾರಾನಗರದ ರಾಜ..... ಮುಂಜರಾಜನಿಗೆ ಒಪ್ಪಿಸಿ ಬಿಡುತ್ತೇನೆ. ಅಲ್ಲಿಗೆ ನನ್ನ ಕರ್ತವ್ಯ ಮುಗಿದಂತೆ" ಎಂದು ಹೇಳಿಕೊಂಡು ನಡುವಿನಲ್ಲಿರಿಸಿದ್ದ ಖಡ್ಗವನ್ನು ಎಳೆಯಲು ಹೋದನು. ಆದರೆ ತಾನೊಂದು ರೀತಿ ಬಗೆದರೆ ದೈವ ಬೇರೊಂದು ರೀತಿಯಲ್ಲಿ ಬಗೆದಿತ್ತು ಎಂಬಂತೆ ತನಗರಿವಿಲ್ಲದೆ ಅಲ್ಲಿಯೆ ಇದ್ದ ಮತ್ತೊಂದು ಸರ್ಪ ಅವನ ಎರಡೂ ಕಾಲನ್ನು ಸುತ್ತು ಹಾಕಿ ಬಿಟ್ಟಿತ್ತು. ಆಗ ಪ್ರಾಣಭಯದಿಂದ "ಅಯ್ಯೋ ಸರ್ಪ ನನ್ನನ್ನು ಕಚ್ಚುತ್ತಿದೆ" ಎಂದು ಕಿರುಚಿದ.

ಅದೇ ವೇಳೆಗೆ ಸರಿಯಾಗಿ ಹತ್ತಿರವೇ ಬರುತ್ತಿದ್ದ ಭೋಜನು ಮಿಂಚಿನಭರದಲ್ಲಿ ಆಪತ್ಕಾಲದ ಅವ್ಯಕ್ತ ಪ್ರಚಂಡ ಧೈರ್ಯದಿಂದ ಅಚಲಸಿಂಹನ ಕಾಲುಗಳನ್ನು ಸುತ್ತು ಹಾಕುತ್ತಿದ್ದು ಇನ್ನೇನು ಕಚ್ಚಿಬಿಡಬೇಕು ಎಂಬುವಷ್ಟರಲ್ಲಿ ಆ ಸರ್ಪವನ್ನು ಬಲಭೀಮನಂತೆ ಹಿಡಿದೆಳೆದು ಅತ್ತ ಬಿಸಾಡಿದ. ಆ ರೀತಿ ಎಸೆದ ರಭಸಕ್ಕೆ ಆ ಸರ್ಪವೂ ಬಹುದೂರದ ಮರಗಳ ಗುಂಪಿನೆಡೆಯಲ್ಲಿ ಬಿದ್ದು ಅದೆತ್ತಲೋ ಸಾಗಿಬಿಟ್ಟಿತು.

"ಆಹಾ..... ಎಂತಹ ವಿಪರ್ಯಾಸ. ನಾನು ಈ ಮೊದಲು ಒಂದು ಕಿರು ಪ್ರಾಣಿಯಾದ ಕಪ್ಪೆಯ ಜೀವವನ್ನಂತು ಉಳಿಸಲಾಗಲಿಲ್ಲ. ಆದರೆ. ನಮ್ಮ ಅರಮನೆಯ ನಂಬಿಕೆಯ ಸರದಾರ ಅಚಲಸಿಂಹನನ್ನಾದರೂ ಜೀವದಿಂದ ಉಳಿಸಿದೆನಲ್ಲಾ" ಎಂದು ತೃಪ್ತಿಯಿಂದ ನುಡಿದುಕೊಂಡ.

ಆಗ ಹದಿನಾರು ವರ್ಷದ ಕಿಶೋರನಾದರೂ ಭೀಮಕಾಯ ಶರೀರ ಉಳ್ಳವನೇ. ಆದ ಭೋಜರಾಜನ ಮುಖವನ್ನು ನೋಡಿದ ಅಚಲಸಿಂಹನು ಒಮ್ಮೆಯೇ ಬಿಕ್ಕಿ ಬಿಕ್ಕಿ ಅಳುವುದಕ್ಕೆ ಪ್ರಾರಂಭಿಸಿದ.

ಆಗ ಭೋಜನು ಅಚಲಸಿಂಹನನ್ನು ಸತ್ಕರಿಸಿ ಬೆನ್ನು ತಟ್ಟಿ ಮಾತನಾಡುತ್ತ "ಅಚಲಸಿಂಹರೆ ಆ ಹಾವು ಈಗ ಇಲ್ಲ..... ಅದು ಹೊರಟು ಹೋಯಿತು. ನಾನೇ ಅದನ್ನು ದೂರ ಬಲು ದೂರ ಎಸೆದುಬಿಟ್ಟೆ, ಧೈರ್ಯವಾಗಿರಿ" ಎಂದು ಧೈರ್ಯ ತುಂಬಿ ನುಡಿದ ಕಿಶೋರನಾದ ಭೋಜ. ಆಗ ಅಚಲಸಿಂಹನು ಮತ್ತೆ ಪ್ರಲಾಪಿಸುತ್ತ."

"ಅಯ್ಯೋ..... ಆ ಹಾವು ನನ್ನನ್ನು ಕಚ್ಚಿ ಬಿಟ್ಟಿದ್ದಿದ್ದರೆ ಚೆನ್ನಾಗಿತ್ತು. ಈ ನನ್ನ ಪಾಪಿ ದೇಹವನ್ನು ಕಚ್ಚಿದ್ದಿದ್ದರೆ ಚೆನ್ನಾಗಿತ್ತು" ಎಂದು ಅತಿಯಾದ ದುಃಖದಿಂದ ನುಡಿದ. ಆಗ ಅಚಲಸಿಂಹನ ಮಾತು ಭೋಜನಿಗೆ ಅತಿಯಾದ ಆಶ್ಚರ್ಯವನ್ನುಂಟುಮಾಡಿತು. "ಇಂದೇಕೆ ಈ ಸರದಾರನು ಈ ರೀತಿಯಾಗಿ ಏನೇನೊ ಮಾತನಾಡುತ್ತಿದ್ದಾನೆ? ಧಾರಾನಗರದಿಂದ ಮಾರ್ಗದುದ್ದಕ್ಕೂ ಒಂದು ರೀತಿಯ ನಿಘೂಢವಾದ ಯೋಚನಾ ಮಗ್ನರಾಗಿಯೇ ಬರುತ್ತಿದ್ದರು. ಇದರ ರಹಸ್ಯವಾದರು ಏನು. ಇರಲಿ. ಇವರನ್ನೇ ಕೇಳಿ ತಿಳಿದುಕೊಳ್ಳೋಣ" ಎಂದು ತೀರ್ಮಾನಿಸಿ ಅಚಲಸಿಂಹರತ್ತ ಮುಖ ಮಾಡಿದನು.

"ಅಚಲಸಿಂಹರೆ..... ಇಂದು ನೀವು ಯಾವುದೋ ವಿಷಯವನ್ನು ನಿಮ್ಮ ಮನಸ್ಸಿನಲ್ಲಿ ಬಚ್ಚಿಟ್ಟು, ಕೇವಲ ತೋರಿಕೆಗೆ ಮಾತ್ರ ವಿಚಿತ್ರ ರೀತಿಯಲ್ಲಿ ವರ್ತಿಸುತ್ತಿರುವಿರಿ, ಯಾವಾಗಲೂ ಬಿಚ್ಚು ಮನಸ್ಸಿನ ಸ್ವಭಾವದವರಾದ ನೀವು ಇಂದು ಒಂದು ಮಹತ್ತರ ವಿಷಯಕ್ಕಾಗಿ ಪರಿತಪಿಸುತ್ತಿರುವಿರಿ...... ಹೇಳಿ, ಆ ನಿಮ್ಮ ನಿಘೂಢ ರಹಸ್ಯವಾದರೂ ಏನು?" ಎಂದು ಅಚಲಸಿಂಹನ ಬುಡವನ್ನು ಹಿಡಿದಲ್ಲಾಡಿಸಿ ಕೇಳಿದರು.

ಆಗ ಅಚಲಸಿಂಹನು ಮತ್ತಷ್ಟು ಜೋರಾಗಿ ಪ್ರಲಾಪಿಸುತ್ತಾ "ಅಯ್ಯೋ ನಾನೊಬ್ಬ ಪರಮ ಪಾಪಿ, ಭೋಜರಾಜರೆ ನಾನೊಬ್ಬ ಕಟುಕ, ಕೊಲೆಗಾರ, ವಿಶ್ವಾಸಘಾತಕ, ರಾಜದ್ರೋಹಿ, ಪ್ರಜಾದ್ರೋಹಿ, ಉಂಡ ಮನೆಗೆ ಎರಡು ಬಗೆದ ನಂಬಿಕೆ ದ್ರೋಹಿ" ಎಂದು ನಾನಾ ರೀತಿಯಲ್ಲಿ ತನ್ನನ್ನು ತಾನೆ ಹೀನಾಯವಾಗಿ ನಿಂದಿಸಿಕೊಳ್ಳುತ್ತ ದುಃಖದಿಂದ ನುಡಿದ......

"ನೀವು ಈ ರೀತಿಯಾಗಿ ಮಾರ್ಪಾಟಾಗಲು ಕಾರಣವಾದರೂ ಏನು? .ನೀವು ಇಲ್ಲಿಗೆ ಬಂದಿರುವ ನಿಮ್ಮ ಗುರಿಯಾದರು ಏನು..... ಅಚಲಸಿಂಹರೆ"

"ಭೋಜರಾಜರೆ ನನ್ನ ಕ್ಷಮಿಸಿ...... ಇದೋ 'ರಾಜಾಜ್ಞೆ' ಯೊಂದನ್ನು ಹೊತ್ತು ತಂದಿದ್ದೇನೆ..... ಈ ರಾಜಾಜ್ಞೆಯೂ ನಿಮ್ಮ ಚಿಕ್ಕಪ್ಪನವರೆ ಆದ ಈಗ ಹಂಗಾಮಿಯಾಗಿ ರಾಜ್ಯಭಾರ ಮಾಡುತ್ತಿರುವ ಮುಂಜರಾಜರು ಸ್ವತಹ ಅವರೇ ಬರೆದು ನನ್ನೊಡನೆ ಅತಿರಹಸ್ಯವಾಗಿ ಕಳುಹಿಸಿದ್ದಾರೆ" ಎಂದು ಬಿಕ್ಕಿ ಬಿಕ್ಕಿ ಅಳುತ್ತ ನುಡಿದ.

"ಏನದು ಆ ರಾಜಾಜ್ಞೆ, ನೀವೇ ಓದಿ ಹೇಳಿ"

"ಅಯ್ಯೋ..... ಈ ರಾಜಾಜ್ಞೆಯನ್ನು ನಾನಂತೂ ಓದಲಾರೆ. ಮೂರುದಶಕಗಳಿಂದಲೂ ಆ ನಿಮ್ಮ ಅರಮನೆಯಲ್ಲಿ ಉಪ್ಪುಂಡು ಬೆಳೆದ ನಾನು ಈ ರಾಜಾಜ್ಞೆಯನ್ನು ಓದಲಾರೆ ಮಹಾಪ್ರಭು....."

"ಪರವಾಗಿಲ್ಲ, ರಣರಂಗಕ್ಕಿಳಿದ ಕ್ಷತ್ರಿಯನು ಯಾರೆ ಆಗಲಿ, ಯಾವ ಕಾರಣದಿಂದಲೆ ಆಗಲಿ ಹಿಂಜರಿಯಬಾರದು. ಹೇಳಿ ಆ ರಾಜಾಜ್ಞೆ ಏನಿದೆ ಹೇಳಿಬಿಡಿ."

"ಓದುತ್ತೇನೆ ಮಹಾಪ್ರಭು, ಓದಿಯೇ ಬಿಡುತ್ತೇನೆ. ಈಗ ಕೊಂಚ ಹೊತ್ತಿನ ಮುಂಚೆ ಕ್ರೂರ ಸರ್ಪದಿಂದ ನನಗೆ ಜೀವದಾನ ಮಾಡಿದ ಜೀವಧಾತರಾದ ನಿಮ್ಮ ಮುಂದೆ ಓದಿಯೇ ಬಿಡುತ್ತೇನೆ" ಎಂದು ದುಃಖತಂದುಕೊಂಡು ನುಡಿಯುತ್ತಾ "ಈ ಧಾರಾನಗರದ ಮಹಾರಾಜ ಮುಂಜರಾಜನಾದ ನಾನು ನಮ್ಮ ಅರಮನೆಯ ಸರದಾರನಾದ ಅಚಲಸಿಂಹನಿಗೆ ವಹಿಸುತ್ತಿರುವ ರಾಜರಹಸ್ಯ ಕರ್ತವ್ಯ ವೇನೆಂದರೆ..... ನೀವು ಈ ಕೂಡಲೆ ಉಪಾಯದಿಂದ ಕಿಶೋರನಾದ ಭೋಜನನ್ನು ಅರಣ್ಯಕ್ಕೆ

ಕರೆದುಕೊಂಡು ಹೋಗಿ ಅಲ್ಲಿ ಯಾರೂ ಇಲ್ಲದ ನಿರ್ಜನ ಪ್ರದೇಶದಲ್ಲಿ ಅವನ 'ಶಿರಚ್ಛೇದನ' ಮಾಡಿ ಅವನ ಎರಡು ಕಣ್ಣುಗಳನ್ನು ತಂದು ತೋರಿಸುವುದು.

ಇಂತು

-ಮುಂಜರಾಜ

- ಎಂದು ರಾಜಾಜ್ಞೆಯನ್ನು ಓದಿ ಹೇಳಿದ.

ಆಗ ಕಿಶೋರನಾದ ಭೋಜನು ಒಮ್ಮೆಯೆ ಗಗನ ಮಂಡಲವೇ ಬಿರಿದು ಕಳಚಿ ಬೀಳುವಹಾಗಿ ಗಹಗಹಿಸಿ ನಕ್ಕ..........

ಆ ನಗುವಿಗೆ ಅಚಲಸಿಂಹನ ಪ್ರಾಣ ಪಕ್ಷಿಯೇ ಹಾರಿಹೋದಂತಾಗಿತ್ತು.

ರಾಜಾಜ್ಞೆ ಕೇಳಿದ ಭೋಜನು ಲೇಶಮಾತ್ರವೂ ವಿಚಲಿತನಾಗಲಿಲ್ಲ. ಆ ರಾಜಾಜ್ಞೆಯಿಂದ ಒಂದು ಚಿಕ್ಕ ಇರುವೆ ಕಡ್ಡಿಯಷ್ಟು ಸಹ ಮನಸ್ಸಿಗೆ ನೋವಾಗಲಿಲ್ಲ. ಬುದ್ಧಿಯಲ್ಲಿ ಜ್ಞಾನ ಬ್ರಹ್ಮನೇ ಆದ ಅವನಿಗೆ ಎಲ್ಲವೂ ವಿಧಿಲೀಲೆ ಎಂದರಿತವನೇ ಆಗಿದ್ದ. ಆಗ ಧೈರ್ಯವಾಗಿಯೇ ಅಚಲಸಿಂಹನೊಡನೆ ಮಾತಿಗಾರಂಭಿಸಿ ಹೇಳುತ್ತ "ಭೇಶ್ ಅಚಲಸಿಂಹರೆ! ಒಳ್ಳೆಯ ರಾಜಾಜ್ಞೆಯನ್ನೇ ಹೊತ್ತು ತಂದಿರುವಿರಿ. ಬಹಳ ಸಂತೋಷ....... ನನ್ನ ಚಿಕ್ಕಪ್ಪನವರು ಕ್ಷಣಿಕವಾದ ರಾಜ್ಯದಾಹದಿಂದಾಗಿ ನಿಮಗೆ ಒಳ್ಳೆಯ ಕರ್ತವ್ಯವನ್ನು ಪರಿಪಾಲಿಸಲು ಹೇಳಿ ಕಳುಹಿಸಿದ್ದಾರೆ. ಇದರಲ್ಲಿ ನನಗೆ ಕೊಂಚವೂ ಚಿಂತೆಯಿಲ್ಲ. ನಾನು ರಾಜಾಜ್ಞೆಗೆ ಬದ್ಧನಾಗಿದ್ದೇನೆ. ಈಗಲೇ ನೀವು ನಿಮ್ಮಲ್ಲಿರುವ ಖಡ್ಗದಿಂದ ನನ್ನ ಶಿರವನ್ನು ಛೇದಿಸಿ ಬಿಡಿ. ಬರಿ ಕಣ್ಣುಗಳೇ ಏಕೆ..... ನನ್ನ ಈ ಇಡಿ ರುಂಡವನ್ನು ಆ ನಿಮ್ಮ ರಾಜನಿಗೆ ಒಪ್ಪಿಸಿ ಬಿಡಿ. ಅವರ ಸುಖಕ್ಕೆ ನಾನು ಅಡ್ಡಿ ಬರುವುದಿಲ್ಲ. ನೆರವೇರಿಸಿ ನಿಮ್ಮ ರಾಜಾಜ್ಞೆಯನ್ನು" ಎಂದು ನಿರ್ಮಲಚಿತ್ತನಾಗಿಯೇ ನುಡಿದನು ಭೋಜ.

"ಆಹಾ! ಎಂತಹ ಅಸಾಧಾರಣ ಧೈರ್ಯ ಇವರಲ್ಲಿ. ತಾನು ಸಾಯುತ್ತೇನೆ ಎಂದು ತಿಳಿದರೂ ಸಹ....... ಹಂತಕನಾದ ನನ್ನನ್ನು ಸಾಯಿಸದೆ ಇವರೆ ಮರಣ ಪೀಠದಲ್ಲಿರುವ ಎಂತಹ ತ್ಯಾಗಜೀವಿ ಇವರು" ಎಂದು ಭೋಜನನ್ನು ಬಹುವಾಗಿ ಕೊಂಡಾಡಿದನು. ನಂತರ ತಾನೇ ಧೈರ್ಯ ತುಂಬಿಕೊಂಡು ಪ್ರಶ್ನಿಸುತ್ತ,

"ಮಹಾಪ್ರಭುಗಳಲ್ಲಿ ಒಂದು ವಿನಂತಿ"

"ಏನು ಹೇಳಿ"

"ನಿಮ್ಮ ಸಾವಿನ ಬಗ್ಗೆ ನಿಮಗೆ ಕೊಂಚವು ಭಯವಿಲ್ಲವೆ?"

"ಭಯ!" ಮತ್ತೊಮ್ಮೆ ಗಹಗಹಿಸಿ ನಕ್ಕು, "ಕ್ಷತ್ರಿಯ ವಂಶದಲ್ಲಿ ಅದರಲ್ಲೂ ಮಹಾ ಧರ್ಮಿಷ್ಟ ರಾಜನೆನಿಸಿ ಕೀರ್ತಿವಂತರಾದ ನಮ್ಮ ತಂದೆಯವರಾದ ಸಿಂಧೂಲರಾಜರ ಮಗನಾಗಿ ಜನ್ಮತಳೆದ ನನಗೆ ಭಯವೆಂಬುದೇ ಇಲ್ಲ ಅಚಲಸಿಂಹರೆ....." ಎಂದು ಆ ಕಾಳಿಕಾದೇವಿಯತ್ತ ತಿರುಗಿ ಶ್ಲೋಕ ಒಂದನ್ನು ಹೇಳುತ್ತ

ಭಗವತ್ತೇಜಸ್ಸದ್ಭಾವಾತ್ ದೇವೋ ನಶ್ವರಸ್ಸದಾ|
ಮನ್ಮರಣಾತ್ ಭಯಂನಾಸ್ತಿ ಮರ್ತುಂ ಸಿದ್ಧೋಭವಾಮ್ಯಹಮ್ ||

ರಾಜಾಜ್ಞಾ ಗೌರವಂ ಕೃತ್ವಾ ತದಾಜ್ಞಾಂ ಧಾರಯಾಮ್ಯಹಮ್|
ಏವಂ ಪ್ರೇಚೇ ಭೋಜರಾಜಃ ಪ್ರಾಪ್ತೇವಯಸಿ ಷೋಡಶೇ||

- ಎಂದು ಶ್ಲೋಕ ಮುಗಿಸಿ ಮಾತನಾಡುತ್ತಾ, "ಈ ದೇಹವು ಯಾವಾಗಲೂ ಕ್ಷಣಿಕವಾದದ್ದು; ಭಗವತಕೃಪೆ (ಶಕ್ತಿ) ತೇಜಸ್ಸು ನನ್ನಲ್ಲಿರುವುದರಿಂದ ನನಗೆ ನನ್ನ ಮರಣದ ಬಗ್ಗೆ ಕಿಂಚಿತ ಭಯವಿಲ್ಲ; ನಾನು ಮರಣ ಹೊಂದಲು ಸಿದ್ಧನಾಗಿದ್ದೇನೆ. ಮಿಗಿಲಾಗಿ ರಾಜಾಜ್ಞೆಯನ್ನು ಗೌರವಿಸಿ ಅದನ್ನು ಶಿರಸಾ ವಹಿಸುತ್ತೇನೆ" (ಪಾಲಿಸುತ್ತೇನೆ). ಎಂದು ನುಡಿದನು ಭೋಜರಾಜ.

"ಆಹಾ! ಎಂತಹ ಆತ್ಮಶಕ್ತಿ ಎಂತಹ ತ್ಯಾಗ.... ಈ ಭೋಜನಲ್ಲಿ ಅಡಗಿದೆ" ಎಂದು ಅವನನ್ನು ಮನಸಾರೆ ಗುಣಗಾನ ಮಾಡಿ ನಂತರ "ಮಹಾಪ್ರಭು ತಮ್ಮಲ್ಲಿ ಮತ್ತೊಂದು ಪ್ರಾರ್ಥನೆ".

"ಹೇಳಿ"

"ರಾಜಾಜ್ಞೆ ಮೇರೆಗೆ ಸಾವಿನ ದವಡೆಯಲ್ಲಿರುವ ತಾವು ತಮ್ಮ ಚಿಕ್ಕಪ್ಪನವರಿಗೆ ತಮ್ಮ ಮನದಾಳದ ಕಡೆಯ ನುಡಿ.... ತಮ್ಮ ಸ್ವಹಸ್ತ ಲಿಖಿತದಿಂದ ಬರೆದು ಕೊಡಬೇಕು ಎಂಬುದು ನನ್ನ ಅಪೇಕ್ಷೆ".

"ಅಗತ್ಯವಾಗಿ ಬರೆದು ಕೊಡುತ್ತೇನೆ" ಎಂದು ಹತ್ತಿರವೆ ಇದ್ದ ಬಾಳೆ ಗಿಡದ ಬಾಳೆ ಎಲೆಯೊಂದನ್ನು ಸೀಳಿ ತಂದು, ಅದರ ಮೂಲಕ ದೊನ್ನೆಯೊಂದನ್ನು ಮಾಡಿದ. (ಬಾಳೆ ಎಲೆ ದೊನ್ನೆ ಮಾಡುವ ವೈಖರಿಯನ್ನು ಸಹ ತಾನು ಗುರುಕುಲದಲ್ಲಿದ್ದಾಗ ವೈದಿಕ ಬ್ರಾಹ್ಮಣರನ್ನು ನೋಡಿ ಅರಿತಿದ್ದ ಚತುರನಾದ ಭೋಜ) ಹಾಗೆಯೇ ಗಿಡದ ಒಂದು ಕಡ್ಡಿಯನ್ನೇ ಲೇಖನಿಯಾಗಿ ಮಾಡಿಕೊಂಡು, ಚೂಪಾದ ಖಡ್ಗದ ತುದಿಯಿಂದ ತನ್ನ ಕೈಗೆ ಚುಚ್ಚಿಕೊಂಡು ಹೊರ ಬರುತ್ತಿದ್ದ ರಕ್ತವನ್ನು ದೊನ್ನೆಯಲ್ಲಿ ಸುರಿದು ಕೊಂಡು, ರಕ್ತಾಕ್ಷರದಿಂದ ಅಪೂರ್ವವಾದ ಶ್ಲೋಕ ಒಂದನ್ನು ಬರೆದು, ಆ ಕಾಳಿಕಾದೇವಿಯ ಮುಂದೆ ಅಮೋಘವಾಗಿ ಓದಿದನು.....

"ಮಾಂಧತಾ ಚ ಮಹೀಪತಿಃ ಕೃತಯುಗಾಲಂಕಾರ ಭೂತೋಗತಃ |
ಸೇತುರ್ಯೇನ ಮಹೋಧಧೌ ವಿರಚಿತಃ ಕ್ವಾಸೌ ದಶಾಸ್ಯಾಂತಕಃ ||

ಅನ್ಯೇಚಾಪಿ ಯುಧಿಷ್ಟಿರ ಪ್ರಭೃತಯೋ ಯಾತಾ ದಿವಂ ಭೂಪತೇ|
ಕಿಂಚಾಸ್ಮಜ್ಜನಕೇನ ಸಾಕಾಮವನೀ ಯಾತಾ ನ ನಾಕಂಕಿಲ-
ನೈಕೇನಾಪಿ ಸಮಂಗತಾ ವಸುಮತೀ ಮುಂಜ! ತ್ವಯಾ ಯಾಸ್ಯತಿ||''

ಎಂದು ಶ್ಲೋಕ ಹೇಳಿ ನಂತರ ಅದರರ್ಥವನ್ನು ಹೇಳುತ್ತ. "ಕೃತಯುಗಕ್ಕೆ ಅಲಂಕಾರ ಪ್ರಾಯನಾದ ಚಕ್ರವರ್ತಿಯಾದ ಮಾಂಧಾತರಾಜನು ಗತಿಸಿ ಹೋದನು. ಸಾಗರಕ್ಕೆ ಸೇತುವೆ ಕಟ್ಟಿದ ಹಾಗೂ ರಾವಣನನ್ನು ಸಂಹರಿಸಿದ ಶ್ರೀರಾಮಚಂದ್ರನು ಈಗ ಅದೆಲ್ಲಿ ಇರುವನು? ಇನ್ನು ಅನ್ಯರಾದ ಯುಧಿಷ್ಟರ ಮೊದಲಾದ ಅನೇಕ ರಾಜರುಗಳು ಗತಿಸಿಹೋದರು. ಅಷ್ಟೇ ಅಲ್ಲದೆ ಈ ಧಾರಾನಗರವನ್ನು ಆಳಿದ ನನ್ನ ತಂದೆ ಸಿಂಧೂಲರಾಜ, ತಾತ ಶೂರ ಸಿಂಧೂಲರಾಜರುಗಳು ಸಹ ಈ ಲೋಕವನ್ನು ತ್ಯಜಿಸಿ ಹೋದರು.

- ಹಾಗೆ ಹೋಗುವಾಗ ಯಾರೊಬ್ಬರೂ ಸಹ ಈ ಜಗತ್ತನ್ನು ಜೊತೆಯಲ್ಲಿ ಕೊಂಡೊಯ್ಯಲಿಲ್ಲ. ನನ್ನ ಚಿಕ್ಕಪ್ಪನೇ ಆದ ಹೇ ಮುಂಜರಾಜ! ನೀನು ಮರಣವನ್ನಪ್ಪಿದ್ದಾಗ ಮಾತ್ರ ಈ ಜಗತ್ತು ನಿಮ್ಮ ಸಂಗಡ ಕರೆದುಕೊಂಡು ಬರಬಹುದಾದರೆ ನಾನು ಪರಮಧನ್ಯ'' ಎಂದು ಶ್ಲೋಕವನ್ನು, ಶ್ಲೋಕದ ಅರ್ಥ ತಾತ್ಪರ್ಯವನ್ನು ಓದಿ ಹೇಳಿ ಆ ಲಿಖಿತ ಓಲೆಯನ್ನು ಅಚಲಸಿಂಹನಿಗಿತ್ತನು. ನಂತರ "ಎಲೈ ಅಂಚಲಸಿಂಹರೆ, ಇನ್ನು ನೀವು ಕಿಂಚಿತ್ ತಡ ಮಾಡದಿರಿ..... ನಿಮ್ಮ ರಾಜಾಜ್ಞೆಯನ್ನು ನೆರವೇರಿಸಿ'' ಎಂದು ಆ ಕಾಳಿಕಾದೇವಿಯ ಮುಂದೆ ಶಿರಬಾಗಿ ಈರಮುಡಿ ಹಾಕಿಕೊಂಡು ಸಾವಿಗೆ ಸಿದ್ಧನಾದನು ಭೋಜನು.

ಆಗ ಆ ಶ್ಲೋಕವನ್ನು ಕೇಳಿದ ಅಚಲಸಿಂಹನು "ಮಹಾಪ್ರಭು, ನನ್ನನ್ನು ಕ್ಷಮಿಸಿ. ನಾನಿನ್ನು ಆ ಕೆಲಸವನ್ನು ಮಾಡಲಾರೆ. ಬೇಕಾದರೆ ಈ ನನ್ನ ದೇಹವನ್ನ ನಿಮ್ಮ ಖಡ್ಗದಿಂದ ತುಂಡರಿಸಿಬಿಡಿ'' ಎಂದು ಆ ಕಾಳಿಕಾದೇವಿಯ ಮುಂದೆ ಸಾಷ್ಟಾಂಗಿಸಿ ಬಿದ್ದುಬಿಟ್ಟನು ಅಚಲಸಿಂಹ.

# ಮುಂಜರಾಜನ ಹಗಲುಗನಸು

ಇತ್ತ ಮುಂಜರಾಜನು ತನ್ನ ಏಕಾಂತ ಭವನದ ಹಂಸತೂಲಿಕಾತಲ್ಪದಲ್ಲಿ ತನಗೆ ಎದುರಾಗಿಯೇ ವ್ಯವಸ್ಥಿತವಾಗಿದ್ದ ಆಳೆತ್ತರದ ನಿಲುವುಗನ್ನಡಿಯಲ್ಲಿ ತನ್ನ ಸೌಂದರ್ಯ ಪ್ರತಿಬಿಂಬವನ್ನೇ ಎವೆ ಇಕ್ಕದೆ ನೋಡಿಕೊಳ್ಳುತ್ತಾ, ತನ್ನಲ್ಲಿ ಹಾಸುಹೊಕ್ಕಾಗಿ ಮನೆ ಮಾಡಿಕೊಂಡಿದ್ದ ದುರಾಶಾ ಪೀಡಿತ ಭವಿಷ್ಯವನ್ನು ಮನದಲ್ಲೇ ಮೆಲುಕು ಹಾಕುತ್ತ ತನ್ನಷ್ಟಕ್ಕೆ ತಾನೇ ಮಾತನಾಡಿಕೊಳ್ಳುತ್ತಾ,

"ನನ್ನ ನಂಬಿಕೆಯ ಹುರಿಯಾಳು, ಪ್ರಾಮಾಣಿಕ ಸರದಾರನಾದ ಅಚಲಸಿಂಹನು ತನ್ನ ಆಂತರಿಕ ಬಯಕೆ........ ನಾನು ಹೇಳಿದಂತೆ ಭವಿಷ್ಯಕ್ಕೆ ಕಂಟಕ ಪ್ರಾಯನಾದ ಭೋಜನನ್ನು ಯಮಸದನಕ್ಕೆ ಕಳುಹಿಸಿಯೇ ಬರುತ್ತಾನೆ. ಈಗ ತಾತ್ಕಾಲಿಕವಾಗಿ ರಾಜ್ಯಭಾರ ಮಾಡುತ್ತಿರುವ ನಾನು ಮುಂದೆ ಎಂದೆಂದೂ ನಾನೇ ರಾಜ, ಮಹಾರಾಜ ಚಕ್ರವರ್ತಿ ಸಾರ್ವಭೌಮ. ಈ ಅಖಂಡ ಸಾಮ್ರಾಜ್ಯಕ್ಕೆ ನಾನೇ....... ಆಜೀವ ಪರ್ಯಂತರ ಚಕ್ರವರ್ತಿ, ಸಾರ್ವಭೌಮನಾಗಿ ಮೆರೆಯುತ್ತೇನೆ. ಈ ಅಖಂಡ ಭಾರತದ ಚಪ್ಪನ್ನಾರು ದೇಶದ ರಾಜ ಮಹಾರಾಜರುಗಳು ಎಲ್ಲರೂ ನನಗೆ ಅಧೀನರು. ಅವರುಗಳಿಂದ ಇನ್ನೂ ಹೆಚ್ಚು ಹೆಚ್ಚಾಗಿ ಕಪ್ಪ ಕಾಣಿಕೆಗಳನ್ನು ನಿರ್ಧಾಕ್ಷಿಣ್ಯವಾಗಿ ವಸೂಲು ಮಾಡುತ್ತೇನೆ. ನನ್ನಾನಂತರ ನನ್ನ ಮಕ್ಕಳೇ ಈ ಧಾರಾ ನಗರವನ್ನು ಆಳುವವರು. ಈ ಅಖಂಡ ಭಾರತದ ಏಕಮೇವ ರತ್ನ ಸಿಂಹಾಸನಕ್ಕೆ ನಾನು ನನ್ನ ಮಕ್ಕಳೇ ಹಕ್ಕುದಾರರು" ಎಂದು ಮನಬಂದಂತೆ ಆ ನಿಲುವುಗನ್ನಡಿಯನ್ನೇ ನೋಡಿಕೊಳ್ಳುತ್ತ ಮಾತನಾಡಿಕೊಳ್ಳುತ್ತಿದ್ದ. ವಿವೇಕವನ್ನು ಕಳೆದುಕೊಂಡು ಅತಿಯಾದ ದುರ್ಮಾರ್ಗ ದುರ್ನೀತಿಗೆ ಬಲಿಯಾಗಿದ್ದ ಮುಂಜರಾಜ.

ಹಾಗೆ ಭ್ರಮಾ ಪೀಡಿತನಾಗಿ ಕಾಲ ಕಳೆಯುತ್ತಿದ್ದ ಮುಂಜರಾಜನಿಗೆ ಒಂದೊಂದು ಕ್ಷಣವೂ ಒಂದೊಂದು ಯುಗವಾದಂತೆ ಅಸ್ಥಿಮಿತನಾಗಿದ್ದ.

ಅಚಲಸಿಂಹನು ಯಾವಾಗ ಬರುವನೋ - ಭೋಜನನ್ನು ಹೇಳ ಹೆಸರಿಲ್ಲದಂತೆ ಅರಣ್ಯದಲ್ಲಿ ಕೊಂದು ಹಾಕಿದ ಸಿಹಿ ವಾರ್ತೆಯನ್ನು ಯಾವಾಗ ಯಾವ ಘಳಿಗೆಯಲ್ಲಿ ತರುವನೋ ಎಂದು ಜಾತಕ ಪಕ್ಷಿಯಂತೆ ಕ್ಷಣ ಕ್ಷಣಕ್ಕೂ ಚಡಪಡಿಸುತ್ತಿದ್ದ.

ಭೋಜರಾಜನ ಮರಣ ವಾರ್ತೆ ಕೇಳುವ ತನಕ ಯಾವುದೇ ರೀತಿಯ ಸಮಾಧಾನ ಇಲ್ಲವಾಗಿತ್ತು.

ಐಲು ದೊರೆಯಂತೆ ಕ್ಷಣ ಕ್ಷಣಕ್ಕೂ ಮಂಚದ ಮೇಲೆ ಉರುಳಾಡುವುದು ನಿಮಿಷಕೊಮ್ಮೆ ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಳ್ಳುವುದೇ ಅತಿಯಾದ ಆತಂಕದ ಭ್ರಮೆಯಾಗಿತ್ತು.

ಆ ದುರಾಶಾ ಪೀಡಿತನಾದ ಅವನಿಗೆ ಕಾಲಕಾಲಕ್ಕೆ ಅನ್ನಾಹಾರಾದಿ ಪಾನಿಯಗಳು ಒಂದೂ ಬೇಡವಾಗಿತ್ತು. ಜೀವನ ಪರ್ಯಂತದ ನಿರಂತರ ಚಕ್ರವರ್ತಿ ಸಾರ್ವಭೌಮನಾಗಿ ಮೆರೆಯುವ ಆಸೆ ದುರಾಸೆಗಳು ಅತಿಯಾಗಿ ಕಾಡುತ್ತಿತ್ತು ಅವನನ್ನು.

ಮೂರು ದಿನಗಳಿಂದಲೂ ಅರಮನೆಯ ಯಾವುದೇ ದೈನಂದಿನ ಚಟುವಟಿಕೆಯೂ ಇಲ್ಲ. ಆ ಏಕಾಂತ ಭವನದಲ್ಲಿಯೇ ಕಾಲ ಕಳೆಯುತ್ತಿದ್ದ ಮುಂಜರಾಜನನ್ನು ಕಾಣಲು ಬಂದ ಮಹಾಮಂತ್ರಿಗಳು ರಾಜ ಪುರೋಹಿತರು ಏಕಾಂತ ಭವನದ ದ್ವಾರದಲ್ಲಿದ್ದ ರಾಜ ಸೇವಕರನ್ನು ಕುರಿತು "ಮಹಾರಾಜರು ಏಕಾಂತ ಮಂದಿರದಲ್ಲಿರುವರೆ? ಏನು ಮಾಡುತ್ತಿದ್ದಾರೆ? ಅವರಿಗೆ ನಾವು ರಾಜದರ್ಶನ ಮಾಡಲು ಬಂದಿರುವುದಾಗಿ ತಿಳಿಸು" ಎಂದರು.

"ಕ್ಷಮಿಸಬೇಕು, ನನ್ನ ಅಪ್ಪಣೆಯಿಲ್ಲದೆ ಯಾರೊಬ್ಬರನ್ನು ಒಳಗೆ ಬಿಡಬಾರದೆಂದು ಅಪ್ಪಣೆ ಕೊಟ್ಟಿದ್ದಾರೆ" ಎಂದು ನುಡಿದ ರಾಜಸೇವಕ.

ಸೇವಕ ನಾಡಿದ ಮಾತಿಗೆ ಅವರಿಬ್ಬರ ಎದೆ 'ಝುಲ್' ಎಂದಿತು.

ಆ ತನಕ ನಿರ್ಭೀತರಾಗಿ ನಿರಾತಂಕವಾಗಿ ಸ್ವೇಚ್ಛೆಯಿಂದಲೇ ರಾಜರ ಬಳಿ ಹೋಗುತ್ತಿದ್ದ ಮಹಾಮಂತ್ರಿಗಳಿಗೆ, ರಾಜ ಪುರೋಹಿತರಿಗೆ ಈ ಅವಸ್ಥೆಯೇ? ಎಂದು ದಿಗ್ಮೂಢರಾಗಿ ತಮ್ಮನ್ನು ತಾವೇ ಪ್ರಶ್ನಿಸಿಕೊಂಡರು. ಪುನಹ ರಾಜ ಸೇವಕರೊಂದಿಗೆ ಸಂಭಾಷಿಸುತ್ತಾ

"ಎಲೈ ಶತಸಾರನೆ..... ಮಹಾರಾಜರು ನಿಮಗೆ ಈ ಆಜ್ಞೆಯನ್ನು ಯಾವಾಗ? ಎಂದು ಹೇಳಿದರು" ಎನ್ನುತ್ತಿರುವಷ್ಟರಲ್ಲೇ ಮತ್ತೊಬ್ಬ ರಾಜ ಸೇವಕನಾದ ಶುಕ್ರ ಕೇತುವು ತನ್ನ ಸರದಿಯಂತೆ ಬಂದು ಅಲ್ಲಿಯೇ ಇದ್ದ ಮಹಾ ಮಂತ್ರಿಗಳನ್ನು ರಾಜಪುರೋಹಿತರನ್ನು ಭಕ್ತಿ ಪೂರ್ವಕವಾಗಿ ವಂದಿಸಿದನು. ನಂತರ ವಿಷಯವನ್ನರಿತ ಅವನು ಶತಸಾರನ ಅವಿವೇಕಕ್ಕೆ ಮರುಗಿ "ಅಯ್ಯೋ ಶತಸಾರನೇ..... ಯಾರನ್ನು ಬಿಡಬಾರದು ಎಂದರೆ ಮಹಾಮಂತ್ರಿಗಳನ್ನು ರಾಜ ಪುರೋಹಿತರ ಹೊರತಾಗಿ ಎಂದರ್ಥ" ಎಂದು ಅವನಿಗೆ ವಿವೇಕ ಹೇಳಿ, ಆ ಕ್ಷಣವೇ ತಾನೇ ರಾಜರ ಏಕಾಂತ ಮಂದಿರಕ್ಕೆ ಹೋಗಿ, ಅಲ್ಲಿ ನೇರವಾಗಿ ನಿಲ್ಲದೆ ತುಸು ಮರೆಯಾಗಿ ನಿಂತು.....

"ಮಹಾರಾಜರಿಗೆ ಜಯವಾಗಲಿ.... ಪ್ರಭುಗಳ ದರ್ಶನಕ್ಕಾಗಿ ಮಹಾಮಂತ್ರಿಗಳು, ರಾಜಪುರೋಹಿತರು ಆಗಮಿಸಿದ್ದಾರೆ, ಅಪ್ಪಣೆಯಾಗಬೇಕು" ಎಂದನು.

ಆಗ ಅಸ್ತವ್ಯಸ್ತವಾಗಿ ಭವಿಷ್ಯದ ಹಗಲುಗನಸ್ಸನ್ನು ಕಾಣುತ್ತಿದ್ದ ಮುಂಜರಾಜನು ಧಡಭಡವಾಗಿ ಹಾಸಿಗೆಯಿಂದ ಎದ್ದು, ತನ್ನ ಮುಖದ ಬೆವರನ್ನು ಒರಸಿ ಕೆದರಿದ ತಲೆಯನ್ನು ಸರಿ ಮಾಡಿಕೊಂಡನು.

ಆಗ ಮುಂಜರಾಜನು ಮನಸ್ಸು ಒಂದು ರೀತಿಯಲ್ಲಿ ಡೋಲಾಯಮಾನವಾಗಿತ್ತು.

"ಹೌದು..... ಈಗ ನಾನು ಅರಮನೆಯ ರಾಜಪುರೋಹಿತರನ್ನು, ಮಹಾಮಂತ್ರಿಗಳನ್ನು ಒಳಗೆ ಬರಲು ನಿರಾಕರಿಸಿದರೆ ಅವರು ನನ್ನ ಮೇಲೆ ಇಲ್ಲಸಲ್ಲದ ತಪ್ಪು ಅಭಿಪ್ರಾಯವನ್ನು ಕಲ್ಪಿಸಿಕೊಳ್ಳಲೂಬಹುದು. ಅಷ್ಟೇ ಅಲ್ಲದೆ, ಈಗ ನಾವು ಅಚಲಸಿಂಹನೊಬ್ಬನ ಹೊರತಾಗಿ ಯಾರೊಬ್ಬರಿಗೂ ಸಹ ತಿಳಿಯದ ಹಾಗೆ ಅತ್ಯಂತ ಸಘೂಢವಾಗಿ ಭೋಜನನ್ನು ಮುಗಿಸಿ ಬಿಡುವ ಕಾರ್ಯವನ್ನು ಮಾಡಿ ಬಿಟ್ಟಿದ್ದೇನೆ.

ಅಚಲಸಿಂಹನು ಆ ಕಾರ್ಯವನ್ನು ಮಾಡಿಯೇ ತೀರುತ್ತೇನೆ ಎಂದು ಹೇಳಿರುವನು. ಆದ್ದರಿಂದ ಈ ಅರಮನೆಗೆ ನನ್ನ ಅಣ್ಣ ಸಿಂಧೂಲರಾಜನ ಕಾಲದಿಂದಲೂ ಅಜಾತಶತ್ರುವಾಗಿ ಕೀರ್ತಿಗಳಿಸಿಕೊಂಡೇ ಬಂದಿರುವ ಇವರಿಬ್ಬರಲ್ಲಿ ಮಾತ್ರ ಶತೃತ್ವವನ್ನು ಬಯಸಬಾರದು. ಈಗ ಯಾವುದೊಂದು ಪ್ರಮಾದವೂ ಆಗದಂತೆ ಅವರನ್ನು ಸೂಕ್ತ ರೀತಿಯಲ್ಲಿ ಬರಮಾಡಿಕೊಳ್ಳುವುದೇ ಸಮಯ ರಾಜಕೀಯ ಚಾಣಾಕ್ಷತನ" ಎಂದುಕೊಂಡ ಮುಂಜರಾಜನು ಅಲ್ಲಿಯೇ ಮಹಾರಾಜರ ಅಪ್ಪಣೆಗಾಗಿ ಕಾಯುತ್ತಿದ್ದ ಶತಕೇತುವಿಗೆ ಆಜ್ಞಾಪಿಸುತ್ತಾ "ಅವರಿಬ್ಬರನ್ನು ಈ ಕೂಡಲೇ ಬರಹೇಳು" ಎಂದನು.

ಮುಂಜರಾಜನ ಅಪ್ಪಣೆಯಂತೆ ರಾಜ ಪುರೋಹಿತರು, ಮಹಾಮಂತ್ರಿಗಳು ಏಕಾಂತ ಕೋಣೆ ಪ್ರವೇಶಿಸಿದರು.

ಅವರಿಬ್ಬರನ್ನು ಕಂಡ ಮುಂಜರಾಜನು ಕೃತಕ ನಗೆಯನ್ನು ತಂದು ಕೊಂಡು ಮಾತನಾಡುತ್ತ "ಛೆ ಛೆ! ಎಂತಹ ಅಭಾಸ? ಎಂತಹ ಅವಿವೇಕ? ನಾನು ಆ ಅವಿವೇಕ ರಾಜ ಸೇವಕರಿಗೆ ಹೇಳಿದ್ದು ತಮ್ಮಿಬ್ಬರ ಹೊರತಾಗಿ ಯಾರೊಬ್ಬರನ್ನು ಒಳಗೆ ಬಿಡಬಾರದೆಂದು ಅಜ್ಞೆ ಮಾಡಿದ್ದೆ. ಆದರೆ ಆ ಮೂರ್ಖ ರಾಜ ಸೇವಕರು ನಿಮ್ಮನ್ನು ತಡೆ ಹಾಕಿದ್ದಾರೆ. ತಾವು ದಯವಿಟ್ಟು ಈಗ ನಡೆದು ಹೋದ ಅಚಾತುರ್ಯ ಕಾರ್ಯಕ್ಕೆ ಏನು ಬೇಜಾರು ಮಾಡಿಕೊಳ್ಳಬೇಡಿ" ಎಂದು ಕೃತಕ ನಟನೆಯಿಂದಲೇ ಕೈ ಮುಗಿದು ನುಡಿದ ಮುಂಜರಾಜ.

"ಅದೇನು ಅಂತಹ ಪ್ರಮಾದವೇನಿಲ್ಲ, ಪರಂತು ತಾವು ಮೂರು ದಿನಗಳಿಂದ ಅರಮನೆಯ ಯಾವುದೇ ಕಾರ್ಯಕ್ರಮಕ್ಕಾಗಲಿ ರಾಜಸಭೆಗೆ ಆಗಲಿ ಬರದಿರುವುದು ನಮಗೆ ಮಾತ್ರವಲ್ಲದೆ, ರಾಜ ಸಭೆಯಲ್ಲಿ ಪ್ರತಿನಿತ್ಯ ಭಾಗವಹಿಸುವ ವಿದ್ವನ್ಮಣಿಗಳಿಗೆ, ಪಂಡಿತೋತ್ತಮರಿಗೆ, ವಿಪ್ರೋತ್ತಮರಿಗೆ ಮಿಗಿಲಾಗಿ ಪ್ರಮುಖ ಪ್ರಜೆಗಳಿಗೆ ಇಲ್ಲಸಲ್ಲದ ಕಳವಳ ಉಂಟಾಗಿದೆ. ಈಗಂತೂ ಪ್ರಜೆಗಳು ಸಹ ಮನೆಮನೆಯಲ್ಲೂ, ರಾಜರೇಕೋ ಯಾವ ಕಾರ್ಯದಲ್ಲೂ ಭಾಗವಹಿಸುತ್ತಿಲ್ಲ ಎಂದು ಮಾತನಾಡಿಕೊಳ್ಳುತ್ತಿದ್ದಾರೆ, ರಾಜೇಂದ್ರ" ಎಂದು ಆ ಮೂರು ದಿನಗಳಲ್ಲಿ ಅರಮನೆಯಲ್ಲಿ ರಾಜನಿಲ್ಲದ ವಾರ್ತೆಯನ್ನು ಕುರಿತು ವಿಷಯ ತಿಳಿಸಿದ್ದರು ಮಹಾಮಂತ್ರಿಗಳು.

ಹೆದರುವವನ ಮೇಲೆ ಕಪ್ಪೆ ಎಸೆದಂತೆ ಮಹಾ ಮಂತ್ರಿಗಳು ಆಡಿದ ಮಾತು ಹೃದಯಕ್ಕೆ ಚೇಳು ಕುಟುಕಿದಂತಾಗಿತ್ತು.

"ಅಬ್ಬ! ಕೇವಲ ಮೂರು ದಿನಗಳಲ್ಲಿಯೇ ಇಷ್ಟೊಂದು ಅಭಾಸ! ಇನ್ನು ದೀರ್ಘವಾಗಿ ಭೋಜನು ಕಣ್ಮರೆಯಾದ ಸುದ್ದಿ ಪ್ರಜೆಗಳಿಗೆ ತಿಳಿದರೆ ನಗರ ನಾಗರೀಕರನ್ನು ಸಮಾಧಾನಪಡಿಸುವುದಾದರೂ ಹೇಗೆ" ಎಂದು ದೀರ್ಘವಾಗಿ ನಿಟ್ಟುಸಿರು ಬಿಡುತ್ತಾ, ಆ ವಿಷಯವನ್ನು ಹೃದಯದಲ್ಲೆ ಬಚ್ಚಿಟ್ಟು ಮೆದು ನುಡಿಗಳಿಂದ ಮಾತನಾಡುತ್ತಾ, "ಮಹಾ ಮಂತ್ರಿಗಳೆ........ ರಾಜ ಪುರೋಹಿತರೆ...... ಮೂರು

ದಿನಗಳಿಂದಲೂ ನನಗೆ ಆರೋಗ್ಯ ಸರಿಯಿಲ್ಲ. ರಾಜ ವೈದ್ಯರಿಂದ ಔಷಧಿ ಪಡೆಯುತ್ತಿದ್ದೇನೆ. ಈ ದಿನ ಸುಧಾರಿಸಿಕೊಂಡು ನಾಳೆ ಬೆಳಿಗ್ಗೆ ಎಂದಿನಂತೆ ಅರಮನೆಯ ಎಲ್ಲಾ ವಹಿವಾಟಿನಲ್ಲೂ ಭಾಗವಹಿಸುತ್ತೇನೆ" ಎಂದು ನುಡಿದ.

"ಬಹಳ ಸಂತೋಷ...... ಮಹಾ ಪ್ರಭುಗಳು ಯಾವುದನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಬೇಗ ಗುಣಮುಖರಾಗಿ ಬನ್ನಿ" ಎಂದು ನುಡಿದು ಆ ಏಕಾಂತ ಭವನದಿಂದ ನಿರ್ಗಮಿಸಿದರು.

ರಾಜಪುರೋಹಿತರಾಡಿದ ಮಾತು ಕಿವಿಗೆ ಕಾದ ಕಬ್ಬಿಣವಿಟ್ಟಂತಾಗಿತ್ತು ಮುಂಜರಾಜನಿಗೆ.

ಕಾರಣ ತಾನು ಕೈಗೊಂಡಿದ್ದ - ಯಾರೊಬ್ಬರೂ ಕಟುಕರೂ ಮಾಡದ ದುಷ್ಟಕೃತ್ಯವನ್ನು ತಾನು ಮಾಡಿದ್ದೇನು - ಎಂದು ಕೊಂಡಿದ್ದ.

# ಭೋಜರಾಜನ ಅಜ್ಞಾತವಾಸ

ಘೋರ ಸರ್ಪದ ಹಿಡಿತದಿಂದ ರಕ್ಷಿಸಿದ್ದಲ್ಲದೆ ಪ್ರಾಣಾಪಾಯದಿಂದ ಪಾರುಮಾಡಿದ ಭೋಜರಾಜನಿಗೆ ಅಚಲಸಿಂಹನು ಶರಣಾಗಿ ಬಿಟ್ಟನು.

ಆಗ ಅವನು ತನ್ನನ್ನು ತಾನೇ ನಿಂದಿಸಿಕೊಂಡು ಅಂತರ್ಯದಲ್ಲೆ ಬಹುವಾಗಿ ಕೊರಗಿದ. ತನ್ನ ತಪ್ಪನ್ನು ಒಪ್ಪಿಕೊಂಡದ್ದಲ್ಲದೆ ಎರಡೂ ಕೈ ಜೋಡಿಸಿ, "ಹೇ ಮಹಾಪ್ರಭು, ನಿಮ್ಮನ್ನು ಕೊಲ್ಲಲುಬಂದ ನಾನು ಪರಮನೀಚ.... ವಿಶ್ವಾಸ ಘಾತಕ, ಪರಮಪಾಪಿ. ನನ್ನಂತಹ ಕೆಟ್ಟ ಹುಳು ಈ ಜಗತ್ತಿನಲ್ಲಿ ಇರಬಾರದು. ಇದೋ - ನಾನು ತಮಗೆ ಸಂಪೂರ್ಣವಾಗಿ ಶರಣಾಗಿ ಬಿಟ್ಟಿದ್ದೇನೆ. ನನ್ನನ್ನು ನಿಮ್ಮ ಖಡ್ಗಾಯುಧದಿಂದ ಒಂದೇ ಬಾರಿಗೆ ಶಿರಶ್ಚೇದನ ಮಾಡಿ ಬಿಡಿ" ಎಂದು ನಾನಾ ರೀತಿಯಲ್ಲಿ ಗೋಳಿಟ್ಟ.

ಆಗ ದಯಾಗುಣ ಉಳ್ಳವನೇ ಆದ ಭೋಜನು "ಏಳು ಅಚಲಸಿಂಹರೆ. ಶರಣಾದವರನ್ನು ಕೊಲ್ಲುವುದು ಹೇಡಿತನ. ಪಶ್ಚಾತ್ತಾಪ ಪಟ್ಟ ತರುವಾಯ ಪಾಪ ಪರಿಹಾರವಾದಂತೆ. ಅದರಲ್ಲೂ ನೀವು ನನಗೆ ಹಿರಿಯರು. ನನಗೆ ಅಸ್ತ್ರಶಸ್ತ್ರ ವಿದ್ಯೆ ಕಲಿಸಿಕೊಟ್ಟ ಗುರು ಸಮಾನರು. ಏಳಿ ಅಚಲಸಿಂಹ" ಎಂದು ಕರುಣೆ ತುಂಬಿದ ದನಿಯಿಂದ ನುಡಿದ ಭೋಜ.

"ಇಲ್ಲ ಮಹಾಪ್ರಭು..... ಖಂಡಿತ ಇಲ್ಲ, ಮುಂದೆ ಈ ಧಾರಾನಗರವನ್ನಾಳಬೇಕಾದ........ ರತ್ನಖಚಿತ ಸಿಂಹಾಸನಧೀಶ್ವರರಾಗಬೇಕಾದ ತಮ್ಮನ್ನು ಹತ್ಯೆ ಮಾಡಲು ಬಂದ ನರಹಂತಕ ನಾನು. ಅಷ್ಟೇ ಅಲ್ಲ, ದೇಶದ ರಾಜನನ್ನೇ ಕೊಲ್ಲಲು ಹೇಸದ ನಾನೊಬ್ಬ ರಾಜದ್ರೋಹಿ. ಪ್ರಜೆಗಳನ್ನು ವಂಚಿಸಿದ ಪ್ರಜಾದ್ರೋಹಿ. ದೇಶವನ್ನು ವಂಚಿಸಿದ ದೇಶದ್ರೋಹಿ. ನಂಬಿದವರನ್ನು ವಂಚಿಸಿದ ನಯವಂಚಕ ನಾನು. ನಾನಿನ್ನು ಬದುಕಿರಬಾರದು. ಇದರಿಂದ ಬ್ರಹ್ಮಸ್ವರೂಪರಾದ ತಮ್ಮಿಂದಲೇ ನನಗೆ ಮರಣ ಪ್ರಾಪ್ತಿಯಾದರೆ ನಾನೇ ಪುನೀತ; ನಾನು ಮಾಡಿದ ಮಹಾಪಾಪಕ್ಕೆ ಕಿಂಚಿತ್ತಾದರು ಪ್ರಾಯಶ್ಚಿತ್ತ ದೊರಕಿದರೂ ದೊರಕಬಹುದು. ನಿಮ್ಮ ಕೈಯ್ಯಾರೆ ನನ್ನನ್ನು ಶಿರಶ್ಚೇದನ ಮಾಡಿಬಿಡಿ. ನಾನು ಸಂತೋಷದಿಂದ ಸಾಯುತ್ತೇನೆ. ಬಹುಶಹ ನನಗೆ ನಿಮ್ಮ ಕೈಯಿಂದಲೆ ಮರಣ ಪ್ರಾಪ್ತಿ ಇದ್ದರೂ ಇರಬಹುದು. ಅದಕ್ಕಾಗಿ ನನ್ನನ್ನು ಸುತ್ತುವರಿದ ಆ ಸರ್ಪವು ಸಹ ನನ್ನನ್ನು ಕೊಲ್ಲಲಿಲ್ಲ........ ರಾಮಾಯಣದಲ್ಲಿ ವಾಯುಪುತ್ರನಾದ ಹನುಮಂತನು ಲೋಕಕಂಟಕನಾದ ರಾವಣನನ್ನು ಕ್ಷಣ ಮಾತ್ರದಲ್ಲಿ ಸಂಹರಿಸಬಲ್ಲ ಮಹಾಬಲಶಾಲಿಯಾಗಿದ್ದಾಗ್ಯೂ ಸಹ......... ಶ್ರೀ ರಾಮಚಂದ್ರನೇ ಇವನನ್ನು ಸಂಹರಿಸಿ ಆವನಿಂದಲೇ ಇವನಿಗೆ ಮರಣ ಪ್ರಾಪ್ತಿಯಾಗಲಿ ಎಂದು ಅಂತಹ ಅವಕಾಶವನ್ನು ಶ್ರೀ ರಾಮನಿಗೆ ಕೊಟ್ಟಿಲ್ಲವೆ? ಅದರಂತೆ ಆ ಸರ್ಪವೂ ಸಹ ಪರಮ ಪಾಪಿಯಾದ ನನ್ನನ್ನು ನಿಮ್ಮಿಂದಲೆ ಮರಣ ಪ್ರಾಪ್ತಿಯಾಗಲಿ ಎಂದು ಈ ನನ್ನ ದೇಹವನ್ನು ಹಾಗೆಯೇ

ಉಳಿಸಿದೆ. ತಡಮಾಡಬೇಡಿ. ನಿಮ್ಮ ತಲೆಯನ್ನು ಶಿರಶ್ಚೇಧನ ಮಾಡಲು ಬಂದ ಈ ದುರುಳನನ್ನು ನೀವೆ ಶಿರಶ್ಚೇಧಿಸಿ" ಎಂದು ಪ್ರಲಾಪಿಸುತ್ತಾ ನುಡಿದನು.

ಆಗ ಭೋಜನು ಸಮಾಧಾನದಿಂದಲೇ ಹೇಳಿದ,

"ಇಲ್ಲ..... ನಾನು ನಿಮ್ಮನ್ನು ಖಂಡಿತ ಕೊಲ್ಲುವುದಿಲ್ಲ. ನನ್ನಿಂದಲೆ ನಿಮಗೆ ಜೀವದಾನವಾಗಿದೆ ಎಂದ ಮೇಲೆ ದಾನ ಕೊಟ್ಟು ಮತ್ತೆ ಅದನ್ನು ಪಡೆದಂತಾಗುತ್ತದೆ. ಆ ದೇವರೆ ನಿಮ್ಮನ್ನು ಎಲ್ಲರೀತಿಯಲ್ಲೂ ರಕ್ಷಿಸಿದ್ದಾನೆ. ನನ್ನನ್ನು ಕೊಲ್ಲಲು ನೀವು ಯಾರು? ನಿಮ್ಮನ್ನು ಕೊಲ್ಲಲು ನಾನು ಯಾರು? ಎಲ್ಲ ಆ ವಿಧಿ ಲೀಲೆ. ಈಗ ನಾವು ಮುಂದ ಮಾಡಬೇಕಾದ ಕೆಲಸಗಳು ಬಹಳವಾಗಿದೆ. ಸುಮ್ಮನೆ ಕಾಲಹರಣ ಮಾಡಬೇಡಿ. ಆದದ್ದನ್ನು ಮರೆತು ಬಿಡಿ" ಎಂದನು.

ಆಗ ಅಚಲಸಿಂಹನು ಸಮಾಧಾನ ಚಿತ್ತನಾದನು.

ಭೋಜರಾಜನೆ ಮಾತನ್ನು ಮುಂದುವರಿಸುತ್ತ "ಈಗ ನನ್ನದೊಂದು ಸಲಹೆ"

"ಸಲಹೆ ಅನ್ನಬೇಡಿ ಪ್ರಭು, ಆಜ್ಞೆ ಎಂದು ಹೇಳಿ...... ಶಿರಸಾವಹಿಸುತ್ತೇವೆ"

"ಸರಿ ಒಳ್ಳೇದು......, ಈಗ ನನಗೆ ಮತ್ತೊಂದು ರೀತಿಯ ಆಲೋಚನೆ ಹೊಳೆಯುತ್ತಿದೆ"

"ಹೇಳಿ ಮಹಾಪ್ರಭು" ಎಂದನು ವಿನಯಸೂಸುತ್ತ

ಕ್ಷಣಕಾಲ ಯೋಚಿಸಿ ತನ್ನ ನಿಲುವನ್ನು ಬದಲಾಯಿಸಿ ನುಡಿಯುತ್ತ "ನಾನು ನಿಮಗೆ ಸಲಹೆ ಕೊಡುವುದಕ್ಕೆ ಬದಲಾಗಿ ರಾಜತಂತ್ರ ನಿಪುಣರಾದ ನೀವೇ ಒಂದು ಮಾರ್ಗ ಸೂಚಿಸಿ ಹೇಳಿ" ಎಂದನು ಭೋಜರಾಜ.

ಆಗ ಅಚಲಸಿಂಹನು ಭೋಜರೊಡನೆ ಸಂಭಾಷಿಸುತ್ತಾ, "ತಾವು ನನ್ನ ಸಲಹೆಯನ್ನು ಚಿತ್ತೈಸುವುದಾದರೆ.........."

"ಹೇಳಿ ಸಂಕೋಚ ಪಡಬೇಡಿ ಹೇಳಿ"

"ಸುಮಾರು ಮೂರು ದಶಕಗಳಿಂದಲೂ ನನಗೆ ಆಶ್ರಯ ನೀಡಿದ ನಿಮ್ಮ ತಂದೆಯವರಾದ ಸಿಂಧೂಲ ಮಹಾರಾಜರ ಕರುಣೆಯ ಕಣದಲ್ಲಿ ನಂಬಿಕೆಯಿಂದಲೇ ಸೇವೆ ಮಾಡಿಕೊಂಡು ಬಂದವನು ನಾನು"

"ಆ ವಿಷಯ ನನಗೂ ತಿಳಿದಿದೆ"

"ಆದರೆ ಅದೇ ನಂಬಿಕೆಧೂತನಾದ ನನ್ನನ್ನು ತಮ್ಮ ಚಿಕ್ಕಪ್ಪನವರು ಅಧಿಕಾರ ದಾಹದಿಂದ, ನನ್ನನ್ನು ಅವರ ಸ್ವಾರ್ಥಕ್ಕಾಗಿ ಬಳಸಿಕೊಂಡರು. ನಾನೂ ಸಹ ಅವರ ಆಮಿಷಕ್ಕೆ ಒಳಗಾಗಿ ಮಾಡಬಾರದ ಈ ಹೇಯ ಕೃತ್ಯಕ್ಕೆ ಮಣಿಯಬೇಕಾಯಿತು. ಅರ್ಥಾತ್ ರಾಜಾಜ್ಞೆಯನ್ನು ಪಾಲಿಸಬೇಕಾಯಿತು. ಆ ರೀತಿ ಆದದ್ದು ನಮ್ಮಿಬ್ಬರ ಬಾಳಿನ ಒಂದು ರೀತಿಯ'ವಿಧಿ ಪರೀಕ್ಷೆ'ಯೂ ಹೌದು..... ಕಾಣದ ಕೈಯ್ಯೊಂದು ಕ್ರೂರ ಆಟವಾಡಿಯು

ರೂಪದಲ್ಲಿ ನಮ್ಮಿಬ್ಬರನ್ನು ಪರೀಕ್ಷೆಯ ಕಣದಲ್ಲಿ ನೂಕಿತ್ತು. ಅದರಲ್ಲಿ ನಾವಿಬ್ಬರೂ ಗೆದ್ದಿದ್ದೇವೆ.... ವಿಧಿ ನಮ್ಮನ್ನು ಪರೀಕ್ಷಿಸಿದಂತೆ ಈಗ ನಾವಿಬ್ಬರೂ ಕೂಡಿ ತಮ್ಮ ಚಿಕ್ಕಪ್ಪನವರನ್ನು ಪರೀಕ್ಷಿಸಬೇಕು ಮಹಾಪ್ರಭು" - ಎಂದು ತನ್ನ ಮನಸ್ಸಿನಲ್ಲಿ ಹೊಸದಾದ ಯೋಜನೆಯನ್ನು ಹಾಕಿಕೊಂಡು ನುಡಿದನು.

"ಯಾವರೀತಿ ಪರೀಕ್ಷಿಸಬೇಕು? - ಕುತೂಹಲದಿಂದಲೇ ಕೇಳಿದ ಭೋಜರಾಜ.

"ಈಗ ತಾವು ಒಂದಷ್ಟು ಕಾಲ ಯಾರೊಬ್ಬರೂ ಅರಿಯದ ಹಾಗೆ ಅಜ್ಞಾತರಾಗಿರಬೇಕು. ಅಧಿಕಾರದ ಅಹಂನಿಂದ ರಾಜ್ಯಭಾರ ಮಾಡುತ್ತಿರುವ ತಮ್ಮ ಚಿಕ್ಕಪ್ಪನವರು ಹೇಗೆ? ಯಾವ ರೀತಿ? ರಾಜ್ಯಭಾರ ಮಾಡುತ್ತಾರೆ ಎಂಬುದನ್ನು ಕಾದು ನೋಡೋಣ. ಈಗ ನಾನು ನೇರವಾಗಿ ಧಾರಾನಗರಕ್ಕೆ ಹೋಗಿ "ಭೋಜರಾಜರನ್ನು ಯಮಸದನಕ್ಕೆ ಕಳುಹಿಸಿ ಬಂದಿದ್ದೇನೆ" ಎಂದೇ ತಿಳಿಸುತ್ತೇನೆ. ಅದಕ್ಕವರು ಹೇಗೆ ಪ್ರತಿಕ್ರಿಯೆಯನ್ನು ತೋರಿಸುತ್ತಾರೆ ಎಂಬುದನ್ನೂ ಸಹ ಪರೀಕ್ಷಿಸಿದಂತಾಗುತ್ತದೆ. ಅಧಿಕಾರ ದಾಹಪೀಡಿತರಾದ ಅವರು ಮುಂದೆ ಒಂದಲ್ಲ ಒಂದು ದಿನ ಕಾಲಕ್ಕನುಗುಣವಾಗಿ ಪರಿವರ್ತನೆಯಾಗಲೇಬೇಕು. ಅಜ್ಞಾನದ ಅಂಧಕಾರದಲ್ಲಿ ಮುಳುಗಿರುವ ನಿಮ್ಮ ಚಿಕ್ಕಪ್ಪನವರು ಪಶ್ಚಾತ್ತಾಪಿಸಿಯೇ ತೀರುತ್ತಾರೆ ಎಂಬ ಭರವಸೆ ನನಗಿದೆ" ಎಂದು ನುಡಿದನು.

"ನಿಮ್ಮ ಸಲಹೆಯೇನೋ ಸೂಕ್ತವಾಗಿಯೇ ಇದೆ. ಆದರೆ....." - ಅನುಮಾನಿಸಿದ ಭೋಜ.

"ಆದರೇನು ಮಹಾಪ್ರಭು?"

"ಈ ಸಂದರ್ಭದಲ್ಲಿ ನನ್ನದೊಂದು ವಿಚಾರ.... ಪಾಂಡವರು ಮಾರು ವೇಷಧಾರಿಗಳಾಗಿ ತಮ್ಮ ಅಜ್ಞಾತವಾಸವನ್ನು ವಿರಾಟರಾಜನಲ್ಲಿ ಕಳೆದರು...... ಆದರೆ ನಾನು ಈಗ ಯಾವ ರಾಜನನ್ನು ಆಶ್ರಯಿಸಲಿ..... ಎಂಬುದೇ ಗಂಭೀರ ಸಮಸ್ಯೆಯಾಗಿದೆ ಅಚಲಸಿಂಹ" - ಸಹಜವಾಗಿಯೇ ಕೇಳಿದ ಭೋಜ.

"ಅದಕ್ಕಾಗಿ ಚಿಂತಿಸಬೇಡಿ ಮಹಾಪ್ರಭು...... ತಮ್ಮ ಅರಮನೆಯ ಈಶಾನ್ಯ ದಿಕ್ಕಿನಲ್ಲಿ ಒಂದು ನೆಲಮಾಳಿಗೆ ಇದೆ. ಅಲ್ಲಿಯೇ ಗುಪ್ತಮಂದರಿವಿದೆ. ಆ ಸುಂದರಮಂದಿರವು ಎಲ್ಲ ರೀತಿಯಲ್ಲೂ ಅನುಕೂಲವಾಗಿದೆ. ಆ ಗುಪ್ತ ಮಂದಿರ ನಿಮ್ಮ ತಂದೆಯವರಿಗೆ ಮತ್ತು ನನಗಲ್ಲದೆ ಬೇರೆ ಯಾರಿಗೂ ತಿಳಿಯದು... ಆ ಗುಪ್ತ ಮಂದಿರದಿಂದ ಧಾರಾನಗರದ ಮಹಾದ್ವಾರ (ಊರಾಚೆ) ದವರೆವಿಗೂ, ಯಾರೊಬ್ಬರೂ ತಿಳಿಯದ ಹಾಗೆ ಒಂದು ಗುಪ್ತ ಸುರಂಗ ಮಾರ್ಗವೂ ಸಹ ವ್ಯವಸ್ಥಿತವಾಗಿದೆ. ತಮ್ಮ ತಂದೆಯವರು ಕೇವಲ ರಾಜಭಟರಂತೆ ಮಾರುವೇಷ ಧರಿಸಿ ಆಗಾಗ ನಗರವನ್ನು ಕಾಲು ನಡಿಗೆಯಲ್ಲಿ ಸುತ್ತು ಹಾಕುತ್ತಿದ್ದರು. ನನ್ನಲ್ಲಿ ಸಂಪೂರ್ಣ ನಂಬಿಕೆ ಇಟ್ಟಿದ್ದ ಅವರು.... ಜೊತೆಯಲ್ಲಿ ನನ್ನನ್ನು ಸಹ ಕರೆದುಕೊಂಡು ನಗರ ಪ್ರದಕ್ಷಿಣೆ ಹಾಕುತ್ತಿದ್ದರು. ಧಾರಾನಗರದ ಪ್ರಜೆಗಳು ಯಾವ ರೀತಿ ಹೇಗೆ ತಮ್ಮ ದೈನಂದಿನ ಬದುಕನ್ನು ಸಾಗಿಸುತ್ತಿದ್ದಾರೆ? ಪ್ರಜೆಗಳಿಗೆ ಏನಾದರೂ ಕೊರತೆಯಾಗಲಿ ತೊಂದರೆಯಾಗಲಿ.

ಕಷ್ಟನಷ್ಟಗಳಾಗಲಿ ಉಂಟಾಗಿದೆಯೇ?, ಜನರು ಸತ್ಯಸಂಧರಾಗಿ ನೀತಿರೀತಿಗಳನ್ನು ಪಾಲಿಸುತ್ತಿದ್ದಾರೆಯೆ? ಅಥವಾ ತಮ್ಮ ರಾಜ್ಯದಲ್ಲಿ ಎಲ್ಲಿಯಾದರೂ ಕಳ್ಳಕಾಕರ, ದರೋಡೆಕೋರರ ಹಾವಳಿ ಅಂಥ ಪ್ರಸಂಗಗಳು ಏನಾದರು ಉಂಟಾಗಿದೆಯೇ? ಎಂಬುದನ್ನು ಪ್ರತ್ಯಕ್ಷವಾಗಿ ಕಂಡು ತಿಳಿದುಕೊಳ್ಳಲು ಆ ಮಾರ್ಗವನ್ನು ಉಪಯೋಗಿಸುತ್ತಿದ್ದರು..... ಆ ಮಾರುವೇಷದಲ್ಲಿ ಪ್ರಜೆಗಳ ಜೊತೆ ನೇರವಾಗಿ ಮಾತನಾಡುತ್ತ ವಿಷಯವನ್ನು ಅರಿಯುತ್ತಿದ್ದರು.... ಇದು ತಮ್ಮ ತಂದೆಯವರಾದ ಸಿಂಧೂಲ ಮಹಾರಾಜರ ಅನುಸರಿಸುತ್ತಿದ್ದ ಅವರ ಆಡಳಿತ ವೈಖರಿಯ...... ಆದರ್ಶ ಪ್ರಜಾಪರಿಪಾಲನೆಯ ಪರಮನೀತಿ. ಆದ್ದರಿಂದ ತಾವು ನೆಲಮನೆಯಲ್ಲಿ ತಮ್ಮ ಅಜ್ಞಾತವನ್ನು ಕಳೆಯಲು ಆ ಜಾಗ ಸೂಕ್ತವಾಗಿದೆ ಮಹಾಪ್ರಭು" ಎಂದು ಒಂದು ನಿಘೂಢ ರಹಸ್ಯವನ್ನು ಭೇಧಿಸಿ ನುಡಿದ ಅಚಲಸಿಂಹ.

ಅಚಲಸಿಂಹನ ಆ ಸಲಹೆಗೆ ಪರಮ ಸಂತೋಷಚಿತ್ತನಾದ ಭೋಜರಾಜನು, ಅವರೊಡನೆ ತಮ್ಮ ಸಂತೋಷವನ್ನು ವ್ಯಕ್ತ ಪಡಿಸುತ್ತಾ "ಶಹಭಾಶ್ ಅಚಲಸಿಂಹ.... ನಿಮ್ಮ ಈ ರೀತಿಯ ಸಲಹೆಯನ್ನು ನಾನು ಮೆಚ್ಚಿದ್ದೇನೆ..... ಅದರಂತೆ ಮಾಡುತ್ತೇನೆ" ಎಂದನು. ಅಷ್ಟು ಹೊತ್ತಿಗಾಗಲೇ ರಾತ್ರಿಯಾಗಿ ಬಿಟ್ಟಿತು. ಆದರೆ ಪುಣ್ಯವಶಾತ್ ಬೆಳದಿಂಗಳ ರಾತ್ರಿಯಾಗಿತ್ತು. ಇಬ್ಬರೂ ಏಕಚಿತ್ತರಾಗಿ ಮಹಾಕಾಳಿ ದೇವಾಲಯಕ್ಕೆ ಹೋಗಿ, ಕಾಳಿಕಾದೇವಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಆಗ ಅಚಲಸಿಂಹನು ಕಾಳಿಕಾದೇವಿಯನ್ನು ಪ್ರಾರ್ಥಿಸುತ್ತ "ಹೇ ಮಹಾತಾಯಿ ಜಗದಂಬ.... ನನ್ನ ಅಪರಾಧವನ್ನು ಮನ್ನಿಸು. ಈಗ ನಾವು ಕೈಗೊಂಡಿರುವ ಯೋಜನೆಯು ಸಫಲವಾಗುವಂತೆ ಅನುಗ್ರಹಿಸು ತಾಯಿ" ಎಂದು ಹಲವು ವಿಧದಲ್ಲಿ ಪ್ರಾರ್ಥಿಸಿದ್ದನು. ಇಬ್ಬರೂ ಕುದುರೆಯನ್ನೇರಿ ಧಾರಾನಗರದತ್ತ ಪ್ರಯಾಣ ಬೆಳೆಸಿದರು.

ಅಚಲಸಿಂಹನ ಸಲಹೆ ಸೂಕ್ತವಾಗಿತ್ತು. ಸಮಯ ಸಂದರ್ಭದ ಆ ಉತ್ತಮ ಮಾರ್ಗದರ್ಶನಕ್ಕಾಗಿ ಅಚಲಸಿಂಹನನ್ನು ಅಭಿನಂದಿಸಿದ ಭೋಜ. ಆ ಗುಪ್ತ ನೆಲಮಾಳಿಗೆಯಲ್ಲಿ ಅಜ್ಞಾತವಾಸ ಕಳೆಯಲು ನಿರ್ಧರಿಸಿದ ಯುವರಾಜ.

ಆದರ್ಶ ವ್ಯಕ್ತಿಗಳಿಗೆ ಕೆಲವು ಸನ್ನಿವೇಶಗಳಲ್ಲಿ ಶಾಪವೇ ವರವಾಗಿ ಪರಿಣಮಿಸುತ್ತದೆ. ಅದೇ ಶ್ರೀರಕ್ಷೆಯಾಗಿ, ಆ ಮೂಲಕ ಅಂತಹವರಿಂದ ಅನೇಕ ಅದ್ಭುತ ಕೆಲಸಗಳು ಕಾರ್ಯ ಸಾಧನೆಯಾಗುವಂತಹ ಸುಯೋಗವು ಉಂಟಾಗಬಲ್ಲದು. ಅದಕ್ಕೆ ಪರಮಸಾಕ್ಷಿಯಾಗಿ ರಾಮಾಯಣದಲ್ಲಿ ಬರುವ ಒಂದೇ ಒಂದು ಸನ್ನಿವೇಶ ಸಾಕು......... ಸಿಂಹಾಸನವನ್ನಲಂಕರಿಸಿ ಅಯೋಧ್ಯೆಯನ್ನಾಳಬೇಕಾದ ಶ್ರೀ ರಾಮಚಂದ್ರನನ್ನು ದಶರಥನ ಹೆಂಡತಿ ಕೈಕೇಯಿಯು ತನ್ನ ಹಠಸಾಧನೆಯಿಂದ ಆತನನ್ನು ಹದಿನಾಲ್ಕು ವರ್ಷಗಳ ಕಾಲ ವನವಾಸ ಮಾಡಬೇಕೆಂದು ತನ್ನ ಪತಿಯ ಮೂಲಕ ಆಜ್ಞೆ ಹೊರಡಿಸುತ್ತಾಳೆ. ಅದು ಜಗತ್ತಿನ ದೃಷ್ಟಿಯಲ್ಲಿ ಶಿಕ್ಷೆಯಂತೆ ಕಂಡು ಬಂದರೂ ಶ್ರೀ ರಾಮಚಂದ್ರನ ಪಾಲಿಗೆ ಶ್ರೀ ರಕ್ಷೆಯಾಗಿಯೇ ಅವನ ವ್ಯಕ್ತಿತ್ವವನ್ನು ಆದರ್ಶತೆಯನ್ನು ಪ್ರತಿಬಿಂಬಿಸುತ್ತದೆ. ಶ್ರೀ ರಾಮ ಹದಿನಾಲ್ಕು ವರ್ಷಗಳ ಕಾಲ ವನವಾಸದಲ್ಲಿಯೇ ಇದ್ದುಕೊಂಡು, ಲೋಕ ಕಲ್ಯಾಣಕ್ಕಾಗಿ

ಅನೇಕ ಅದ್ಭುತ ಸಾಹಸ ಕೆಲಸಗಳನ್ನು ಮಾಡಿ, ವಿಶ್ವ ವಿಖ್ಯಾತನಾಗಿದ್ದಾನೆ. ಅದು ಇಂದಿಗೂ ಅಜರಾಮರ.

ಅದೇ ರೀತಿ ಪಾಂಡವರು ಸಹ ಅವರ ಪಾಲಿಗೆ ಒದಗಿ ಬಂದಿದ್ದ ಅಜ್ಞಾತವಾಸದಲ್ಲಿ ಲೋಕ ಕಲ್ಯಾಣದ ದೃಷ್ಟಿಯಿಂದ ಅನೇಕ ಅದ್ಭುತವಾದ ಕಾರ್ಯಸಾಧನೆಗಳನ್ನು, ಪವಾಡಗಳನ್ನು ಮಾಡಿ - ಆ ಮೂಲಕ ತಮ್ಮ ಆದರ್ಶತೆಯನ್ನು ಜಗತ್ತಿನ ಮುಂದೆ ಇಟ್ಟಿದ್ದಾರೆ.

"ಈ ಮಾನವ ಸಮಾಜದಲ್ಲಿ ಪ್ರತಿಯೊಬ್ಬ ಮನುಷ್ಯನು ಸಂಸಾರ ಸಾಗರವೆಂಬ ನಿತ್ಯ ಜಂಜಾಟ ಹಾಗೂ, ಒಂದಲ್ಲ ಒಂದು ರೀತಿಯ ಇನ್ನು ಅನೇಕ ಜಂಜಾಟಗಳಲ್ಲಿ ಸಿಕ್ಕಿ ಪರಿತಪಿಸುತ್ತಿರುತ್ತಾನೆ. ಹೀಗಿರುವಾಗ ಯಾರೇ ವ್ಯಕ್ತಿಗೆ ಏಕಾಂತತೆ ನಿಶ್ಚಲತೆ, ನಿರ್ಮಲತೆ ಸಿಗುವುದು ಬಹು ದುರ್ಲಭ. ಈಗ ಅಂತಹ ಸುಯೋಗ ನನಗೆ ಸಿಕ್ಕಿರುವುದು ನನ್ನ ಬಾಳಿನ ಭಾಗ್ಯ" ಎಂದರಿತ ಭೋಜನು ತನ್ನ ಪಾಲಿಗೆ ತಾನೇ ತಾನಾಗಿ ಒದಗಿಬಂದಿದ್ದ ಅಜ್ಞಾತವಾಸವನ್ನು ಶ್ರೀರಕ್ಷೆ ಎಂದೇ ಭಾವಿಸಿದ.

ಆ ಎಳೇ ವಯಸ್ಸಿನಲ್ಲಿಯೇ ಪರಮಜ್ಞಾನಿಯಾದ ಭೋಜರಾಜನು, ತಾನು ಕೈಗೊಂಡ ಅಜ್ಞಾತವಾಸದಲ್ಲಿ ವ್ಯಥಾ ಕಾಲಹರಣ ಮಾಡಲಿಲ್ಲ. ಈ ಜಗತ್ತಿನಲ್ಲಿ ಏನನ್ನು ಬೇಕಾದರು ಮತ್ತೆ ಗಳಿಸಬಹುದು. ಆದರೆ ಕಳೆದು ಹೋದ ಕಾಲ ಮಾತ್ರ ಮತ್ತೆ ಬಾರದು.... ಮತ್ತೆ ಗಳಿಸಲಾಗದು. ಈ ತತ್ವವನ್ನು ಚೆನ್ನಾಗಿಯೇ ಅರಿತಿದ್ದ ಭೋಜರಾಜನಿಗೆ ಆ ಏಕಾಂತ ವಾಸದ ಒಂದೊಂದು ದಿನವೂ ಒಂದೊಂದು ಘಳಿಗೆಯೂ ಸಹ ಅಮೃತಘಳಿಗೆಯಾಗಿ ಪರಿಣಮಿಸುತ್ತಿತ್ತು. ತಾನು ಸಕಲ ವಿದ್ಯಾಪಾರಂಗತನಾಗಿದ್ದಾಗ್ಯೂ ಸಹ ವಿದ್ಯೆಗೆ ಕೊನೆಯುಂಟೆ ಎಂಬಂತೆ ಬಹು ವಿದ್ಯಾಸಕ್ತನಾದ ಭೋಜನು ತನ್ನ ವಿಶಾಲ ದೃಷ್ಟಿಯಿಂದ ವಿದ್ಯೆಯ ಕಡೆಗೆ ಗಮನ ಹರಿಸಿದವನಾಗಿ ಸಂಸ್ಕೃತ ಪಾಂಡಿತ್ಯದಲ್ಲಿ ಮತ್ತಷ್ಟು ಆಳವಾಗಿ ಅಭ್ಯಾಸ ಮಾಡಲು ಸಂಕಲ್ಪಿಸಿದನು. ತತ್ವಜ್ಞಾನಿಯೂ ಆದ ಭೋಜನು ಈ ರೀತಿಯಾಗಿಯೂ ಯೋಚಿಸಿದ್ದನು.

ಒಂದು ದೇಶದ ರಾಜನಾದವನು, ಅಸಂಖ್ಯ ಚತುರಂಗಬಲವುಳ್ಳವನಾಗಿ, ತಾನೂ ಸಾಹಸವಂತನೂ ಪರಾಕ್ರಮಿಯೂ ಅಸಮಾನ ಶೂರನೂ ಆದರೆ ಮಾತ್ರ ಸಾಲದು, ಹಾಗೆಯೇ ಸಕಲ ವಿದ್ಯೆ ಪಾಂಡಿತ್ಯದೊಂದಿಗೆ ವಿಶ್ವದ ಎಲ್ಲ ಪಾಂಡಿತ್ಯವನ್ನು ಜಯಿಸುವ ಸಾಮರ್ಥ್ಯ ಉಳ್ಳವನಾಗಿರಬೇಕು ಆಗ ಮಾತ್ರ ರಾಜಪೀಠಕ್ಕೂ ಮರ್ಯಾದೆ. ದೇಶವನ್ನು ಆಳಲು ಸರ್ವ ಸಮರ್ಥನಾಗುವುದು ಹಾಗೆ ಎಂಬ ತತ್ವವನ್ನು ಮೈಗೂಡಿಸಿ ಕೊಂಡಿದ್ದನು ಭೋಜರಾಜ. ತನ್ನ ಅಜ್ಞಾತವಾಸವನ್ನು ಎಲ್ಲ ರೀತಿಯಲ್ಲೂ ಸದುಪಯೋಗಪಡಿಸಿಕೊಳ್ಳುತ್ತಾ ಆ ಅಜ್ಞಾತ ವೇಳೆಯಲ್ಲಿ ತನ್ನ ಪಾಂಡಿತ್ಯದ ಜೊತೆಗೆ ಅಭಿರುಚಿವುಳ್ಳವನಾಗಿ, ರಾಜಾರ್ಹತೆಗೆ ತಕ್ಕ ಪಾಂಡಿತ್ಯ ವಿದ್ಯೆಗಳಾದ ರಾಜನೀತಿ - ರಾಜಧರ್ಮ, ಪ್ರಜಾಪರಿಪಾಲನೆ..... ಪಂಡಿತರ ವಾಕ್ ಭೂಷಣೆಗೆ ತಕ್ಕದಾದ ವ್ಯಾಕರಣ, ವ್ಯಾಕರಣ ಶುದ್ಧಿ, ವ್ಯಾಕರಣದಲ್ಲಿನ ತಜ್ಞತೆ ಶ್ರೇಷ್ಠತೆ ಜೊತೆಗೆ ಶಬ್ದಾಲಂಕಾರ,

ಅರ್ಥಾಲಂಕಾರ, ಶಾಸ್ತ್ರ ಮನಃ ಶಾಸ್ತ್ರ - ಗಣಿತ ಶಾಸ್ತ್ರ, ಅರ್ಥಶಾಸ್ತ್ರ, ನೀತಿ ಶಾಸ್ತ್ರ ಆತ್ಮಬಲ ಮತ್ತು ಯೋಗಬಲದಿಂದ ರೂಢಿಸಿಕೊಳ್ಳಬಹುದಾದ ಶೃಂಗಾರ ರಸ - ಸರಸ - ವಿರಸ ಮಯವಾದ ರಸಿಕತೆ - ಪರಮ ಸೋಪಾನವಾದ ಕಾಮಶಾಸ್ತ್ರ ಆ ಮೂಲಕ ಶೃಂಗಾರ ಕಾವ್ಯಗಳನ್ನು ರಚಿಸುವ ಅನುಭವ ಇವೆ ಅಲ್ಲದೆ ಯಮಕ, ಗಮಕ ಛಂದಸ್ಸು ಮುಂತಾದ ಎಲ್ಲ ವಿದ್ಯೆಯನ್ನು ಅಭ್ಯಾಸಮಾಡಲು ಬಹು ಆಸಕ್ತಿಉಳ್ಳವನಾಗಿ "ವಿದ್ಯಾತುರಾಣಾಂ ನ ಸುಖಂ ನ ನಿದ್ರ" ಎಂಬಂತೆ ಅಹೋರಾತ್ರಿ ಅಭ್ಯಾಸ ಮಾಡಲು ಅಭಿರುಚಿ ಉಳ್ಳವನಾದನು. ಜೊತೆಗೆ ರಾಮಾಯಣ ಮಹಾಭಾರತವನ್ನು ಬಹು ಆಸಕ್ತಿಯಿಂದ ಓದಿದ. ವಾಲ್ಮೀಕಿ ರಾಮಾಯಣವನ್ನು ಓದುವುದರ ಮೂಲಕ. ಅವರ ಚರಿತ್ರೆಯನ್ನು ಗುಣಗಾನ ಮಾಡುತ್ತಿದ್ದನು. ವ್ಯಾಸರು ಬರೆದ ಮಹಾಭಾರತವನ್ನು ಆಳವಾಗಿ ಅಭ್ಯಾಸ ಮಾಡಿ, ತಾನು ಅದರ ಶ್ಲೋಕಗಳನ್ನು ಇನ್ನೂ ಹೆಚ್ಚಿಸಬೇಕೆಂದು ಅಭಿಪ್ರಾಯವುಳ್ಳವನಾಗಿ ಕಾರ್ಯ ಸಾಧನೆಯಲ್ಲಿ ತೊಡಗಿದ್ದನು. ಅದರ ಜೊತೆಗೆ.... ತಾನು ತನ್ನ ತಂದೆಯಂತೆಯೇ ಮಾರುವೇಷದಲ್ಲಿ ನೆಲಮಾಳಿಗೆಯ ಅರಮನೆಯಿಂದ ಗುಪ್ತಸುರಂಗ ಮಾರ್ಗವಾಗಿ ಧಾರಾನಗರವನ್ನು ಯಾರೊಬ್ಬರೂ ಅರಿಯದ ಹಾಗೆ ಸಂಚರಿಸುತ್ತ ಪ್ರಜೆಗಳ ಸ್ಥಿತಿಗತಿಯನ್ನು ತಿಳಿದುಕೊಳ್ಳುತ್ತಿದ್ದರು. ಹೀಗೆ ಅಜ್ಞಾತವಾಸ ಸಾಂಗವಾಗಿಯೇ ಸಾಗಿತ್ತು. ಅಚಲಸಿಂಹನು ಈ ವಿಚಾರದಲ್ಲಿ ಎಲ್ಲ ರೀತಿಯ ಅನುಕೂಲವನ್ನು ಮಾಡಿದ್ದಲ್ಲದೆ ಸ್ವಾಮಿ ನಿಷ್ಠೆಯನ್ನು ಪ್ರದರ್ಶಿಸಿದ್ದ.

ಇತ್ತ ಅಚಲಸಿಂಹನು ಮುಂಜರಾಜನು ನಂಬುವಂತೆ ಒಂದು ಆಡಿನ ಎರಡು ಕಣ್ಣುಗಳನ್ನು ಕಿತ್ತು, ಆ ಎರಡು ಕಣ್ಣುಗಳನ್ನು ಮತ್ತು ಭೋಜನ ಉಡುಪಿನ ಒಂದು ವಸ್ತ್ರವನ್ನು ರಕ್ತದಲ್ಲಿ ಅದ್ದಿ ಅದನ್ನೆ ತೆಗೆದುಕೊಂಡು ಬಂದು ರಾಜನ ಏಕಾಂತ ಭವನಕ್ಕೆ ಬಂದನು. ಆ ರಕ್ತಸಿಕ್ತ ಭೋಜನ ಬಟ್ಟೆಯನ್ನೂ ತೋರಿಸುತ್ತ "ಮಹಾಪ್ರಭುಗಳೇ........ ತಮ್ಮ ಆಜ್ಞೆಯನ್ನು ಶಿರಸಾವಹಿಸಿದ್ದೇನೆ. ನೋಡಿ ಅದಕ್ಕೆ ಸಾಕ್ಷಿ ಇದು" ಎನ್ನುತ್ತಾ ಆಡಿನ ಕಣ್ಣನ್ನು ಹಾಗೂ ರಕ್ತಲೇಪಿತ ಭೋಜನ ಬಟ್ಟೆಯನ್ನು ತೋರಿಸಿದನು ಅಚಲಸಿಂಹ.

ಕಾರ್ಯ ಫಲಿಸಿತು ಎಂದು ಮುಂಜರಾಜನು ಹಿಗ್ಗಿ ಹೋದ. ಸಂತೋಷದಿಂದಲೇ ಹೇಳಿದ,

"ಸರಿ..... ಸರಿ..... ನಿನ್ನಲ್ಲಿ ನನಗೆ ಪೂರ್ಣ ನಂಬಿಕೆ ಇದೆ ಅಚಲಸಿಂಹ.... ಸ್ವಾಮಿಕಾರ್ಯವನ್ನು ನಿಷ್ಠೆಯಿಂದ ಮಾಡಿರುತ್ತಿ ಸಂತೋಷ. ಆದರೆ ಆ ಕಣ್ಣನ್ನು ನಾನು ನೋಡಲಾರೆ, ಎಲ್ಲಿಯಾದರೂ ಯಾರಿಗೂ ಗೊತ್ತಾಗದ ಹಾಗೆ ಗುಪ್ತಸ್ಥಳದಲ್ಲಿ ಅವುಗಳನ್ನು ನೆಲದಲ್ಲಿ ಹೂತು ಬಿಡು. ಸದ್ಯದಲ್ಲೆ ನಿನಗೆ ಮಂತ್ರಿ ಪದವಿಯನ್ನು ಕೊಡುತ್ತೇನೆ" ಎಂದು ಅಟ್ಟಹಾಸದಿಂದಲೇ ನುಡಿದಿದ್ದನು - ಆ ಬಹುಮರ್ಮಿಯಾದ ಮುಂಜರಾಜ.

ಆತುರಗಾರನಿಗೆ ಬುದ್ಧಿಹೀನ ಎಂಬಂತೆ ರಾಜ್ಯದಾಹ, ಅಧಿಕಾರ ಲಾಲಸೆಯಿಂದ ತಾನೇ ತಾನಾಗಿ ಮೆರೆಯುತ್ತಿದ್ದ ಮುಂಜರಾಜನು ಅಚಲಸಿಂಹನು ತಂದು ತೋರಿಸಿದ ಆಡಿನ ಕಣ್ಣುಗಳು ಮತ್ತು ರಕ್ತಸಿಕ್ತವಾದ ಬಟ್ಟೆಯನ್ನೇ ನಂಬಿ "ಇನ್ನು ಭೋಜರಾಜನ ಕಥೆ ಮುಗಿಯಿತು. ಧಾರಾನಗರಕ್ಕೆ..... ಈ ರತ್ನಸಿಂಹಾಸನಕ್ಕೆ ನಾನೇ ಸರ್ವಾಧಿಕಾರಿ" ಎಂದು ಹಿರಿಹಿರಿಹಿಗ್ಗಿದನು.

# ಕಿಶೋರ ಭೋಜರಾಜನು ಮಾರುವೇಷದಲ್ಲಿ

ಅತಿ ಚಾಣಾಕ್ಷತನದಿಂದ ಮುಂಜರಾಜನ ಆಜ್ಞೆಯನ್ನು ಪಾಲಿಸಿದವನಂತೆ ನಟಿಸಿ, ಅವನನ್ನು ನಂಬಿಸಿ ಅಪಾರ ಮೆಚ್ಚುಗೆ ಗಳಿಸಿದ ಅಚಲಸಿಂಹನ ಬಗ್ಗೆ ಮುಂಜರಾಜನಿಗೆ ಎಲ್ಲಿಲ್ಲದ ಅಭಿಮಾನ ಉಕ್ಕಿತ್ತು.

ಅಚಲಸಿಂಹನ ಮಾತು ನಿಜವೆಂದೇ ನಂಬಿದ ಮುಂಜರಾಜನು, ಆ ಕ್ಷಣ ತನ್ನ ಕೊರಳಲ್ಲಿದ್ದ ಅಮೂಲ್ಯ ರತ್ನಹಾರವನ್ನು ತೆಗೆದು ಅವನತ್ತ ಎಸೆಯುತ್ತ "ಶಹಭಾಶ್ ಅಚಲಸಿಂಹ, ನಿನ್ನ ಧೈರ್ಯ, ಸಾಹಸ, ಚಾಣಾಕ್ಷತನಕ್ಕೆ ನಾನು ಮೆಚ್ಚಿದ್ದೇನೆ. ತೆಗೆದುಕೊ ಈ ರತ್ನಹಾರವನ್ನು....... ನಿನಗೆ ಉಡುಗೊರೆಯಾಗಿ ಕೊಡುತ್ತಿದ್ದೇನೆ..... ಬರಿ ರತ್ನ ಹಾರವೇ ಮಾತ್ರವಲ್ಲ, ನಾನು ನಿನಗೆ ಹೇಳಿದ ಪ್ರಕಾರ ಮಂತ್ರಿ ಪದವಿಯನ್ನು ಕೊಡುತ್ತೇನೆ. ಈಗಿರುವ ಮಹಾಮಂತ್ರಿಯ ತರುವಾಯ ನೀನೇ ನನಗೆ ಮಹಾಮಂತ್ರಿ" ಎಂದು ಅಹಂಭಾವದಿಂದಲೇ ನುಡಿದ ಮುಂಜರಾಜ.

ಆಗ ಅಚಲಸಿಂಹನು ಮುಂಜುರಾಜನ ಅಹಂಕಾರದ ನುಡಿಗಳಿಗೆ ಮನದಲ್ಲೆ ನೊಂದುಕೊಳ್ಳುತ್ತ ಅದನ್ನು ತೋರ್ಪಡಿಸದೆ ವಿನಯದಿಂದಲೆ ಮಾತನಾಡುತ್ತಾ,

"ಮಹಾಪ್ರಭು..... ತಮ್ಮಲ್ಲಿ ಒಂದು ಬಿನ್ನಹ"

"ಏನದು?"

"ನಾನು ಮಂತ್ರಿಯಾಗಲು ಈಗ ನನ್ನಲ್ಲಿ ಸಾಕಷ್ಟು ಅರ್ಹತೆ ಇಲ್ಲವಾಗಿದೆ. ಅರ್ಹತೆ ಪಡೆದು ಕ್ರಮೇಣ ಮಂತ್ರಿ ಪದವಿಯನ್ನು ಪಡೆಯುತ್ತೇನೆ. ಅಲ್ಲಿಯವರೆವಿಗೆ ನನಗೆ ಯಾವ ಅಧಿಕಾರವನ್ನು ದಯಪಾಲಿಸಬಾರದು ಎಂದೇ ಬೇಡಿಕೊಳ್ಳುತ್ತೇನೆ" ಎಂದು ವಿನಯದಿಂದಲೇ ಹೇಳಿದ ಅಚಲಸಿಂಹ.

"ಪದವಿ ಸಿಕ್ಕಿದಾಗ ಗಿಟ್ಟಿಸಿಕೊಳ್ಳುವುದೇ ಬುದ್ಧಿವಂತರ ಲಕ್ಷಣ. ಸರಿ ನಿನ್ನ ಇಷ್ಟದಂತೆಯೇ ಆಗಲಿ. ನೀನು ಬಯಸಿದಾಗ ಆ ಪದವಿಯನ್ನು ಪಡೆಯುವಂತೆ ನಿನಗಾಗಿ ಕಾದಿರುಸುತ್ತೇನೆ. ಅಂದ ಹಾಗೆ ಇನ್ನೊಂದು ಮಾತು......"

"ಹೇಳಿ ಮಹಾಪ್ರಭು"

"ಭೋಜರಾಜನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಹಾಗೂ ಲೋಕಾನುಭವಕ್ಕಾಗಿ ಜಹಜಿನಲ್ಲಿ ದೇಶಾಂತರ (ವಿದೇಶ) ಕ್ಕೆ ಹೋಗಿರುವುದಾಗಿ ಧಾರಾನಗರದ ಪ್ರಜೆಗಳಿಗೆ ಎಲ್ಲರಿಗೂ ತಿಳಿಯುವ ರೀತಿಯಲ್ಲಿ ಡಂಗೂರ ಸಾರಿಸಿಬಿಡು" ಎಂದು ಆಜ್ಞಾಪಿಸಿದ.

ಆಜ್ಞೆಯನ್ನು ಹೊತ್ತ ಅಚಲಸಿಂಹನು ಅಲ್ಲಿಂದ ನಿರ್ಗಮಿಸಿದ.

ಅಚಲಸಿಂಹನು ಹೊರಟುಹೋದ ನಂತರ ಮುಂಜರಾಜನು ಅಲ್ಲಿಯೇ ಇದ್ದ ನಿಲುವುಗನ್ನಡಿಯ ಮುಂದೆ ನಿಂತು. ತನ್ನ ಪ್ರತಿಬಿಂಬವನ್ನೊಮ್ಮೆ ನೋಡಿ ಗಹಗಹಿಸಿನಗುತ್ತ ಮೀಸೆ ತಿರುವುತ್ತಾ,

"ಅಹ್ಹಹ್ಹಾ! ನನ್ನ ಪಟ್ಟಭದ್ರ ರತ್ನಸಿಂಹಾಸನಕ್ಕೆ ಕಂಟಕಪ್ರಾಯನಾದ ಆ ಭೋಜನು ಹತನಾಗಿ ಬಿಟ್ಟ. ಇನ್ನು ನನಗೆ ಯಾರ ಭಯವೂ ಇಲ್ಲ. ಯಾವ ಅಡ್ಡಿ ಆತಂಕಗಳೂ ನನಗಿಲ್ಲ. ಆಜೀವಪರ್ಯಂತರ ಈ ಧಾರಾನಗರವನ್ನಾಳುವ ರಾಜ ಮಹಾರಾಜನು ನಾನೇ; ಎಲ್ಲ ಸಾಮಂತರಾಜರುಗಳ ಹುಟ್ಟಡಗಿಸಿ ಏಕ ಚಕ್ರಾಧಿಪತಿಯಾಗಿ ಮೆರೆಯುವವನು ನಾನೇ ಆಗಿಬಿಟ್ಟೆ" ಎಂದು ಎದೆ ತಟ್ಟಿಕೊಳ್ಳುತ್ತಾ ಭ್ರಮಾಲೋಕದಲ್ಲಿ ವಿಹರಿಸತೊಡಗಿದ.

ಇತ್ತ ಅರಮನೆಯ ಮಹಾಮಂತ್ರಿಗಳು ರಾಜ ಗುರುಗಳನ್ನೂ..... ಅನೇಕ ಉಪಮಂತ್ರಿಗಳನ್ನೂ...... ತಮ್ಮ ಏಕಾಂತ ಮಂದಿರಕ್ಕೆ ಬರಮಾಡಿಕೊಂಡು ಭೋಜನ ವಿಷಯವಾಗಿ ಅನೇಕ ರೀತಿಯಲ್ಲಿ ಚರ್ಚೆ ನಡೆಸಿದರು.

ಇದೀಗ ಹದಿನಾರನೇ ವಯಸ್ಸಿನಲ್ಲಿರುವ ಬಾಲಕ ಭೋಜರಾಜರು ಏಕಾಏಕಿ.... ಯಾರಿಗೂ ತಿಳಿಸದೆ ಒಬ್ಬಂಟಿಗನಾಗಿ ದೇಶಾಂತರಕ್ಕೆ (ವಿದೇಶಕ್ಕೆ) ಹೋಗಿದ್ದಾನೆ...... ಎಂದರೆ ಅದು ನಂಬಲಾಗದ ವಿಷಯ. ಹಾಗೂ ಒಂದು ವೇಳೆ ಆ ರೀತಿ ದೇಶಾಂತರಕ್ಕೆ ಹೋಗುವ ಅಭಿಲಾಶೆ ಇದ್ದಿದ್ದರೆ ರಾಜಪುರೋಹಿತರಾದ ನಿಮಗೂ ಮಹಾಮಂತ್ರಿಯಾದ ನನಗೂ ತಿಳಿಸಿಯೇ ಹೋಗುತ್ತಿದ್ದನು. ಈ ರೀತಿ ಪ್ರಚಾರ ಮಾಡುತ್ತಿರುವುದರಲ್ಲಿ ಯಾವುದೊ ಮರ್ಮ ಅಡಗಿದೆ. ಈಗ ರಾಜ್ಯಭಾರ ನಡೆಸುತ್ತಿರುವ ಮುಂಜರಾಜನು ಅಚಲಸಿಂಹನೂ ಇಬ್ಬರೂ ಒಂದಾಗಿ ಬಿಟ್ಟಿದ್ದಾರೆ. ಆಗಾಗ್ಗೆ ಅಚಲಸಿಂಹನು ಮುಂಜರಾಜನ ಏಕಾಂತ ಭವನಕ್ಕೆ ಹೋಗಿ ಬರುತ್ತಿರುವುದು ಸರ್ವೇ ಸಾಮಾನ್ಯವಾಗಿ ಬಿಟ್ಟಿದೆ. ಈಗ ನಾವೆಲ್ಲರು ಚತುರೋಪಾಯದಿಂದ ಈ ರಹಸ್ಯವನ್ನು ಕಂಡು ಹಿಡಿಯಬೇಕಾಗಿದೆ ಎಂದು ನಾನಾಬಗೆಯಲ್ಲಿ ಚರ್ಚಿಸಿದರು.

ನಂತರ ಮಹಾಮಂತ್ರಿಗಳು ಮತ್ತೆ ರಾಜಗುರುಗಳೊಡನೆ ಕೂಲಂಕುಶವಾಗಿ ಚರ್ಚಿಸುತ್ತಾ"ಒಂದುವೇಳೆ ಭೋಜರಾಜನಿಗೆ ಯಾರಾದರೂ ಶತ್ರುಗಳಿಂದ ಭಯವಿದೆಯೆ? ಪ್ರಾಣಭೀತಿಯಿಂದ ಅಪಾಯ ಸಂಭವಿಸಬಲ್ಲದೆ?" ಎಂದು ಆತಂಕದಿಂದಲೇ ಪ್ರಶ್ನಿಸಿದರು.

ಆಗ ಸಕಲ ಜ್ಯೋತಿಷ್ಯ ಶಾಸ್ತ್ರವನ್ನು ಚೆನ್ನಾಗಿ ಬಲ್ಲವರೇ ಆದ ರಾಜಗುರುಗಳು. ಅವನ ಜಾತಕವನ್ನು ತರಿಸಿಕೊಂಡು ಕೂಲಂಕುಶವಾಗಿ ನೋಡಿ ಹೇಳುತ್ತ "ಅಂತಹ ಪ್ರಾಣಾಪಾಯದ ಯಾವುದೇ ಭಯವಿಲ್ಲ. ಕುಂಡಲಿ ಹಾಕಿ ನೋಡಿದ್ದೇನೆ. ಗ್ರಹಗಳು ಒಳ್ಳೆಯ ಸ್ಥಾನದಲ್ಲಿವೆ. ಯಾವ ಅಪಾಯವಾಗಲಿ ಪ್ರಾಣಭೀತಿಯಂತಹ ಭಯವಾಗಲಿ..... ಯಾವ ದೋಷವೂ ಕಂಡು ಬರುವುದಿಲ್ಲ, ಆದಾಗ್ಯೂ ಈ ಜಾತಕ ರೀತಿಯಂತೆ ಅವನಿಗೆ ತನ್ನ ಹದಿನೈದನೇ ವಯಸ್ಸಿನಿಂದ ಹದಿನಾರುವರ್ಷದ ಒಳಗಾಗಿ ಒಂದು ಸಣ್ಣ ಕಂಟಕವಿದೆ ಎಂದು ಹೇಳಿದೆ. ಆದಾಗ್ಯೂ ಸಹ ಭೋಜನು ಅಂತಹ ಕಂಟಕವನ್ನು ತನ್ನ ಸ್ವಶಕ್ತಿಯಿಂದಲೂ, ದೇವಿ ಕೃಪೆಯಿಂದಲೂ ತನ್ನನ್ನು ತಾನೇ ರಕ್ಷಿಸಿಕೊಳ್ಳುವಂತಹ ಸಾಮರ್ಥ್ಯವನ್ನು ಪಡೆದಿರುತ್ತಾನೆ. ಮಿಗಿಲಾಗಿ ಭೋಜರಾಜನು ಈ ಧಾರಾನಗರವನ್ನು ಆಳುವ ಮಹಾಯೋಗವಿದ್ದು ಆ ಮೂಲಕ ವಿಶ್ವಕ್ಕೆ ಬಹು ಕೀರ್ತಿ ಪ್ರಾಯನಾಗುವ ಸುಯೋಗವಿರುವುದರಿಂದ ಅವನಿಗೆ ಯಾರೇ ಶತ್ರು ಒಳಶತ್ರುಗಳ ಭಯವಿರುವುದಿಲ್ಲ" ಎಂದು ನಿರ್ಧರಿಸಿ ನುಡಿದರು ರಾಜ ಪುರೋಹಿತರು.

"ಏನೇ ಆಗಲಿ..... ಭೋಜನ ಜಾತಕದಿಂದ ಎಷ್ಟೇ ಸಮಾಧಾನವಾಗಿರಲಿ, ಮುಂಜರಾಜನ ಆಡಳಿತದ ರಹಸ್ಯವನ್ನು ನಾವು ತಿಳಿದುಕೊಳ್ಳಲೇಬೇಕು. ಇದರಲ್ಲಿ ಏನೋ ರಹಸ್ಯವಿದೆ" ಎಂದು ಮಹಾಮಂತ್ರಿಗಳು ತಮ್ಮ ಮನಸ್ಸಿನಲ್ಲಿದ್ದ ಅನುಮಾನದಿಂದ ಹಾಗೆ ಹೇಳಿದರು.

ಗುಪ್ತ ಸಭೆ ಮುಕ್ತಾಯವಾಯಿತು.

ಇತ್ತ ಭೋಜರಾಜನು ಅಚಲಸಿಂಹನು ತನಗೆ ತೋರಿಸಿಕೊಟ್ಟ ಮಾರ್ಗವನ್ನನುಸರಿಸುತ್ತ.... ಗುಪ್ತನೆಲದಲ್ಲಿ - ತನ್ನ ವಿದ್ಯಾ ಪಾಂಡಿತ್ಯವನ್ನು ಮತ್ತಷ್ಟು ವೃದ್ಧಿಗೊಳಿಸಿಕೊಳ್ಳುತ್ತ - ಅದರ ಜೊತೆಗೆ ಪ್ರತಿನಿತ್ಯವೂ ಮಾರುವೇಷದಲ್ಲಿ ಗುಪ್ತನೆಲದಾರಿಯ ಮೂಲಕ ಧಾರಾನಗರವನ್ನು ಸಂಚಾರ ಮಾಡುತ್ತ - ಅಲ್ಲಿನ ಪ್ರಜೆಗಳ ಸ್ಥಿತಿಗತಿಯನ್ನು ಪ್ರತ್ಯಕ್ಷವಾಗಿ ಗಮನಿಸುತ್ತಿದ್ದನು. ಅವರೊಡನೆ ಅನೇಕ ವಿಷಯಗಳನ್ನು ಚರ್ಚಿಸುತ್ತಿದ್ದನು.

ಅದರಂತೆ ಅಂದು ಸಹ ಯಾರೊಬ್ಬರೂ ತನ್ನನ್ನು ಗುರುತು ಹಿಡಿಯದ ರೀತಿಯಲ್ಲಿ ಬಹು ವಿಚಿತ್ರವಾದ ಮಾರುವೇಷ ಧರಿಸಿ ನೆಲದಾರಿಯ ಮೂಲಕ ಧಾರಾನಗರದ ರಾಜಬೀದಿಗೆ ಬಂದನು. ಅಲ್ಲಿ ಓಡಾಡುತ್ತಿದ್ದ ನಾಗರಿಕರೊಂದಿಗೆ ಅನೇಕ ವಿಷಯಗಳನ್ನು ಚರ್ಚಿಸುತ್ತಿದ್ದನು. ಅದೇ ಸಮಯಕ್ಕೆ ಸರಿಯಾಗಿ ಅರಮನೆಯ ಡಂಗೂರಕಾರನು ಡಂಗೂರ ಬಾರಿಸುವ ದಿಣ್ಣೆಯ ಮೇಲೆ ನಿಂತು ಡಂಗೂರ ಬಾರಿಸುವುದಕ್ಕೆ ಪ್ರಾರಂಭಿಸಿದನು. ಆಗ ಅಲ್ಲಿ ಓಡಾಡುತ್ತಿದ್ದ ಎಲ್ಲ ನಾಗರಿಕರು ಅತ್ಯಂತ ಕುತೂಹಲಭರಿತರಾಗಿ - ಅವನ ಸುತ್ತಲು ಗುಂಪು ಕೂಡಿದರು. ಹೊಸ ವಿಷಯ ಏನೆಂದು ಅರಿಯಲು ಮಾರು ವೇಷಧಾರಿಯಾಗಿದ್ದ ಭೋಜನು ಸಹ ಆ ಗುಂಪಿನಲ್ಲಿ ಸೇರಿಕೊಂಡು ವಿಷಯವನ್ನರಿಯಲು ಕಾತುರನಾಗಿದ್ದನು. ಆಗ ಅವನು ಧರಿಸಿದ್ದ ವಿಚಿತ್ರ ವೇಷದಿಂದ ಯಾರೊಬ್ಬರೂ ಅವನನ್ನು ರಾಜಕುಮಾರ ಭೋಜನೆಂದು ಕಂಡು ಹಿಡಿಯಲಾರದ ರೀತಿಯಲ್ಲಿ ಬಂದಿದ್ದನು.

ಹಿಂದೆ ತಾನು ಆ ರಾಜ ಬೀದಿಯಲ್ಲಿ ಸಕಲ ರಾಜ ವೈಭವದೊಂದಿಗೆ ತಂದೆ ಮಹಾರಾಜ ಹಾಗೂ ತಾಯಿ ಮಹಾರಾಣಿಯೊಂದಿಗೆ ಚಿನ್ನದ ಅಂಬಾರಿಯಲ್ಲಿ ಮೆರವಣಿಗೆ ಬಂದದ್ದನ್ನು ಜ್ಞಾಪಿಸಿ ಕೊಂಡಾಗ ಭೋಜನ ಮನಸ್ಸಿನಲ್ಲಿ ವಿಪರೀತ ತಳಮಳವಾದರೂ ಎಲ್ಲವನ್ನೂ ಸಹಿಸಿಕೊಂಡು ಧಾರಾನಗರದ ನಾಗರಿಕರಲ್ಲಿ ಒಬ್ಬನಾಗಿ ಅವರೊಡನೆ ಸೇರಿಕೊಂಡ.

ಡಂಗೂರ ಬಾರಿಸುತ್ತ ವಿಷಯವನ್ನು ಹೇಳಲು ಪ್ರಾರಂಭಿಸಿದ ಅವನು "ಮಹಾಜನಗಳೇ... ಕೇಳಿರಿ.... ಕೇಳಿರಿ...... ಈ ಧಾರಾನಗರದ ರಾಜಕುಮಾರರಾದ, ಯುವರಾಜ ಭೋಜರಾಜರು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿಯೂ ಹಾಗೂ ಲೋಕಾನುಭವನ್ನು ಪಡೆಯುವುದಕ್ಕಾಗಿಯೂ ಹಡಗಿನಲ್ಲಿ ಸಮುದ್ರಯಾನದ ಮೂಲಕ

ವಿದೇಶಕ್ಕೆ ಹೋಗಿದ್ದಾರೆ. ಲೋಕಾನುಭವ ಪಡೆದು ಮತ್ತೆ ಧಾರಾನಗರಕ್ಕೆ ಬರುವವರಿದ್ದಾರೆ..... ರಾಜಾಜ್ಞೆಯಂತೆ ಇದನ್ನು ನಾಗರಿಕರಿಗೆ ತಿಳಿಸುತ್ತಿದ್ದೇನೆ.... ಕೇಳಿರಿ.... ಕೇಳಿರಿ....." ಡಂಗೂರದವನ ಪ್ರಚಾರ ನಿಂತಿತು.

ಆಗ ಅಲ್ಲಿಯೇ ಇದ್ದ ಮಾರುವೇಷಧಾರಿ ಭೋಜನು ತನ್ನ ಚಿಕ್ಕಪ್ಪನ ಕುತಂತ್ರದಿಂದ ಕೂಡಿದ ರಾಜತಂತ್ರಕ್ಕೆ ಮನದಲ್ಲೆ ವಿಸ್ಮಯಭೂತನಾದನು.

ಆ ವಿಷಯವನ್ನು ಕೇಳಿದ ಅಲ್ಲಿಯೇ ಗುಂಪು ಕೂಡಿದ್ದ ನಾಗರಿಕರು ತಮ್ಮ ತಮ್ಮಲ್ಲೆ ಮಾತನಾಡಿಕೊಳ್ಳಲಾರಂಭಿಸಿದರು "ಯುವರಾಜರಾದ ಭೋಜರಾದರು ಏಕೆ ದೇಶಾಂತರ ಹೋದರು? ಅದರ ಮೂಲಕಾರಣವಾದರೂ ಏನು? ವಿಶ್ವದಲ್ಲಿಯೇ ಪರಮ ಪವಿತ್ರವಾದ ಪ್ರಶಾಂತ ದೇಶ ಭಾರತದೇಶ. ಭರತಖಂಡದಂತಹ ದೇಶಕ್ಕಿಂತ ಮಿಗಿಲಾದ ದೇಶ ಇನ್ನೊಂದಿಲ್ಲ. ವಿದ್ಯೆಯಲ್ಲೂ ಅಷ್ಟೇ. ಈ ಖಂಡದಲ್ಲಿರುವಷ್ಟು ವಿದ್ಯಾ ಸಂಪನ್ಮೂಲ ಬೇರೊಂದು ಕಡೆ ಎಲ್ಲೂ ಇಲ್ಲ. ಹೀಗಿರುವಾಗ ಅವರು ದೇಶಾಂತರ ಹೋಗುವಂಥ ಪ್ರಮೇಯವಾದರು ಏನು?" ಎಂದು. ಹೀಗೆ ಮಾತನಾಡಿಕೊಳ್ಳುತ್ತಿರುವುದನ್ನು ಅಲ್ಲಿಯೇ ನಿಂತು ಕೇಳುತ್ತಿದ್ದ ಭೋಜನಿಗೆ ಅಲ್ಲಿಯೇ ತನ್ನ ಮಾರುವೇಷವನ್ನು ಕಳಚಿ, ತಾನು ಭೋಜನಾಗಿ ಕಾಣಿಸಿಕೊಂಡು ತನ್ನ ಚಿಕ್ಕಪ್ಪನ ನಯವಂಚಕತನವನ್ನು ಬಹಿರಂಗ ಪಡಿಸಿಬಿಡಲೆ? ಎಂದು ಅವನ ಮನಸ್ಸು ಮುಂದಾಯಿತು. ಆದರೆ ಅಷ್ಟರಲ್ಲೆ ವಿವೇಕವನ್ನು ಹೊಂದಿದವನಾಗಿ "ಈಗ ದುಡುಕುವುದು ಬೇಡ. ತನ್ನ ಚಿಕ್ಕಪ್ಪನಿಂದ ಏನೇನು ನಡೆಯುವುದೊ ಕಾದು ನೋಡೋಣ" ಎಂದು ಸಮಾಧಾನ ಚಿತ್ತನಾಗಿ ಆ ಸ್ಥಳದಿಂದ ನಿರ್ಗಮಿಸಿ, ಯಾರೊಬ್ಬರು ಅರಿಯದ ರೀತಿಯಲ್ಲಿ ಗುಪ್ತ ನೆಲದಾರಿಯ ಮೂಲಕ ತನ್ನ ಏಕಾಂತ ಗುಪ್ತಮಂದಿರವನ್ನು ಸೇರಿದ್ದ ಭೋಜರಾಜ.

ಅದೇ ರೀತಿಯಾಗಿ ಪ್ರತಿನಿತ್ಯವೂ ಮಾರುವೇಷಧಾರಿಯಾಗಿ ಪ್ರಜೆಗಳ ಕಷ್ಟಸುಖಗಳನ್ನು ಗಮನಿಸುತ್ತ ಜೊತೆಗೆ ತನ್ನ ಚಿಕ್ಕಪ್ಪನಾದ ಮುಂಜರಾಜನ ದುರಾಡಳಿತವನ್ನು ಗಮನಿಸುತ್ತಿದ್ದ. ಜೊತೆಗೆ ರಾಜಾರ್ಹವಾದ ಎಲ್ಲ ಪಾಂಡಿತ್ಯ ವಿದ್ಯೆಯಲ್ಲೂ ಬಹು ಆಸಕ್ತಿ ಉಳ್ಳವನಾಗಿ ತನ್ನ ಜ್ಞಾನ ಭಂಡಾರವನ್ನು ದಿನೇ ದಿನೇ ಅದ್ವಿತೀಯವಾಗಿ ಹೆಚ್ಚಿಸಿಕೊಂಡ ಭೋಜ.

# ಮುಂಜರಾಜನ ಪಶ್ಚಾತ್ತಾಪ

ಕಾಲ ಚಕ್ರ ಉರುಳುತ್ತಲೇ ಇತ್ತು. ವಿಧಿ ನಿಯಮದಂತೆ ಜಗತ್ತಿನಲ್ಲಿ ಅದೆಷ್ಟೋ ಚಿತ್ರ ವಿಚಿತ್ರವಾದ ಘಟನೆಗಳು ನಡೆದು ಹೋದವು. ಎರಡು ವರ್ಷಗಳು ಕಳೆದಿತ್ತು. ಬಹು ವೈಭವದಿಂದಲೂ - ಶಾಂತಿ ಶಿಸ್ತು ನೆಮ್ಮದಿ ಇವುಗಳಿಂದ ವಿಶ್ವಖ್ಯಾತಿಯಾಗಿ ಮೆರೆಯುತ್ತಿದ್ದ ಧಾರಾನಗರವು ಮುಂಜರಾಜನ ದುರಾಡಳಿತದಿಂದ ಆ ಎಲ್ಲ ವೈಭವಗಳನ್ನೂ ಕಳೆದುಕೊಂಡಿತ್ತು.

ದೇಶದ ಎಲ್ಲೆಡೆಯಲ್ಲೂ ಅಶಾಂತಿ ಅಶಿಸ್ತಿಗೆ ಕಾರಣವಾಯಿತು. ಇದರಿಂದ ಸತ್ಯಸಂಧರಾದ ಧಾರಾನಗರದ ಪ್ರಜೆಗಳ ಕ್ರೂರಶಾಪಕ್ಕೆ ಗುರಿಯಾದ ರಾಜ್ಯದಾಹ ಪೀಡಿತನಾದ ಮುಂಜರಾಜನು ಕೆಲವು ವ್ಯಾದಿಗಳಿಂದಲೂ. ಮನೋರೋಗದಿಂದಲೂ ಹಾಸಿಗೆ ಹಿಡಿದು, ಅತಿಯಾದ ಬಾಧೆಯನ್ನನುಭವಿಸುತ್ತಿದ್ದನು. ತಾನು ಹಿಂದೆ ಮಾಡಿದ ಅತಿ ಹೇಯವಾದ ದುಷ್ಕೃತ್ಯವನ್ನು ನೆನೆದು ಅತಿಯಾಗಿ ದುಃಖಿಸಿದನು. ಇದೀಗ ಪಾಪಪ್ರಜ್ಞೆ ಅವನನ್ನು ಕಾಡತೊಡಗಿತು. ತನ್ನ ಅಣ್ಣನ ಮಗನಾದ ಇನ್ನೂ ಕಿಶೋರಾವಸ್ಥೆಯಲ್ಲಿದ್ದ ಯುವರಾಜ ಭೋಜನನ್ನು ಕೊಲ್ಲಲು ಪ್ರಚೋದಿಸಿದ ಅಂದಿನ ಆ ಘಟನೆಯಿಂದ ಅವನ ಮನಸ್ಸೇ ಇಂದು ಪೂರ್ಣವಾಗಿ ಬದಲಾಗಿತ್ತು. ತಪ್ಪಿನ ಅರಿವಾಗಿ ಮನೋ ಚಿಂತೆಯಿಂದ ತಲ್ಲಣಿಸಿ ಹೋದ. ಆ ಘಟನೆ ಅವನನ್ನು ಅತಿಯಾದ ಮನೋವೇದನೆಗೆ ಗುರಿ ಪಡಿಸಿತ್ತು.

ಈ ಮಧ್ಯೇ ಧಾರಾನಗರದ ಪ್ರಜೆಗಳು ಮುಂಜರಾಜನ ದುರಾಡಳಿತ ಹಾಗೂ ಯುವರಾಜ ಭೋಜರಾಜನ ನಿಘೂಡ ಕಣ್ಮರೆ ಇದರಿಂದ ರೊಚ್ಚಿಗೆದ್ದಿದ್ದರು. ದೇಶದ ಪ್ರಜೆಗಳು ಲಕ್ಷೋಪಲಕ್ಷ ಸಂಖ್ಯೆಯಲ್ಲಿ ಆ ಭವ್ಯವಾದ ಅರಮನೆಗೆ ಧಾವಿಸಿ ಬಂದು ಮುತ್ತಿಗೆ ಹಾಕಿದರು.

ಸದಾಕಾಲವು ಬಹು ವಿಜೃಂಭಣೆಯಿಂದ ನಕ್ಕುನಲಿಯುತ್ತಿದ್ದ ಆ ವೈಭವೋಪೇತ ಅರಮನೆಯೂ ಅಂದು ಪ್ರಜೆಗಳ ಹಾಹಾಕಾರದದಿಂದಾಗಿ ಕಾಂತಿಹೀನವಾಗಿತ್ತು.

ಅರಮನೆ ಹೊರಗಡೆ ನೆರೆದಿದ್ದ ಅಸಂಖ್ಯ ಪ್ರಜೆಗಳು ಅರಮನೆಯೇ ಕಂಪಿಸುವಂತೆ ಪ್ರತಿಭಟಿಸಿ ಕೂಗುತ್ತ....... "ನಮಗೆ ಭೋಜರಾಜರುಬೇಕು. ಯುವರಾಜ ಭೋಜರಾಜರು ಎಲ್ಲಿದ್ದಾರೆ? ಯಾವಾಗ ಬರುತ್ತಾರೆ ತಿಳಿಸಬೇಕು. ಈ ಕೂಡಲೆ ತಿಳಿಸಬೇಕು" ಎಂದು ನಾನಾರೀತಿಯಲ್ಲಿ ಪ್ರತಿಭಟಿಸುತ್ತಿದ್ದರು.

ಅದೇನಾಶ್ಚರ್ಯ! ಆ ಲಕ್ಷೋಪಲಕ್ಷ ಜನರ ಪ್ರತಿಭಟನೆಯಲ್ಲೆ ಯಾರೊಬ್ಬರೂ ಅರಿಯದ ಹಾಗೆ ಚಾಣಾಕ್ಷ ಚತುರನಾದ ಯುವರಾಜ ಭೋಜನು ಸಹ ಗಡ್ಡಧಾರಿ ಸಾಮಾನ್ಯ ನಾಗರೀಕನೋಪಾದಿಯಲ್ಲಿ ಮಾರುವೇಷ ಧರಿಸಿ ಬಂದಿದ್ದನು.

ಮಾರುವೇಷಧಾರಿಯಾದ ಭೋಜನು ಆ ರೀತಿ ಬರಲು ಸಹ ಒಂದು ವಿಶೇಷ ಕಾರಣವಿತ್ತು. ಒಂದು ದೇಶವು ಆ ದೇಶದ ರಾಜನ ದುರಾಡಳಿತದಿಂದಾಗಿ ಪ್ರಜೆಗಳು ಯಾವ ರೀತಿ ಕಂಗಾಲಾಗುತ್ತಾರೆ? ಇದರಿಂದ ದೇಶದ ಪರಿಸ್ಥಿತಿ ಯಾವರೀತಿ

ಅಧೋಗತಿಗೆ ಈಡಾಗಬಲ್ಲದು? ಎಂಬುದನ್ನು ತಾನು ಪ್ರತ್ಯಕ್ಷವಾಗಿ ಕಂಡರಿಯಲು ಆ ರೀತ ವೇಷಧರಿಸಿ ಪ್ರಜೆಗಳ ಜೊತೆಯಲ್ಲಿ ತಾನೂ ಸಹ ಓರ್ವ ಸಾಮಾನ್ಯ ಪ್ರಜೆಯಂತೆ ಬಂದಿದ್ದನು.

"ನಮಗೆ ಭೋಜರಾಜಬೇಕು ಅವನೆಲ್ಲಿದ್ದಾನೆ ತಿಳಿಸಬೇಕು" ಎಂದು ತಾನು ಸಹ ಪ್ರತಿಭಟಿಸಿ ಕೂಗುತ್ತಿದ್ದನು.

ಹೀಗೆ ಅವತಾರ ಪುರುಷನಾದ ಪರಮಾತ್ಮ ಶ್ರೀಕೃಷ್ಣ ಮಾಯೆಯೋ ಎಂಬಂತೆ ಅಲ್ಲಿಯೇ ಪ್ರಜೆಗಳ ಮಧ್ಯೆಯಲ್ಲಿಯೇ ಇದ್ದುಕೊಂಡು ಆ ಎಲ್ಲರ ಪಾಲಿಗೆ ಅಗೋಚರನಾಗಿ ಅಲ್ಲಿನ ಸ್ಥಿತಿಗತಿಗಳನ್ನು ಗಮನಿಸುತ್ತಿದ್ದ ಆ ಯುವರಾಜ ಭೋಜನ ಮನೋವೈಖರಿ ಮಹದಾಶ್ಚರ್ಯವನ್ನುಂಟುಮಾಡುತ್ತಿತ್ತು.

ಹಾಗೆ ಅರಮನೆ ಮುಂದೆ ನಿಂತು ಪ್ರತಿಭಟಿಸುತ್ತಿದ್ದ ಅಸಂಖ್ಯ ಪ್ರಜೆಗಳನ್ನು ಶಾಂತಿ ಸಮಾಧಾನ ಮಾಡಲು ಬೇರೆ ದಾರಿಯಿಲ್ಲದೆ ಅರಮನೆಯ ರಾಜಗುರುಗಳು ಮತ್ತು ಮಹಾಮಂತ್ರಿಗಳೇ ಬರಬೇಕಾಯಿತು.

ಆ ಇಬ್ಬರೂ ಜೊತೆಗೂಡಿ ಬಂದು ಎಲ್ಲರಿಗೂ ಕಾಣಿಸಿಕೊಂಡು ಬಹು ವಿನಯಾಭರಣ ಭೂಷಿತರಾಗಿ ಪ್ರಜೆಗಳತ್ತ ಕೈ ಮುಗಿದು ಹೇಳುತ್ತ "ಹೇ ದೇವ ಸ್ವರೂಪರಾದ ಪ್ರಜೆಗಳೇ...... ನೀವೆಲ್ಲರೂ ಶಾಂತಿ ಸಮಾಧಾನದಿಂದ ಇರಬೇಕಾಗಿ ಪ್ರಾರ್ಥಿಸುತ್ತೇನೆ. ನಾವು ಬಹು ಬೇಗನೆ ಯುವರಾಜರಾದ ಭೋಜರನ್ನು ಕರೆಸುತ್ತೇವೆ. ಅವರೇ ಬಂದು ಈ ದೇಶವನ್ನು ಆಳುತ್ತಾರೆ. ಅಲ್ಲಿಯವರೆಗೆ ದೇಶದ ಶಾಂತಿ ಶಿಸ್ತನ್ನು ಮೊದಲಿನಂತೆಯೆ ಕಾಪಾಡಿಕೊಂಡು ಬನ್ನಿ" ಎಂದು ಒಕ್ಕೊರಳಿನಿಂದ ಪ್ರಜೆಗಳನ್ನು ಕುರಿತು ನುಡಿದರು.

ಆ ಸಮಯದಲ್ಲಿ ಪ್ರಜೆಗಳ ಗುಂಪಿನಲ್ಲಿಯೇ ಇದ್ದ ಮಾರುವೇಷಧಾರಿ ಭೋಜನು ತನಗೆ ಪೂಜ್ಯರಾದ ರಾಜಕುಲಗುರುಗಳನ್ನು ಮಹಾಮಂತ್ರಿಗಳನ್ನು ಕಣ್ಣಾರೆ ಕಂಡು ಆನಂದ ಪುಳಕಿತನಾದನು. ಅವರಿಬ್ಬರನ್ನು ಮನದಲ್ಲೆ ಭಕ್ತಿಭಾವದಿಂದ ವಂದಿಸಿದ್ದನು.

ಪಟ್ಟು ಬಿಡದ ಜಟ್ಟಿಯಂತೆ ಪ್ರಜೆಗಳು ಪುನಹ ರಾಜಗುರುಗಳನ್ನು ಮಹಾಮಂತ್ರಿಗಳನ್ನು ಕುರಿತು ಹೇಳುತ್ತ,

"ಈಗ ನಾವು ಮಹಾರಾಜ ಮುಂಜರಾಜರನ್ನು ಇಲ್ಲಿಗೆ ನಮ್ಮ ಮುಂದೆ ಕರೆಸಬೇಕು. ನಾವುಗಳು ನೇರವಾಗಿ ಅವರನ್ನೇ ಪ್ರಶ್ನಿಸುತ್ತೇವೆ..... ಯುವರಾಜರಾದ ಭೋಜರಾಜರನ್ನು ಎಲ್ಲಿಗೆ ಕಳುಹಿಸಿರುವಿರಿ? ಯಾವ ದೇಶಕ್ಕೆ ಕಳುಹಿಸಿಕೊಟ್ಟಿರಿ? ಏತಕ್ಕಾಗಿ ಕಳುಹಿಸಿ ಕೊಟ್ಟಿರಿ? ಅವರು ಯಾವಾಗ ಬರುತ್ತಾರೆ? ಎಂದು ಅವರನ್ನೇ ನಾವು ಕೇಳುತ್ತೇವೆ. ಅವರು ಪ್ರಜೆಗಳಾದ ನಮಗೆ ಏಕೆ ದರ್ಶನ ಕೊಡುತ್ತಿಲ್ಲ?" ಎಂದು ನಾನಾ ರೀತಿಯಲ್ಲಿ ಪ್ರಶ್ನೆಗಳ ಸುರಿಮಳೆಯನ್ನೇ ಸುರಿಸಿದ್ದರು ಆ ನಾಗರೀಕರು.

ಆಗ ರಾಜಗುರುಗಳೇ ಪ್ರಜೆಗಳಿಗೆ ವಿನಯಿಸಿ ಹೇಳುತ್ತ "ನಮ್ಮ ಪ್ರೀತಿಯ ಪ್ರಜೆಗಳೆ, ಈಗ ಅವರು ವಿಪರೀತ ಅನಾರೋಗ್ಯದಿಂದ ನರಳುತ್ತಿದ್ದಾರೆ. ಸರಿಯಾಗಿ ಓಡಾಡಲು ಸಹ ಅಸಮರ್ಥರಾಗಿದ್ದಾರೆ. ಆದ್ದರಿಂದ ಅವರ ಪರವಾಗಿ ನಾವು ಹೇಳುತ್ತಿದ್ದೇವೆ - ದಯವಿಟ್ಟು ಸಮಾಧಾನಚಿತ್ತರಾಗಿರಿ" ಎಂದು ಗುರುಗಳು ಮಹಾಮಂತ್ರಿಗಳು ಪ್ರಜೆಗಳತ್ತ ಕೈ ಮುಗಿದು ನುಡಿದರು.

ಆಗ ಪ್ರಜೆಗಳು ಹಿರಿಯರಾದ ರಾಜಗುರುಗಳ ಮತ್ತು ಮಹಾಮಂತ್ರಿಗಳ ವಿನಯ ತುಂಬಿದ ಮಾತಿಗೆ ಮನಸೋತು, ಅರಮನೆಯಿಂದ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು. ಮಾರುವೇಷಧಾರಿ ಭೋಜನು ಸಹ ಆ ಸ್ಥಳದಿಂದ ನಿಘೂಢ ರೀತಿಯಲ್ಲಿ ಕಣ್ಮರೆಯಾಗಿದ್ದ.

ಇತ್ತ ಮುಂಜರಾಜನು ತನ್ನ ಏಕಾಂತ ಕೋಣೆಯಲ್ಲಿ..... "ಮಾಡಿದ್ದುಣ್ಣೋ ಮಹಾರಾಯ" ಎಂಬಂತೆ ಮನೋರೋಗಕ್ಕೆ ತುತ್ತಾಗಿ ಅತಿಯಾದ ಬಾಧೆಯಿಂದ ನರುಳುತ್ತಿದ್ದನು. ತನ್ನಿಂದ ಆ ಹಿಂದೆ ನಡೆದ ಘೋರ ಅಪರಾಧವನ್ನು ನೆನೆನೆನೆದು ಪ್ರಲಾಪಿಸುತ್ತಾ "ಅಯ್ಯೋ ನಾನೆಂತಹ ಪರಮಪಾಪಿ, ರಾಜ್ಯದಾಹದಿಂದ ಧರ್ಮಿಷ್ಟನಾದ, ಪ್ರಜೆಗಳನ್ನು ಕಾಪಾಡುತ್ತಿದ್ದ ನನ್ನ ಅಣ್ಣನ ಮಗನನ್ನೇ ಕೊಲ್ಲಿಸಿ ಬಿಟ್ಟೆನಲ್ಲ, ನಾನೆಂತಹ ಪರಮದ್ರೋಹಿ, ಯಾವ ಕ್ರೂರ ಕಟುಕನು ಸಹ ಮಾಡದ ಮಹಾ ಘೋರ ಅಪರಾಧ ನನ್ನಿಂದ ಜರುಗಿ ಹೋಯಿತಲ್ಲ......, ಅಯ್ಯೋ ದೇವರೆ! ನನಗೆ ಅದೆಂತಹ ಕ್ರೂರ ನರಕ ಕಾದಿದೆಯೊ ಕಾಣೆನಲ್ಲ...., ನಾನೆಂತಹ ದುರಾಭಿಮಾನಿ! ಎಂತಹ ಪರಮ ನೀಚ" ಹೀಗೆಂದು ತನ್ನನ್ನು ತಾನೇ ಅನೇಕ ರೀತಿಯಲ್ಲಿ ನಿಂದಿಸಿಕೊಳ್ಳುತ್ತ ಅತಿಯಾದ ಬಾಧೆಯಿಂದ ಗೋಳಿಡುತ್ತಿದ್ದನು ಮುಂಜರಾಜ.

ಅರಮನೆಯ ಏಕಾಂತ ಮಂದಿರದಲ್ಲಿ ಯಾರೊಬ್ಬರೂ ಇಲ್ಲದೆ, ತಾನೊಬ್ಬನೆ ಒಂಟಿಯಾಗಿ ಹಂಸತೂಲಿಕಾತಲ್ಪದಲ್ಲಿ ರೋಧಿಸುತ್ತಾ ತಾನು ಮಾಡಿದ ಅತ್ಯಂತ ಹೀನ ಕೃತ್ಯವನ್ನು ಜ್ಞಾಪಕಕ್ಕೆ ತಂದುಕೊಂಡು ಮನೋರೋಗದಿಂದ ನರಳುತ್ತಿದ್ದನು.

"ಅಯ್ಯೋ ನಾನೊಬ್ಬ ಭಾತೃ ದ್ರೋಹಿ. - ಪ್ರಜಾದ್ರೋಹಿ, ರಾಜದ್ರೋಹಿ, ಸಕಲ ವಿದ್ಯಾ ವಿಭೂಷಣನಾದ ಯುವರಾಜನನ್ನೇ ಕೊಲ್ಲಿಸಿದ ರಾಜದ್ರೋಹಿ, ಈ ಜಗತ್ತಿನಲ್ಲಿ ನನಗೆ ಯಾವ ಶಿಕ್ಷೆ ವಿಧಿಸಿದರೂ ಸಹ ಅದು ತೀರ ಕಡಿಮೆಯೆ ಸರಿ, ದೇಶದ ರಾಜನಾದವನು ಅಪರಾಧಿಗಳಿಗೆ ಶಿಕ್ಷೆ ವಿಧಿಸಲು ದಂಡನಾಯಕನಂತೆ ವರ್ತಿಸುವುದು ರಾಜಧರ್ಮ. ಆದರೆ ರಾಜನೇ ಕೊಲೆ ಪಾತಕನಾದರೆ ಶಿಕ್ಷೆಯನ್ನು ವಿಧಿಸುವವರು ಯಾರು? ಆ ದೇವರೆ ನಾನು ಮಾಡಿದ ಅಪರಾಧಕ್ಕೆ ತಕ್ಕ ಶಿಕ್ಷೆ ವಿಧಿಸಿಬಿಟ್ಟಿದ್ದಾನೆ. ಆದರೆ ಈ ಶಿಕ್ಷೆಯೂ ಸಹ ನನಗೆ ತೀರ ಕಡಿಮೆಯೇ ಆಗಿದೆ. ಯಾವ ಕಟುಕನೂ ಸಹ ಮಾಡಲಾರದ ಅತ್ಯಂತ ಹೃದಯಹೀನ ಕೃತ್ಯವನ್ನು ನಾನು ಮಾಡಿ ಬಿಟ್ಟಿದ್ದೇನೆ. ನಾನೇ ನಿರಂತರ ರಾಜನಾಗಬೇಕು. ಸಿಂಹಾಸನಾಧೀಶನಾಗಬೇಕು ಎಂಬ ದುರಾಶಾಪೀಡಿತನಾದ ನಾನು ನನ್ನ ಇಡೀ ರಾಜವಂಶಕ್ಕೆ ಮಸಿ ಬಳಿದುಬಿಟ್ಟೆ...... ನನ್ನ ಹಿರಿಯರಾದ ಶೂರ ಸಿಂಧೂಲರಾಜರು ಬಹು ಧರ್ಮದಿಂದ ರಾಜ್ಯಭಾರ ಮಾಡಿ ಮಹಾಕೀರ್ತಿವಂತರಾಗಿದ್ದ, ಅದರಂತೆ ನನ್ನ ಅಣ್ಣರಾದ ಸಿಂಧೂಲ ರಾಜನು ನ್ಯಾಯ ನೀತಿ ಧರ್ಮ- ಇತ್ಯಾದಿಗಳಿಂದ ಪ್ರಜೆಗಳಿಗೆ ಎಲ್ಲ ರೀತಿಯಲ್ಲೂ ಸಂತೋಷ ಪಡಿಸುತ್ತಾ ಸದಾ ಕಾಲವು ಪ್ರಜೆಗಳ

ಹಿತಚಿಂತಕರಾಗಿ ದೇಶಕ್ಕೆ ತಂದೆಯೋಪಾದಿಯಲ್ಲಿ ಆದರ್ಶರಾಜರಾಗಿ ಮೇರು ಕೀರ್ತಿಗಳಿಸಿದ್ದರು....... ಆದರೆ ನಾನು ಮಾತ್ರ ಈ ರತ್ನಸಿಂಹಾಸನದಲ್ಲಿ ಕುಳಿತುಕೊಳ್ಳಲು ಎಳ್ಳಷ್ಟು ಯೋಗ್ಯನಲ್ಲ. ನಾನು ಅಧಿಕಾರದಾಹದಿಂದ ದುರಾಶಾ ಪೀಡಿತನಾಗಿ ಎಲ್ಲ ರೀತಿಯಲ್ಲೂ ವಂಚಿತನಾಗಿ ಬಿಟ್ಟೆ. ನಾನು ಮಾಡಿದ ಭೀಕರ ಪಾಪಕ್ಕೆ ಚೆನ್ನಾಗಿ ಕಾದ ಕಬ್ಬಿಣದ ಸಲಾಕಿಯಿಂದ ಈ ನನ್ನ ಪರಮ ಪಾಪಿ ದೇಹವನ್ನು ಚುಚ್ಚಿ ಹಿಂಸಿಸಿದರೂ ಸಹ ಆ ಶಿಕ್ಷೆಯೂ ಸಹ ನನಗೆ ತೀರ ಕಡಮೆಯೇ ಸರಿ" ಎಂದು ಆ ರಾತ್ರಿ ಎಲ್ಲಾ ತನ್ನನ್ನು ತಾನೇ ಹೀಯಾಳಿಸಿ ಕೊಳ್ಳುತ್ತಾ ಅತ್ತು ಅತ್ತು ಸೊರಗಿದ್ದನು.

ಹಾಗೆ ಮನೋವೇದನೆಯಿಂದ ಬಹು ಬಾಧಿತನಾಗಿ ಗೋಳಿಡುತ್ತಿದ್ದ ಮುಂಜರಾಜನಿಗೆ ತಾನು ಮಾಡಿದ ಹೇಯವಾದ ದುಷ್ಕರ್ಮಗಳೇ ತಿರುಗುಬಾಣವಾಯಿತು.

ವೈದ್ಯನು ದೇಹದ ಗಾಯವನ್ನು ಗುಣಪಡಿಸಬಹುದು. ಆದರೆ ಮನಸ್ಸಿಗೆ ನಾಟಿದ ಮನೋವೇದನೆಯನ್ನು ಯಾವ ವೈದ್ಯನೂ ಗುಣ ಪಡಿಸಲಾರ. ವೇದನೆ......, ಮನೋ ವೇದನಿಗೆ ಮಹಾದೇವನಿಂದಲೂ ಮದ್ದಿಲ್ಲ ಎಂಬಂತೆ ಮುಂಜರಾಜನ ಸ್ಥಿತಿ ತೀರ ಹದಗೆಟ್ಟಿತ್ತು.

"ಅಯ್ಯೋ. ಆಜೀವಪರ್ಯಂತರ ನಾನೇ ಸಿಂಹಾಸನಾಧೀಶನಾಗಿ ಮೆರೆಯುತ್ತೇನೆ ಎಂದು ಅಹಂಕಾರ ಪಟ್ಟು. ಆದರೆ ಕೇವಲ ಎರಡೆ ವರ್ಷಗಳಲ್ಲಿ ನಾನು ಮಾಡಿದ ಪಾಪಕ್ಕೆ ತಕ್ಕ ಶಿಕ್ಷೆ ಆ ದೇವರೆ ನನಗೆ ವಿಧಿಸಿ ಬಿಟ್ಟ. ನಾನಿನ್ನು ಬದುಕಲಾರೆ. ನನಗಿನ್ನು ಬದುಕುಬೇಡ. ಈ ಪಾಪಿ ದೇಹವನ್ನು ತ್ಯಜಿಸಿದರೆ ಸಾಕು" ಎಂದು ನಾನಾರೀತಿಯಲ್ಲಿ ಪರಿತಪಿಸುತ್ತ ರೋಧಿಸುತ್ತಿದ್ದನು. ತನಗೆ ಮರಣವು ಸಮೀಪಿಸುತ್ತಿದೆಯೋ ಎಂಬಂತೆ ಆಕ್ರಂದನ ಮಾಡುತ್ತ ಗೋಳಿಡುತ್ತಿದ್ದನು.

ಅವನ ಸತೀಮಣಿಯಾದ ಭಾನುಮತಿಯೂ ಸಹ ಪತಿಯ ಆ ರೀತಿಯ ರೋಗ ಬಾಧೆಗೆ ದುಃಖಿಸುತ್ತಿದ್ದಳು.

ರಾಜಧೂತನ ಮೂಲಕ ಅಚಲಸಿಂಹನನ್ನು ಕರೆಸಿಕೊಂಡ.

ಮುಂಜರಾಜನ ಕರೆಗೆ ಧಾವಿಸಿಬಂದ ಅಚಲಸಿಂಹನು ಬಹುರೋಗಬಾಧೆಯಿಂದ ಬಾಧಿತನಾಗಿದ್ದ ಮುಂಜುರಾಜನನ್ನು ವಿನಯಿಸಿ ಮಾತನಾಡುತ್ತ "ಮಹಾರಾಜರಿಗೆ ಜಯವಾಗಲಿ" ಎಂದು ತಲೆಬಾಗಿನಿಂತ.

ಆಗ ಅಚಲಸಿಂಹನಾಡಿದ ಮಾತಿಗೆ ಒಮ್ಮೆಯೆ ನೂರಾರು ಚೂಪಾದ ಚೂರಿಯಿಂದ ಅವನ ದೇಹವನ್ನು ಛಿದ್ರಗೊಳಿಸಿದಂತಾಗಿತ್ತು.

"ಅಯ್ಯೋ ಅಚಲಸಿಂಹರೇ, ಈಗ ನೀವು ನನ್ನನ್ನು ಪರಿಹಾಸ ಮಾಡುತ್ತಿರುವಿರಾ? ಹಾಗೆ ನನ್ನನ್ನು ಪರಿಹಾಸ್ಯ ಮಾಡದಿರಿ...... ಇನ್ನು ಮುಂದೆ ನನ್ನನ್ನು ಮಹಾರಾಜ ಎಂದು ಕರೆಯಬೇಡಿ. ನಾನೊಬ್ಬ ಧರ್ಮಭ್ರಷ್ಟ, ನೀತಿ ಭ್ರಷ್ಟ ಹೃದಯಹೀನನಾದ ಕಟುಕ ನಾನು. ದೇವರಿಗೆ ಸಮಾನನಾದ ನನ್ನ ಅಣ್ಣನ ಮಗನನ್ನೇ ಕೊಲ್ಲಿಸಲು ಪ್ರಚೋದಿಸಿದ ಪರಮ ಪಾಪಿ..... ನಾನು. ನೀವು ಆ ಭೋಜರಾಜನನ್ನು

ಶಿರಶ್ಛೇದನ ಮಾಡಿದಂತೆ ಈಗ ನನ್ನನ್ನು ಸಹ ಅದೇರೀತಿ ಶಿರಶ್ಛೇದನ ಮಾಡಿಬಿಡಿ... ಈ ಹಾಳು ದೇಹವನ್ನು ನಿಮ್ಮ ಕೈಯಿಂದಲೇ ಛಿದ್ರ ಛಿದ್ರಗೊಳಿಸಿ. ನನಗಿನ್ನು ಬದುಕುಬೇಡ. ಈ ರೋಗಬಾಧೆಯನ್ನು ತಡೆದುಕೊಳ್ಳಲಾಗುತ್ತಿಲ್ಲ. ನನಗೆ, ಪುಣ್ಯವಶಾತ್ ರಾಜವಂಶದಲ್ಲಿ ಜನಿಸಿದ ನಾನು ರಾಜವಂಶವನ್ನೇ ನಿರ್ಮೂಲ ಮಾಡಲು ಹೊರಟ ರಾಜದ್ರೋಹಿ. ಆ ಭೋಜನನ್ನು ಮುಗಿಸಿದಂತೆ ನೀವು ನನ್ನನ್ನು ಮುಗಿಸಿಬಿಡಿ" ಎಂದು ಗಟ್ಟಿಯಾಗಿ ಗೋಳಿಟ್ಟು ನುಡಿದನು.

ಆಗ ಅಚಲಸಿಂಹನು ತನ್ನ ಮನಸ್ಸಿನಲ್ಲಿಯೇ ನುಡಿದು ಕೊಳ್ಳುತ್ತಾ "ಹೌದು..... ಇದೀಗ ಮುಂಜರಾಜನಿಗೆ ಜ್ಞಾನೋದಯವಾಗಿದೆ. ಇನ್ನು ಇವರನ್ನು ಹೆಚ್ಚಿಗೆ ಕಾಡಿಸಿನೋಯಿಸಬಾರದು" ಎಂದು.

- ಮಾತನಾಡಲು ಸಹ ಅಸಕ್ತನಾದ ಮುಂಜರಾಜನು ಗದ್ಗಸ್ವರದಿಂದ ಮಾತನಾಡುತ್ತಾ,

"ಅಚಲಸಿಂಹರೆ!"

"ಹೇಳಿ ಮಹಾಪ್ರಭು"

"ಅಯ್ಯೋ..... ನನ್ನನ್ನು ಮತ್ತೆ ಮತ್ತೆ ಮಹಾರಾಜ, ಮಹಾಪ್ರಭು ಎಂದು ಸಂಭೋದಿಸದಿರಿ. ನಾನೊಬ್ಬ ವಿಶ್ವಾಸಘಾತಕ. ಕೊಲೆಪಾತಕ...,..." ಎಂದು ಅನೇಕ ರೀತಿಯಲ್ಲಿ ತನ್ನನ್ನು ತಾನೇ ನಿಂದಿಸಿಕೊಳ್ಳುತ್ತ ನುಡಿದ. "ಅಚಲಸಿಂಹರೆ ಬಹುಶಹ ನಾನಿನ್ನು ಬದುಕಲಾರೆ. ನಾನು ಸಾಯುವ ಮುನ್ನ ಒಂದೇ ಒಂದು ವಿಚಾರವನ್ನು ಕೇಳಬಯಸುತ್ತೇನೆ"

"ಕೇಳಿ........."

"ನೀನು ಭೋಜರಾಜನನ್ನು ಯಮಸದನಕ್ಕೆ ಕಳುಹಿಸುವ ವೇಳೆಗೆ ಬಲಿಯಾದ ಆ ಮಹಾ ಜ್ಞಾನಿ ಭೋಜನು ತಾನು ಸಾಯುವಾಗ ಕಡೆಯದಾಗಿ ಏನಾದರೂ ಹೇಳಿದನೆ....? ಆ ರೀತಿ ಹೇಳಿದ್ದೇ ಆದರೆ ಅವನು ಏನು ಹೇಳಿದ ಎಂಬುದನ್ನು ತಿಳಿಸುವೆಯಾ ಅಚಲಸಿಂಹ"

"ತಿಳಿಸುತ್ತೇನೆ.... ತಿಳಿಸುವುದೇನು? ಆ ಭೋಜರಾಜನು ತಾನು ಮರಣವನ್ನಪ್ಪುವ ವೇಳೆಯಲ್ಲಿ ತನ್ನ ರಕ್ತಾಕ್ಷರದಿಂದ ಹೀಗೆ ಬರೆದು ಕೊಟ್ಟಿದ್ದಾನೆ. ಇದನ್ನು ಆ ದಿನವೇ ನಿಮಗೆ ಕೊಡೋಣವೆಂದಿದ್ದೆ - ಆದರೆ ಅಂದು ನಿಮ್ಮ......"

"ತಿಳಿಯಿತು - ತಿಳಿಯಿತು - ಆದಿನ ನನ್ನ ರಾಜ್ಯದಾಹದ ಅಮಲಿನಲ್ಲಿ ಭೋಜನು ಬರೆದುಕೊಟ್ಟ ಚೀಟಿಯನ್ನು ನನ್ನ ಕೈಗಿತ್ತಿದ್ದರೆ ನಾನು ಅದನ್ನು ನೋಡದೆ ಹರಿದು ಬಿಸಾಡಿ ಬಿಡುತ್ತಿದ್ದೆನು..... ಪುಣ್ಯವಶಾತ್ ಅದು ನಿಮ್ಮ ಬಳಿ ಇರುವುದರಿಂದ ಆ ಒಕ್ಕಣೆ ಇನ್ನೂ ಹಸಿರಾಗಿಯೇ ಇದೆ. ನಿಮ್ಮ ಬುದ್ಧಿವಂತಿಕೆಯಿಂದಲೇ ಆ ಮರಣಪತ್ರ ಇನ್ನೂ ಉಳಿದಿದೆ. ಅದು ನನ್ನ ಭಾಗ್ಯ" - ಎಂದು ನುಡಿದನು.

ಆಗ ಅಚಲಸಿಂಹನು ತನ್ನ ಮನದಲ್ಲೆ ಹೇಳಿಕೊಳ್ಳುತ್ತ "ಒಕ್ಕಣೆಯೂ ಇದೆ. ಆ ಕಾಗದವನ್ನು ಬರೆದುಕೊಟ್ಟು ಆದರ್ಶ ವ್ಯಕ್ತಿ ಮಹಾಜ್ಞಾನಿಯಾದ ಭೋಜರಾಜನೂ ಇದ್ದಾನೆ. ಎಂದುಕೊಂಡನು. "ಅಚಲಸಿಂಹರೆ ಆ ಒಕ್ಕಣೆಯನ್ನು ಬೇಗ ಓದಿ ಹೇಳಿ.... ಅದನ್ನು ಕೇಳಿ ಸಂತೋಷದಿಂದ ಮರಣವನ್ನಪ್ಪುತ್ತೇನೆ" ಎಂದು ಅಂಗಲಾಚಿ ನುಡಿದನು.

ಆಗ ಅಚಲ ಸಿಂಹನು ಭೋಜರಾಜನು ತನ್ನ ರಕ್ತಾಕ್ಷರದಿಂದ ಬರೆದಿದ್ದ ಶ್ಲೋಕ ಮತ್ತು ಶ್ಲೋಕಾರ್ಥವನ್ನು ಓದಿ ಹೇಳಿದನು.

ಮಹಾಜ್ಞಾನಿಯಾದ ಕಿಶೋರ ಭೋಜನ ಬಹು ಅರ್ಥಪೂರ್ಣವಾದ ಶ್ಲೋಕವನ್ನು ಕೇಳಿ ಮತ್ತಷ್ಟು ದುಃಖಿಸಿದ್ದನು. "ಆಹಾ! ಭೋಜನ ಆ ಎಳೆಯ ವಯಸ್ಸಿನಲ್ಲೇ ಅದೆಂತಹ ಜ್ಞಾನ ಸುಜ್ಞಾನವಂತನಾಗಿದ್ದ! ಅಂತಹ ಪಾಂಡಿತ್ಯ ಭೂಪತಿಯನ್ನು ಅನ್ಯಾಯವಾಗಿ ಕೊಲ್ಲಿಸಿ ಬಿಟ್ಟೆನಲ್ಲ, ನಾನಿನ್ನು ಬದುಕಿರಬಾರದು. ನಾನೀಗ ಸಾಯುವುದೇ ನಾನು ಮಾಡಿರುವ ಪಾಪಕ್ಕೆ ತಕ್ಕ ಪ್ರಾಯಶ್ಚಿತ" ಎಂದು ಅಲ್ಲಿಯೇ ಇದ್ದ ಕತ್ತಿಯಿಂದ ತನ್ನನ್ನು ತಾನೇ ಇರಿದುಕೊಳ್ಳಲು ಮುಂದಾದ. ಆಗ ಅಲ್ಲಿಯೇ ಇದ್ದ ಅಚಲಸಿಂಹನು ಮಿಂಚಿನ ಭರದಲ್ಲಿ ಕತ್ತಿಯನ್ನು ಮುಂಜರಾಜನ ಕೈಯಿಂದ ಬರಸೆಳೆದು ಕಿತ್ತು ಕೊಂಡುಬಿಟ್ಟನು. ನಂತರ, ಭೋಜರಾಜನು ಜೀವಂತವಾಗಿರುವ ಸುವಾರ್ತೆಯನ್ನು ತಿಳಿಸುತ್ತಾ "ಪ್ರಭುಗಳೇ, ತಾವು ಭೋಜರಾಜರ ವಿಷಯದಲ್ಲಿ ಚಿಂತಿಸದಿರಿ. ಆತನು ಬದುಕಿದ್ದಾನೆ!" ಎಂದು ಆದಿನ ನಡೆದ ವಿಷಯವನ್ನು ಚಾಚುತಪ್ಪದೆ ವಿವರಿಸಿ ಹೇಳಿದನು.

ಆಗ ಮುಂಜರಾಜನಿಗೆ ಒಣಗಿದ ಮರ ಮತ್ತೆ ಚಿಗುರಿದಂತಾಯಿತು. ಹೃದಯಕ್ಕೆ ಅಮೃತಧಾರೆ ಎರೆದಂತಾಯಿತು. ಉಡುಗಿ ಹೋಗಿದ್ದ ಚೈತನ್ಯ ಮತ್ತೆ ಮರುಕಳಿಸಿತ್ತು. ಅಚಲಸಿಂಹನನ್ನು ಬಗೆಬಗೆಯಾಗಿ ಸ್ತುತಿಸಿ ಕೊಂಡಾಡುತ್ತ "ಅಚಲಸಿಂಹರೆ..... ನಿಮ್ಮ ಪಾತ್ರವು ಶ್ರೀರಾಮನಿಗೆ ಅನವರತವೂ ಜೊತೆಗೂಡಿ ಸಹಕರಿಸಿದ ಲಕ್ಷ್ಮಣನ ಪಾತ್ರದಂತಾಗಿದೆ. ಈಗ ನಾನು ಭೋಜರಾಜನನ್ನು ನೋಡಬೇಕು. ಅವನು ಚಿಕ್ಕವನಾದರೂ ಚಿಂತೆಯಿಲ್ಲ - ಅವನಲ್ಲಿ ದೀರ್ಘವಾಗಿ ಕ್ಷಮೆಯಾಚಿಸಬೇಕು..... ಬೇಗ ಭೋಜರಾಜನನ್ನು ಕರೆದುಕೊಂಡು ಬನ್ನಿ" ಎಂದು ಅಂಗಲಾಚಿ ನುಡಿದನು.

ಆಗ ಅತ್ತ ಮರೆಯಾಗಿರಿಸಿದ್ದ ಭೋಜನನ್ನು ಉದ್ದೇಶಿಸಿ ನುಡಿದ ಅಚಲಸಿಂಹನು ಮುಂಜರಾಜನಿಗೆ ಹೇಳುತ್ತ.......... "ಮಹಾಪ್ರಭು ಆ ಭೋಜರಾಜರನ್ನು ತಾವೇ ಕರೆಯಿರಿ ಬರುತ್ತಾರೆ" ಎಂದನು. ತಕ್ಷಣ ಮುಂಜರಾಜನು ಅಂತಃಕರಣದ ದನಿಯಿಂದ "ಭೋಜರಾಜ ಬಾರಪ್ಪ..... ಈ ನಿನ್ನ ಪರಮಪಾಪಿ ಚಿಕ್ಕಪ್ಪನನ್ನ ಕ್ಷಮಿಸು. ಬಾರಪ್ಪಾ" ಎಂದು ಕರೆಯಿತ್ತನು.

ಮುಂಜರಾಜನ ಕರೆಗೆ ಬಹುತೇಜಸ್ಸಿಯಾದ ಭೋಜನು ಏನೊಂದು ಪ್ರಮಾದ ಜರುಗಿಲ್ಲವೋ ಎಂಬಂತೆ ಸಹಜ ರೀತಿಯಲ್ಲಿಯೇ ತನ್ನ ಚಿಕ್ಕಪ್ಪನ ಬಳಿಗೆ ಬಂದು ಕಾಲು ಮುಟ್ಟಿ ನಮಸ್ಕರಿಸುತ್ತ "ಚಿಕ್ಕಪ್ಪ" ಎಂದು ಅಂತಃಕರಣ ತುಂಬಿದ ವಿನಯಭಾವದಿಂದ ನುಡಿದ ಪ್ರಜ್ಞಾಗುಣವುಳ್ಳವನಾದ ಭೋಜರಾಜ.

ಆಗ ಮುಂಜರಾಜನು ಉನ್ಮಾದ ಸಂತೋಷದಿಂದ ಭೋಜನನ್ನು ಆಲಿಂಗಿಸಿಕೊಂಡು ಮೈದಡವುತ್ತಾ "ಭೋಜರಾಜ"! ಈ ಪಾಪಿಯಾದ ಚಿಕ್ಕಪ್ಪನನ್ನು ಕ್ಷಮಿಸಬಲ್ಲೆಯಾ?" ಎಂದು ವಿನಮ್ರವಾಗಿ ಬೇಡಿಕೊಂಡನು.

"ಹಾಗನ್ನಬೇಡಿ ಚಿಕ್ಕಪ್ಪ, ಎಲ್ಲ ದೈವಲೀಲೆ. ನೀವು ಹಾಗೆ ಮಾಡಿದ್ದರಿಂದ ನಾನು ಎರಡು ವರ್ಷಗಳ ಕಾಲ ಏಕಾಂತದಲ್ಲಿದ್ದುಕೊಂಡು ರಾಜ್ಯಭಾರ ಮಾಡಲು ಬೇಕಾದ ಅನೇಕ ಅನುಭವಗಳನ್ನು ಪ್ರತ್ಯಕ್ಷವಾಗಿ ಕಂಡರಿತೆನು. ನೀವು ಕೊಟ್ಟ ಶಿಕ್ಷೆಯೇ ನನ್ನ ಪಾಲಿಗೆ ಶ್ರೀ ರಕ್ಷೆಯಾಯಿತು. ಅಷ್ಟೇ ಅಲ್ಲದೆ, ನನ್ನ ಪಾಂಡಿತ್ಯ ವಿದ್ಯೆಯನ್ನು ಮತ್ತಷ್ಟು ಶ್ರೀಮಂತಗೊಳಿಸಲು ಆ ಅಜ್ಞಾತವಾಸದ ಒಂದೊಂದು ದಿನವೂ ಒಂದೊಂದು ಘಳಿಗೆಯೂ ಪರಮ ಪಾವನವಾಗಿತ್ತು" ಎಂದನು.

"ಭೋಜ, ನೀನು ಸಾಮಾನ್ಯನಲ್ಲ. ಮಹಾರಾಜರಿಗೆ ಯೋಗ್ಯವಾದ ಸಕಲ ಗುಣಗಳು ನಿನ್ನಲ್ಲಿವೆ. ಬಹು ಮೇಧಾವಿ" ಎಂದು ನಾನಾರೀತಿಯಲ್ಲಿ ಬಣ್ಣಿಸಿ, ಹೊಗಳಿ ನುಡಿದನು ಮುಂಜರಾಜ.

ಅಷ್ಟರಲ್ಲೇ ಮಹಾಮಂತ್ರಿಗಳು, ರಾಜ ಪುರೋಹಿತರು ಸಹ ಭೋಜರಾಜ ಬಂದಿರುವುದನ್ನು ತಿಳಿದು ಅತಿ ಸಂತೋಷಚಿತ್ತರಾಗಿ ಅಲ್ಲಿಗೆ ಬಂದರು.

ಪೂಜ್ಯರಾದ ಆ ಇಬ್ಬರಿಗೂ ಕಾಲು ಮುಟ್ಟಿ ಸಾಷ್ಟಾಂಗ ನಮಸ್ಕಾರ ಮಾಡಿದನು ಭೋಜರಾಜ.

ರಾಜಪುರೋಹಿತರು ಮತ್ತು ಮಹಾಮಂತ್ರಿಗಳು ಭೋಜನನ್ನು ಬಹು ಆದರದಿಂದ ಬರಮಾಡಿಕೊಂಡರು. ವಿನಯಪೂರ್ಣನಾದ ಅವನನ್ನು ಮುಕ್ತಕಂಠದಿಂದ ಹರಸಿ ಹಾರೈಸಿದರು.

ಹದಿನೆಂಟು ವರ್ಷಕ್ಕೆ ಕಾಲಿಡುತ್ತಿರುವ ಅವನಿಗೆ ಪಟ್ಟಾಭಿಷೇಕ ಮಾಡಲು ಮಹಾಮಂತ್ರಿಗಳು ಉದ್ದೇಶ ಉಳ್ಳವರಾಗಿ..... ಅದಕ್ಕಾಗಿ ಸಕಲ ಸಿದ್ಧತೆಯನ್ನು ಮಾಡಲು ಯೋಜನೆಯನ್ನು ರೂಪಿಸುವುದರ ಬಗ್ಗೆ ಚರ್ಚಿಸಿದರು.

# ರಾಜಕುಮಾರ ಭೋಜರಾಜನು ಪ್ರಜೆಗಳಿಗೆ ದರ್ಶನ ಕೊಟ್ಟ ವೈಖರಿ

ವೈಭವದಲ್ಲಿ ಇಂದ್ರ - ಕುಬೇರರನ್ನು ಮೀರಿಸಿದ ಮಹಾವೈಭವದಿಂದ ಮೆರೆಯುತ್ತಿದ್ದ ಧಾರಾನಗರವು ಮುಂಜರಾಜನ ದುರಾಡಳಿತದಿಂದ ರಾಹು ಹಿಡಿದ ಸೂರ್ಯನಂತಾಗಿತ್ತು.

ಆದರೆ ಅಜ್ಞಾತವಾಸದಲ್ಲಿದ್ದ ಭೋಜರಾಜನು ತನ್ನ ದಿವ್ಯ ತೇಜಸ್ಸಿನಿಂದ ಅರಮನೆಯನ್ನು ಕುರಿತು ಬರುತ್ತಿದ್ದಂತೆಯೇ ಮತ್ತೆ ಆ ಧಾರಾನಗರವು ಗ್ರಹಣ ಬಿಟ್ಟ ಚಂದ್ರನಂತೆಯೂ, ಹಿಮದ ಚಳಿಯಿಂದ ತನ್ನಂದವನ್ನು ಮುಚ್ಚಿಕೊಂಡಿದ್ದ ಕಮಲ ಪುಷ್ಪವು ಬೆಳಗಿನ ಸೂರ್ಯ ಕಿರಣ ಕಾಂತಿಯ ತೇಜಸ್ಸಿನಿಂದ ಅರಳಿ ಪ್ರಕಾಶಿಸುವಂತೆ ಆ ಸಿರಿ ಸೌಂದರ್ಯ ನಗರವು ಪುನಹ ಅತಿಶಯವಾದ ಕಾಂತಿಯಿಂದ ದೇದೀಪ್ಯಮಾನವಾಗಿ ಪ್ರಜ್ವಲಿಸುತ್ತಿತ್ತು. ದೇವಲೋಕದ ಅಮರಾವತಿ ಪಟ್ಟಣದಂತೆ ತನ್ನೆಲ್ಲ ಸೌಂದರ್ಯದಿಂದ ಆ ಭೋಜನಗರಿಯು ಅತಿಯಾದ ಸಂಭ್ರಮದಿಂದ ಮೆರೆಯುತ್ತಿತ್ತು.

ರಾಜಕುಮಾರ ಭೋಜನು ಅರಮನೆಗೆ ಬಂದ ಸುವಾರ್ತೆ ವಿದ್ಯುತ್‌ವೇಗದಲ್ಲಿ ನಗರದಾದ್ಯಂತ ಹರಡಿತ್ತು. ಆಗ ಆ ಮಹಾತೇಜಸ್ವಿಯಾದ ರಾಜಕುಮಾರನನ್ನು ಕಾಣಲು ಅಸಂಖ್ಯ ಪ್ರಜೆಗಳು, ಹೆಂಗಸರು, ಗಂಡಸರು, ಮಕ್ಕಳಾದಿಯಾಗಿ, ಎಲ್ಲರೂ ಅತ್ಯುತ್ಸಾಹದಿಂದ ಅರಮನೆಯ ವಿಶಾಲ ಆವರಣದಲ್ಲಿ ಕಿಕ್ಕಿರಿದು ನೆರೆದರು.

ಎಂದಿಲ್ಲದ ಹರ್ಷತೆಯಿಂದ ಜಯಕಾರ ಹಾಕುತ್ತಾ ..........

"ಭೋಜರಾಜರಿಗೆ ಜಯವಾಗಲಿ! ಪ್ರಜಾಪ್ರೇಮಿ ಭೋಜರಾಜರಿಗೆ ಜಯವಾಗಲಿ! ಧರ್ಮದುರಂಧರ ಭೋಜರಾಜರಿಗೆ ಜಯವಾಗಲಿ! ಭೋಜರಾಜರು ನಮಗೆ ದರ್ಶನ ಕೊಡಬೇಕು!" - ಹೀಗೆ ಒಕ್ಕೊರಲಿನಿಂದ ಮುಗಿಲು ಮುಟ್ಟುವಂತೆ ಜಯಕಾರ ಮಾಡಿದರು.

- ಆ ರೀತಿಯಾಗಿ ಅಸಂಖ್ಯೆ ಪ್ರಜೆಗಳು ವಿಶಾಲ ಅರಮನೆ ಆವರಣದಲ್ಲಿ ಅಮಿತೋತ್ಸಾಹದಿಂದ ಜಯಕಾರ ಹಾಕುತ್ತಿರುವುದನ್ನು ಗಮನಿಸಿದ ಮಹಾಮಂತ್ರಿಗಳು - ರಾಜಕುಲಗುರುಗಳು ಭೋಜರಾಜರಿಗೆ ವಿಷಯವನ್ನು ತಿಳಿಸಲು ಆತನ ಏಕಾಂತ ಮಂದಿರಕ್ಕೆ ಜೊತೆಗೂಡಿ ಬಂದರು.

ಆ ಸಮಯದಲ್ಲಿ ರಾಜಕುಮಾರ ಭೋಜರಾಜನು ಸಹ ರತ್ನಖಚಿತ ಪೀಠದಲ್ಲಿ ಕುಳಿತು ದೇಶದ ಉತ್ತಮ ಭವಿಷ್ಯದ ಕುರಿತು ಯೋಚಿಸುತ್ತಿದ್ದನು.

ಆ ಏಕಾಂತ ಭವನವನ್ನು ಪ್ರವೇಶಿಸಿದ ಮಹಾಮಂತ್ರಿಗಳು, ರಾಜ ಕುಲಗುರುಗಳು "ರಾಜಕುಮಾರ ಭೋಜ ನಿನಗೆ ಶ್ರೆಯೋಭಿವೃದ್ಧಿ ರಸ್ತು" - ಎಂದು ಶಿರಬಾಗಿ ವಂದಿಸಿದರು.

ಆಗ ಭೋಜರಾಜನು ಆ ಇಬ್ಬರನ್ನು ಗೌರವದಿಂದ ವಂದಿಸಿ, "ಪೂಜ್ಯರೆ....... ಬನ್ನೀ, ಮಹಾಮಂತ್ರಿಗಳೇ ಬನ್ನಿ...... ಈ ಪೀಠದಲ್ಲಿ ಕುಳಿತು ಕೊಳ್ಳಿ" ಎಂದು ಮುಂದಿನ ಸಾಲಿನಲ್ಲಿದ್ದ ಆಸನವನ್ನು ತೋರಿಸುತ್ತಾ ಹೇಳಿದ.

ಅಲ್ಲಿಯೇ ಭೋಜರಾಜನ ಎದುರಾಗಿಯೇ ಇದ್ದ ರತ್ನಖಚಿತ ಪೀಠದಲ್ಲಿ ಅಲಂಕರಿಸಿದರು. ವಿನಯಾಭರಣ ಭೂಷಣ ಪ್ರಿಯನಾದ ಭೋಜರಾಜನೇ ಪ್ರಶ್ನಿಸಿ ಸಂಭಾಷಿಸುತ್ತ,

"ಏನಾದರೂ ವಿಶೇಷವಾದ ಸಮಾಚಾರವಿದೆಯೆ?" - ಎಂದು ಮಂದಸ್ಮಿತನಾಗಿ ಕೇಳಿದನು.

"ಭೋಜರಾಜನೆ........ ಈಗ ಪ್ರಜೆಗಳು ನಿನ್ನ ದರ್ಶನಕ್ಕಾಗಿ ಅತಿಯಾದ ಆಸೆಯಿಂದ ಅರಮನೆಯ ಆವರಣದಲ್ಲಿ ನೆರೆದಿದ್ದಾರೆ. ಅನೇಕ ರೀತಿಯಲ್ಲಿ ನಿನಗೆ ಜಯಕಾರ ಹಾಕುತ್ತಿದ್ದಾರೆ" ಎಂದು ಮಹಾಮಂತ್ರಿಯು ಹೇಳುತ್ತಿದ್ದಂತೆ ರಾಜ ಕುಲಗುರುಗಳು ಸಹ ಮುಂದುವರಿದು ನುಡಿಯುತ್ತ "ಈ ಸಮಯದಲ್ಲಿ ಪ್ರಜೆಗಳಿಗೆ ರಾಜದರ್ಶನ ನೀಡುವುದು ಪರಮ ಸೂಕ್ತವಾಗಿದೆ" ಎಂದರು.

"ಒಳ್ಳೇದು..... ತಮ್ಮ ಸಲಹೆಯಂತೆ ಪ್ರಜೆಗಳಿಗೆ ದರ್ಶನ ಕೊಡಲು ಬರುತ್ತೇನೆ. ಅದಕ್ಕೆ ತಕ್ಕ ಏರ್ಪಾಡು ಮಾಡಿಸಿರಿ" ಎಂದು ಗೌರವವನ್ನು ಸೂಸುತ್ತಾ ನುಡಿದ ಭೋಜರಾಜ.

ಇಬ್ಬರೂ ಅಲ್ಲಿಂದ ನಿರ್ಗಮಿಸಿದರು.

ಆಗ ಏಕಾಂತದಲ್ಲಿದ್ದ ಭೋಜನು ತನ್ನಲ್ಲಿ ತಾನೇ ತುಟಿನಗೆ ಬೀರಿ ಮಾತನಾಡಿಕೊಳ್ಳುತ್ತಾ" ನಾನು ಇದುವರೆವಿಗೂ ಮಾರುವೇಷದಲ್ಲಿ ಪ್ರತಿನಿತ್ಯ ಜನಗಳ ಗುಂಪಿನಲ್ಲೇ ಇದ್ದುಕೊಂಡು..... ಅವರ ಕಷ್ಟನಷ್ಟ ಜನ, ಜೀವನವನ್ನು ಅರಿತವನೇ ಆಗಿದ್ದೆ..... ಆದಾಗ್ಯೂ ಸಹ ಮಾರುವೇಷಧಾರಿಯಾದ ನನ್ನನ್ನು ಯಾರೊಬ್ಬರೂ ಪತ್ತೆ ಹಚ್ಚಲಿಲ್ಲ" ಎಂದು ತನ್ನ ಚಾಣಾಕ್ಷತನದ ಅಜ್ಞಾತದಿನಗಳ ನೆನಪಿನ ಅನುಭವವನ್ನು ಮನಸ್ಸಿಗೆ ತಂದುಕೊಂಡು ವಿಸ್ಮಿತನಾಗಿದ್ದನು. ನಂತರ ತಡಮಾಡದೆ ಭೋಜರಾಜನು ತನ್ನ ರಾಜಾರ್ಹತೆಗೆ ತಕ್ಕಂತೆ ವಸ್ತ್ರಾಭರಣ ಭೂಷಿತನಾಗಿ- ರಾಜ ಗಾಂಭೀರ್ಯದಿಂದ ರಾಜ ಪರಿವಾರದೊಡನೆ ಬಿಜಯಿಸಿದರು.

ರಾಜಕುಮಾರನು ಬರುತ್ತಿದ್ದುದನ್ನು ಬಹು ಸೂಕ್ಷ್ಮವಾಗಿ ಗಮನಿಸಿದ - ಆ ರಾಜಮಾರ್ಗದ ಇಕ್ಕೆಡೆಯಲ್ಲೂ ಅಲ್ಲಲ್ಲೆ ನಿಂತಿದ್ದ ಕರ್ತವ್ಯನಿರತ ಆಯುಧ ಧಾರಿಗಳಾದ ರಾಜಸೇವಕರು......"ರಾಜಕುಮಾರರು ಬರುತ್ತಿದ್ದಾರೆ..... ಎಚ್ಚರಿಕೆ...... ರಾಜಕುಮಾರ ಭೋಜರಾಜ ಬರುತ್ತಿದ್ದಾರೆ........ ಎಚ್ಚರಿಕೆ" ಎಂದು ಒಬ್ಬರಿಗೊಬ್ಬರು ಸೂಚಿಸಿ ಹೇಳುತ್ತಿದ್ದರು. ಭೋಜರಾಜನು ತನ್ನ ರಾಜಪರಿವಾರದೊಂದಿಗೆ ಬರುತ್ತಿದ್ದಂತೆ ಮಾರ್ಗದ ಮಧ್ಯದಲ್ಲಿ ರಾಜಕುಲಗುರುಗಳು ಮಹಾಮಂತ್ರಿಗಳು ಸಹ ಜೊತೆಗೂಡಿಕೊಂಡು ಸಾಗಿದರು.

ರಾಜನು ಪ್ರಜೆಗಳಿಗೆ ದರ್ಶನ ಕೊಡಲು ಅನುಕೂಲವಾಗುವಂತೆ ಎತ್ತರವಾಗಿ ನಿರ್ಮಿಸಿದ ಉಪ್ಪರಿಗೆಯನ್ನು ಕುರಿತು ಬಂದನು.

ಹೊರಗಡೆ ಅರಮನೆ ಆವರಣದಲ್ಲಿ ಪ್ರಜೆಗಳು ತನ್ನನ್ನು ಕುರಿತು "ಜಯಕಾರ" ಹಾಕುತ್ತಿದ್ದುದನ್ನು ಆಲಿಸಿದ ಭೋಜರಾಜರಿಗೆ ಕರ್ಣಾನಂದವಾಯಿತು. ಪ್ರಜೆಗಳ ವಾತ್ಸಲ್ಯಕ್ಕೆ ಹರ್ಷಚಿತ್ತನಾಗಿದ್ದ.

ಮಹಾಮಂತ್ರಿಗಳ ಕಣ್ಣೋಟದ ಆದೇಶವನ್ನೇ ಗಮನಿಸಿದ ರಾಜಸೇವಕರು ಉದ್ದಕ್ಕೆ ಇದ್ದ ತೆರೆಯನ್ನೆಳೆದು ಸರಿಸಿದರು.

ಆಗ ಬಹು ತೇಜಸ್ವಿಯಾದ ಭೋಜರಾಜನನ್ನು ಕಂಡ ಲಕ್ಷೋಪ ಲಕ್ಷ ಪ್ರಜೆಗಳು ಮಹದುತ್ಸಾಹದಿಂದ ಒಮ್ಮೆಯೇ ಮುಗಿಲು ಮುಟ್ಟುವಂತೆ ಕರತಾಡನ ಮಾಡುತ್ತಾ "ಭೋಜರಾಜರಿಗೆ ಜಯವಾಗಲಿ" ಎಂದು ಹತ್ತಾರು ಬಾರಿ ನಭೋಮಂಡಲವನ್ನು ಭೇದಿಸುವಂತೆ ಜಯಕಾರದ ಧ್ವನಿ ಮೊಳಗಿಸಿದರು.

ಸಾಗರದೋಪಾದಿಯಲ್ಲಿ ತುಂಬಿ ನೆರೆದು ಜಯಕಾರ ಹಾಕುತ್ತಿದ್ದ ಪ್ರಜೆಗಳಿಗೆ ಅತಿಶಯವಾದ ವಿನಯಾದಿ ರಾಜಗಾಂಭೀರ್ಯದಿಂದ ಪ್ರಜೆಗಳತ್ತ ಕೈ ಮುಗಿದು ವಂದಿಸುತ್ತ "ಹೇ ಧಾರಾನಗರದ ಮಹಾ ಪ್ರಜೆಗಳೆ - ತಮ್ಮೆಲ್ಲರಿಗೂ ಅನಂತ ವಂದನೆಗಳು. ತಾವೆಲ್ಲರೂ ಸಂತೋಷಚಿತ್ತರಾಗಿರಿ. ತಮ್ಮೆಲ್ಲರ ಸಂತೋಷವೇ ನನಗೆ ಪರಮ ಸಂತೋಷವಾಗಿದೆ. ಈ ದೇಶದ ಏಳಿಗೆಗಾಗಿ, ಸರ್ವತೋಮುಖ ಅಭಿವೃದ್ಧಿಗಾಗಿ, ನಾವೆಲ್ಲರೂ ಪಣತೊಟ್ಟು ಶ್ರಮಿಸೋಣ. ತಮ್ಮೆಲ್ಲರಿಗೂ ಕಲ್ಯಾಣವಾಗಲಿ" ಎಂದು ಎಲ್ಲರಿಗೂ ಕೇಳುವ ಹಾಗೆ ಮುಕ್ತ ಕಂಠದಿಂದ ಹರ್ಷಚಿತ್ತನಾಗಿ ನುಡಿದನು.

ನಂತರ ಆ ಮೊದಲೇ ಸಿದ್ಧಪಡಿಸಿಕೊಂಡಿದ್ದ, ರಾಜಸೇವಕಿಯರು ಹಿಡಿದು ನಿಂತಿದ್ದ ಬಂಗಾರದ ಹರಿವಾಣದಲ್ಲಿ ತುಂಬಿರಿಸಿದ್ದ ಚಿನ್ನದ ನಾಣ್ಯವನ್ನು ಭೋಜರಾಜನು ತನ್ನ ಎರಡೂ ಕೈಗಳಿಂದ ಬೊಗಸೆ ಬೊಗಸೆಯಾಗಿ ತುಂಬಿಕೊಂಡು ಪುಷ್ಪವೃಷ್ಟಿಗರೆಯುವಂತೆ ಪ್ರಜೆಗಳತ್ತ ಆ ಸುವರ್ಣ ನಾಣ್ಯಗಳ ವೃಷ್ಟಿಗರೆದನು. ಆಗ ಅಲ್ಲಿ ಸಾಗರೋಪಾದಿಯಲ್ಲಿ ನೆರೆದಿದ್ದ ಅಸಂಖ್ಯೆ ಉತ್ಸಾಹೀ ಪ್ರಜೆಗಳ ಪಾಲಿಗೆ 'ಹೊನ್ನಿನ ಮಳೆ' ಬೀಳುತ್ತಿರುವಂತೆಯೇ ಅನುಭವವಾಗಿತ್ತು.

ಹಾಗೆ ಬೀಳುತ್ತಿದ್ದ ಚಿನ್ನದ ನಾಣ್ಯಗಳನ್ನು ಪ್ರತಿಯೊಬ್ಬರೂ ಉತ್ಸಾಹದಿಂದ ಆಯ್ದುಕೊಳ್ಳುತ್ತಿದ್ದರು.

ಹಾಗೆ ತಮ್ಮ ಪಾಲಿಗೆ ಸಿಕ್ಕಿದಷ್ಟು ಚಿನ್ನದ ನಾಣ್ಯಗಳನ್ನು ಆಯ್ದುಕೊಳ್ಳುತ್ತಿದ್ದ ಸತ್ಯಸಂಧರಾದ ಆ ಪ್ರಜೆಗಳಲ್ಲೂ ಸಹ ಒಂದು ರೀತಿಯ ಅಪೂರ್ವವಾದ ಆದರ್ಶತೆ ಎದ್ದು ಕಾಣುತ್ತಿತ್ತು.

ಭೋಜರಾಜನು ಅರಮನೆಯ ಉಪ್ಪರಿಗೆ ಮೇಲೆ ನಿಂತು ಬೊಗಸೆ ಬೊಗಸೆಯಾಗಿ ವೃಷ್ಟಿಗರೆಯುತ್ತಿದ್ದ ಚಿನ್ನದ ನಾಣ್ಯಗಳನ್ನ ಆಯ್ದುಕೊಳ್ಳುತ್ತಿದ್ದ ಸತ್ಯಸಂಧ

ಪ್ರಜೆಗಳಿಗೆ ಒಬ್ಬರಿಗೆ ಹತ್ತು ನಾಣ್ಯ ಸಿಕ್ಕಿದರೆ ಮತ್ತೊಬ್ಬರಿಗೆ ಇಪ್ಪತ್ತು ನಾಣ್ಯ, ಮಗದೊಬ್ಬರಿಗೆ ಐದೇ ನಾಣ್ಯ ಸಿಕ್ಕಿದರೆ, ಅನ್ಯರೊಬ್ಬರಿಗೆ ಒಂದು ನಾಣ್ಯವೂ ಸಿಕ್ಕುತ್ತಿರಲಿಲ್ಲ. ಆಗ ಪ್ರಜೆಗಳು ತಮಗೆ ಸಿಕ್ಕಿದ ನಾಣ್ಯಗಳನ್ನು ಒಂದೂ ಸಿಗದಿದ್ದ ಅಂತಹವರಿಗೆ ಕೊಡುತ್ತಿದ್ದರು.

ಪ್ರಜೆಗಳ ಈ ಆದರ್ಶತೆಯನ್ನು ಕಣ್ಣಾರೆ ಕಂಡ ಭೋಜರಾಜನು 'ಆಹಾ! ನನ್ನ ದೇಶದ ಪ್ರಜೆಗಳು ಅದೆಷ್ಟು ಸತ್ಯಸಂಧರಾಗಿ ಬಾಳುತ್ತಿದ್ದಾರೆ" ಎಂದು ಆ ಪ್ರಜೆಗಳನ್ನು ಬಹುವಾಗಿ ಗುಣಗಾನ ಮಾಡಿದನು.

ಈ ರೀತಿಯಾಗಿ ಭೋಜರಾಜನು ರಾಜದರ್ಶನವನ್ನು ಕೊಟ್ಟು ಪ್ರಜೆಗಳನ್ನು ಸಂತೋಷಗೊಳಿಸಿದನು.

ಭೋಜನ ಆಗಮನದಿಂದ ಪ್ರಜೆಗಳಲ್ಲಿ ಎಂದಿಲ್ಲದ ಶಾಂತಿಶಿಸ್ತು ಸೌಹಾರ್ದತೆ ಎಲ್ಲವೂ ಮತ್ತೆ ಮೂಡಿ ಹರಿಯಿತು. ಕಾಲ ಕಾಲಕ್ಕೆ ಮಳೆ ಬೆಳೆ ಆಗಿ, ದೇಶ ಸುಭಿಕ್ಷದಿಂದ ತಾಂಡವವಾಡಿತು.

# ಧಾರನಗರದ ಅಂದಿನ ಸಂಭ್ರಮ

ಅಪೂರ್ವ ರಾಜಲಕ್ಷಣಗಳಿಂದ ಕೂಡಿದ ಅಸಮಾನ ಶೂರನಾದ..... ಗಂಧರ್ವ ಪುರಷನಂತೆ ಅಲೌಕಿಕ ಸುಂದರನೂ ಪುರುಷ ಶ್ರೇಷ್ಠನೂ ಆದ ಭೋಜರಾಜನು - ತನ್ನ ಕಿಶೋರಾವಸ್ಥೆಯನ್ನು ದಾಟಿ ಹದಿನೆಂಟರ ಪ್ರಾಯಕ್ಕೆ ಕಾಲಿರಿಸಿದ್ದನು.

ಇಡೀ ಭೂಮಂಡಲದಲ್ಲಿಯೇ ಮತ್ತೆಲ್ಲೂ ಕಾಣದ ಅಷ್ಟೇ - ಏಕೆ? ಇಂದ್ರ ಕುಬೇರರಿಗೂ ಸಹ ದುರ್ಲಭವಾದ ಅಪೂರ್ವ ರತ್ನಸಿಂಹಾಸನವನ್ನಲಂಕರಿಸಲು ಸರ್ವ ಸಮರ್ಥನಾಗಿದ್ದನು.

ಆ ತನ್ನ ಕೀಶೋರ ತನದಲ್ಲಿಯೇ ಸಕಲ ವಿದ್ಯಾ ಪಾರಂಗತನಾಗಿ, ವ್ಯಾಕರಣ ಶಾಸ್ತ್ರ ಮುಂತಾದ ಸಂಸ್ಕೃತ ಪಾಂಡಿತ್ಯ ವಿದ್ಯೆಯಲ್ಲಿಯೂ, ಸಂಗೀತ ಸಾಹಿತ್ಯ ಮುಂತಾದ ಕಲೆಗಳಲ್ಲಿಯೂ, ಜಗಜಟ್ಟಿ ಕಾಳಗ, ಮಲ್ಲಯುದ್ಧ - ಗಧಾಯುದ್ಧ, ಅಸ್ತ್ರಶಸ್ತ್ರ ವಿದ್ಯೆಗಳಲ್ಲೂ ಅಸಮಾನ ಶೂರನಾಗಿ ವಿಶ್ವದಾಖಲೆಯನ್ನು ಸ್ಥಾಪಿಸಿದ್ದ ಮಹಾ ಪುರುಷನಾಗಿ ಶೋಭಿಸುತ್ತಿದ್ದನು.

ಇದೆಲ್ಲವನ್ನರಿತ ಅರಮನೆಯ ರಾಜಕುಲಗುರುಗಳು, ಮಹಾಮಂತ್ರಿಗಳು ಭೋಜರಾಜನಿಗೆ"ಪಟ್ಟಾಭಿಷೇಕ" ಮಾಡಲು ನಿರ್ಧರಿಸಿದರು.

ಆ ವಿಷಯವನ್ನು ಆತನ ಚಿಕ್ಕಪ್ಪನೇ ಆದ ಹಾಗೂ ಮಾಜಿ ಮಹಾರಾಜರೆನಿಸಿಕೊಂಡಿದ್ದ ಮುಂಜುರಾಜನಿಗೂ ತಿಳಿಸಿದರು.

ರಾಜ ಶಾಸನದಂತೆ ತನ್ನ ಅಣ್ಣನ ಮಗನಾದ ಭೋಜರಾಜನಿಗೆ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿ ತಾನು ಎಲ್ಲದರಿಂದಲೂ ಮುಕ್ತನಾಗಬೇಕೆಂದು ವೈರಾಗ್ಯ ಮನಸ್ಸುಳ್ಳವನೇ ಆದ ಮುಂಜರಾಜನೂ ಸಹ ಅದಕ್ಕಾಗಿ ಆ ದಿನಗಳನ್ನು ಎದುರು ನೋಡುತ್ತಿದ್ದನು.

ರಾಜ ಗುರುಗಳು ಮಹಾಮಂತ್ರಿಗಳು ತಿಳಿಸಿದ ಆ ಸಕಾಲಿಕ ವಿಷಯವನ್ನು ಸರ್ವಾನುಮತದಿಂದ ಅನುಮೋದಿಸಿದ್ದನು.

ಎಲ್ಲವನ್ನು ಬಲ್ಲವರೇ ಆದ ಹಾಗೂ ಎಲ್ಲದರಲ್ಲೂ ವಿಶಿಷ್ಟ ಅನುಭವವುಳ್ಳವರ ಆದ ಮಹಾಮಂತ್ರಿಗಳು ರಾಜಗುರುಗಳ ಸಲಹೆಯನ್ನು ಪಡೆಯುತ್ತಾ ಕಾರ್ಯೋನ್ಮುಖರಾದರು. ಅದಕ್ಕಾಗಿ ಮಂತ್ರಾಗಾರದಲ್ಲಿ ಮಹಾಮಂತ್ರಿಗಳು ಅನೇಕ ಉಪಮಂತ್ರಿಗಳೂ ಸೇನಾನಾಯಕರು ದಂಡನಾಯಕರು, ಮಠಾಧಿಪತಿಗಳು, ವಿಪ್ರೋತ್ತಮರು ಎಲ್ಲರಿಂದಲೂ ಕೂಡಿದ ಬೃಹತ್ ಸಭೆ ಸೇರಿಸಿ ಚರ್ಚಿಸಿದರು. ಎಲ್ಲರ ಸಮಂಜಸ ಅಭಿಪ್ರಾಯವನ್ನು ಕ್ರೋಢಿಕರಿಸಿ ಕಾರ್ಯ ಮಘ್ನರಾದರು, ಮಹಾಮಂತ್ರಿಗಳು.

ಭೋಜರಾಜನ ಪಟ್ಟಾಭಿಷೇಕ ಮಹೋತ್ಸವವು ಮೂರುತಿಂಗಳ ಮುಂಚೆಯೆ ಪೂರ್ವಭಾವಿಯಾಗಿ ಆರ್ಯಾವರ್ತದ (ಭರತಖಂಡ) ದೂರ ದೂರದ ಎಲ್ಲಾ

ಚಪ್ಪನ್ನಾರು ದೇಶಗಳಿಗೂ ಗೊತ್ತು ಪಡಿಸಿದ ದಿನವೇ ಆಮಂತ್ರಣವನ್ನು ವಾರ್ತಾಧೂತರ ಮೂಲಕ ರವಾನಿಸಿದ್ದರು. ಆಮಂತ್ರಣವನ್ನು ಹೊತ್ತ ರಾಜಧೂತರು ಅಶ್ವಾರೂಢರಾಗಿ ವಾಯುವೇಗದಿಂದ ದಿಕ್ಕು ದಿಕ್ಕಿಗೆ ಪ್ರಯಾಣ ಮಾಡಿದರು.

ಮೂರು ದಶಕಗಳಿಂದಲೂ ಅರಮನೆಯ ಸಮಸ್ತ ವಹಿವಾಟನ್ನು ತಿಳಿದಿದ್ದವರ ಆದ ಮಹಾಮಂತ್ರಿಗಳಿಗೆ ತಿಳಿಯದಿರುವ ವಿಷಯವೇ ಇರಲಿಲ್ಲ.

ರತ್ನಖಚಿತವಾದ ಭವ್ಯ ಬಂಗಾರದ ಅರಮನೆಯೂ ಮತ್ತಷ್ಟು ಚಿನ್ನದ ಕಾಂತಿಯಿಂದ ಥಳಥಳನೆ ಹೊಳೆಯುವ ಹಾಗೆ ರಂಜಿಸಲು ದೇಶ ದೇಶಗಳಿಂದಲೂ ಸಾವಿರಾರು ಅನುಭವಿ ಚಿನ್ನದ ರೂವಾರಿಗಳನ್ನು ಕರೆಸಿಕೊಂಡಿದ್ದರು. ಅವರುಗಳ ಮೂಲಕ ಅರಮನೆಯ ಭವ್ಯತೆಯನ್ನು ಮತ್ತಷ್ಟು ಹೆಚ್ಚಿಸಲು ಇಚ್ಛೆ ಉಳ್ಳವರೇ ಆಗಿದ್ದರು.

ಭೋಜರಾಜನ ಮಹಾಭಾಗ್ಯವೋ ಎಂಬಂತೆ... ಅತುಳೈಶ್ವರ್ಯದಿಂದ ಕೂಡಿದ ವಿಪುಲ ಸಂಪತ್ತನ್ನು ಯಥೇಚ್ಛವಾಗಿ ಕ್ರೋಢೀಕರಿಸಿ....... ಅಖಂಡ ವೈಭವದಿಂದ ನಡೆಯಲಿರುವ ಭೋಜರಾಜನ ಪಟ್ಟಾಭಿಷೇಕ ಮಹೋತ್ಸವಕ್ಕೆ ಸಕಲ ಸಿದ್ಧತೆಗಳು ಭರದಿಂದ ಸಾಗುತ್ತಿತ್ತು.

ಇನ್ನೂ ಮಹಾರಾಜ ಪದವಿಯಲ್ಲಿಯೆ ಅಧಿಕಾರಶಾಹಿಯಾಗಿ ಮುಂದುವರಿಯುತ್ತಿದ್ದ ಮುಂಜರಾಜನು ಅರಮನೆಯ ಮಹಾಮಂತ್ರಿಗಳ ಕಾರ್ಯಕಲಾಪಗಳಿಗೆ ಯಾವುದೊಂದಕ್ಕೂ ಅಡ್ಡಿ ಆತಂಕಗಳನ್ನು ಉಂಟು ಮಾಡುತ್ತಿರಲಿಲ್ಲ. ಮಿಗಿಲಾಗಿ ಭೋಜರಾಜನ ಪಟ್ಟಾಭಿಷೇಕ ಮಹೋತ್ಸವ ಸಂಭ್ರಮದ ಸಮಾರಂಭಕ್ಕೆ ಎಲ್ಲಾ ರೀತಿಯಿಂದ ಪ್ರೋತ್ಸಾಹ ನೀಡುತ್ತಿದ್ದನು. ಆ ಹಿಂದೆ ತಾನು ಆಜೀವಪರ್ಯಂತರವೂ ಆ ಧಾರಾನಗರವನ್ನಾಳುವ ಭೂಪತಿ ಎಂದೇ ಭಾವಿಸಿದ್ದ ಮುಂಜರಾಜನು ತನ್ನ ನಿಲುವನ್ನು ಸಂಪೂರ್ಣವಾಗಿ ಬದಲಾಯಿಸಿದ್ದ. ಅಷ್ಟೇ ತ್ಯಾಗ ಜೀವಿಯಾಗಿ ಬಿಟ್ಟಿದ್ದ. ಪಶ್ಚಾತ್ತಾಪದ ಬೆಂಕಿಯಿಂದ ಬೆಂದು ಹೋಗಿತ್ತು ಅವನ ಮನಸ್ಸು. ಭೋಜರಾಜನನ್ನು ಕಂಡರೆ ವಿಷ ಕಾರುತ್ತಿದ್ದ ಮುಂಜರಾಜನು ಇದೀಗ ಅವನಲ್ಲಿ ಅಂತಃಕರಣವುಳ್ಳವನಾಗಿ ಬಿಟ್ಟಿದ್ದನು. ಭೋಜನಿಗೋಸ್ಕರ ಸರ್ವತ್ಯಾಗಕ್ಕೂ ಸಿದ್ಧನಿದ್ದನು.

ಬಹುಮೇಧಾವಿಯಾದ ಮಹಾಮಂತ್ರಿಯ ಕಾರ್ಯದಕ್ಷತೆಯಲ್ಲಿ ಭೋಜರಾಜನ ಪಟ್ಟಾಭಿಷೇಕ ಮಹೋತ್ಸವದ ಸಕಲ ಸಿದ್ಧತೆಗಳು ಏರ್ಪಾಟಾಗಿತ್ತು.

ಆ ಶುಭ ಸಮಾರಂಭಕ್ಕೆ ಭೋಜರಾಜನ ಆಮಂತ್ರಣವನ್ನು ಅತ್ಯಾನಂದದಿಂದ ಸ್ವೀಕರಿಸಿದ್ದ ಚಪ್ಪನ್ನಾರು ದೇಶಗಳ ಸಾಮಂತರು ತಮ್ಮ ತಮ್ಮ ರಾಜಪರಿವಾರ ಹಾಗೂ ರಾಜಮಾತೆ ರಾಜ ಮಹಿಳೆಯರೊಂದಿಗೆ ರಾಜಾರ್ಹವಾದ ಚಿನ್ನದ ರಥಗಳಿಂದಲೂ, ಮೇನಾ, ಪಲ್ಲಕ್ಕಿಗಳಿಂದಲೂ ಪಟ್ಟಾಭಿಷೇಕ ಮಹೋತ್ಸವದಲ್ಲಿ ಭಾಗವಹಿಸಲು ಬರುತ್ತಿದ್ದರು.

ಆ ಸಾಮಂತ ರಾಜರುಗಳಿಗಾಗಿಯೇ ಅರಮನೆಯ ಸಮೀಪದ ಯೋಗ್ಯವಾದ ಸ್ಥಳಗಳಲ್ಲಿ ಭವ್ಯಾಕರ್ಷಿತವಾದ ರಾಜಶಿಬಿರವನ್ನು ಸ್ಥಾಪಿಸಿದ್ದರು.

ಆ ರಾಜ ಬಿಡಾರಗಳಾದರೋ ಒಂದೊಂದೂ ಅತಿಶಯವಾದ ಹಿಮವತ್ಪರ್ವತದ ಶ್ವೇತ ಶಿಖರಗಳಂತ್ತೆ ಶುಭ್ರವರ್ಣದಿಂದ ಕಂಗೊಳಿಸುತ್ತಿತ್ತು.

ಧಾರಾನಗರದ ನಾಗರೀಕರ ಆನಂದಕ್ಕೆ ಪಾರವೇ ಇಲ್ಲವಾಗಿತ್ತು. ಪ್ರತಿಯೊಬ್ಬರೂ ಒಳ್ಳೊಳ್ಳೆಯ ವಸ್ತ್ರಾಭರಣಗಳನ್ನು ಧರಿಸಿದವರಾಗಿ, ವಿಶೇಷ ರೂಪಲಾವಣ್ಯಗಳಿಂದಲೂ, ಅತಿಶಯವಾದ ಸಡಗರ ಸಂಭ್ರಮ ಉತ್ಸಾಹಗಳಿಂದಲೂ ಶೋಭಿಸುತ್ತ ಗುಂಪು ಗುಂಪಾಗಿ ಸಾಲು ಸಾಲಾಗಿ ಅರಮನೆಯತ್ತ ಸಾಗಿ ಬರುತ್ತಿದ್ದರು.

ಯೋಜನ ವಿಸ್ತಾರವುಳ್ಳ ಒಡ್ಡೋಲಗದಲ್ಲಿ ಪ್ರೇಕ್ಷಕರಿಗಾಗಿ ಪ್ರತ್ಯೇಕವಾದ ಸ್ಥಳವನ್ನು ಏರ್ಪಡಿಸಲಾಗಿತ್ತು.

ರಾಜಸಭಾಭವನವು ಬಗೆಬಗೆಯ ರತ್ನಖಚಿತ ಚಿನ್ನದ ತೋರಣಗಳಿಂದ ಅಲಂಕರಿಸಲಾಗಿತ್ತು.

ಪಟ್ಟಾಭಿಷೇಕದ ಸಂಭ್ರಮ ಎಂದು ವಿಶೇಷವಾಗಿ ಹಾಕಿದ್ದ ಸಾಂಬ್ರಾಣಿ, ಹಾಲುಮಡ್ಡಿ ಅಗರು ಗುಗ್ಗುಲ ಇವುಗಳ ಸುಗಂಧದ ಪರಿಮಳದ ಹೊಗೆ ಹೊರಸೂಸುತ್ತಾ, ತುಂಬಿ ನೆರೆದಿದ್ದ ಎಲ್ಲರಿಗೂ ಅಹ್ಲಾದಕರ ಆನಂದವನ್ನುಂಟುಮಾಡುತ್ತಿತ್ತು.

ವಿಶ್ವವಿಖ್ಯಾತ ಧಾರಾನಗರದಲ್ಲಿ ಅಜಾತ ಶತ್ರು..... ವಿಶ್ವಪ್ರೇಮಿ ಎನಿಸಿದ್ದ ಭೋಜರಾಜನಿಗೆ ಪಟ್ಟಾಭಿಷೇಕ ಮಹೋತ್ಸವ ಎಂಬ ಸುವಾರ್ತೆಯಿಂದ ಆರ್ಯಾವರ್ತದ (ಭರತಖಂಡ) ಚಪ್ಪನ್ನಾರು ದೇಶಗಳ ಪ್ರತಿಯೊಂದು ಪಟ್ಟಣ ಉಪಪಟ್ಟಣ ಊರು ಹಳ್ಳಿಗಳ ಜನರು ಅಮಿತೋತ್ಸಾಹದಿಂದ ಕುಣಿದಾಡಿದ್ದರು. ಅಷ್ಟು ಮಾತ್ರವೇ ಅಲ್ಲದೆ, ಅವತಾರ ಪುರುಷ ಶ್ರೇಷ್ಠನಾದ ಶ್ರೀ ರಾಮಚಂದ್ರನ ಪಟ್ಟಾಭಿಷೇಕವೆಂದೇ ಭಾವಿಸಿದ್ದರು. ಆ ಅಭೂತಪೂರ್ವ ವೈಭವವನ್ನು ಪ್ರತ್ಯಕ್ಷವಾಗಿ ಕಣ್ತುಂಬ ನೋಡಿ ಆನಂದಿಸುವ ಸಲುವಾಗಿ ಎಲ್ಲೆಡೆಗಳಿಂದಲೂ ಸಾಗರದೋಪಾದಿಯಲ್ಲಿ ಆ ಧಾರಾನಗರವನ್ನು ಕುರಿತು ಬರುತ್ತಿದ್ದರು.

ಪಟ್ಟಾಭಿಷೇಕ ಮಹೋತ್ಸವವಾದ ಆ ಶುಭದಿನ ಭವ್ಯವಾದ ಬಂಗಾರದ ಅರಮನೆಯ ನವನೂತನವಾದ ಹಸಿರು ಚಪ್ಪರ ಗೊನೆ ಬಾಳೆಕಂಬ ತಳಿರು ತೋರಣಗಳಿಂದ ಬಣ್ಣಬಣ್ಣದ ಸಾಲು ಬಾವುಟಗಳಿಂದಲೂ, ಸುಗಂಧ ಪುಷ್ಪಗುಚ್ಛ ಪುಷ್ಪಹಾರಗಳಿಂದಲೂ ಅದ್ವಿತೀಯವಾಗಿ ಅಲಂಕರಿಸಿದ್ದರು. ಅಷ್ಟೇ ಅಲ್ಲದೆ ನಗರದ ಬೀದಿಬೀದಿಗಳಲ್ಲೂ ಪ್ರತಿ ಮನೆ ಮನೆಗಳನ್ನೂ ಶುಭ ಶೋಭಾಯಮಾನವಾಗಿ ಹಸಿರು ಚಪ್ಪರ ತಳಿರು ತೋರಣಗಳಿಂದ ವೈಭವವಾಗಿ ಸಿಂಗರಿಸಿದ್ದರು. ವಿಶಿಷ್ಟ ವೈಭವದಿಂದ ಕೂಡಿದ ಆ ಪಟ್ಟಣವು ಇಂದ್ರದೇವನ ಅಮರಾವತಿ ಪಟ್ಟಣದಂತೆ ಅತಿಶಯವಾಗಿ ಶೋಭಿಸುತ್ತಿತ್ತು.

ಇದರಿಂದಾಗಿ ಆ ಧಾರಾನಗರದ ಪ್ರಜೆಗಳ ಸಿರಿಸಂತೋಷ ವೈಭವ ವರ್ಣನಾತೀತವಾಗಿತ್ತು.

ಅಖಂಡ ವೈಭವದಿಂದ ಜರುಗಲಿರುವ ಭೋಜರಾಜನ ಪಟ್ಟಾಭಿಷೇಕ ಮಹೋತ್ಸವಕ್ಕೆ ಒಂದು ದಿನ ಮುಂಚಿತವಾಗಿಯೇ ಎಲ್ಲಾ ದೇಶಗಳ ಸಾಮಂತರಾಜರುಗಳು ಧಾರಾನಗರಕ್ಕೆ ರಥಾರೂಢರಾಗಿ ಬಂದು ಸೇರುತ್ತಿದ್ದರು. ಅವರುಗಳನ್ನು ರಾಜಗೌರವದಿಂದ ಬರಮಾಡಿಕೊಳ್ಳುವ ಸಲುವಾಗಿ ಇಕ್ಕೆಡೆಗಳಲ್ಲಿ ಉದ್ದರ್ಕ್ಕೂ ಈಟಿ ಹಿಡಿದು ನಿಂತಿದ್ದ ಸಮವಸ್ತ್ರಧಾರಿ ರಾಜಧೂತರುಗಳು ಶೋಭಿತರಾಗಿಯೂ ವಿನಯ ಭೂಷಿತರಾಗಿಯೂ ಅಲ್ಲಲ್ಲೆ ಸಾಲುಗಟ್ಟಿ ನಿಂತಿದ್ದರು. ಆ ಆಕರ್ಷಕ ಸಮವಸ್ತ್ರಧಾರಿ ರಾಜಧೂತರಾದರೋ ಅಂದಿನ ನಿಲುವಿಗೆ ತಕ್ಕಹಾಗೆ ಬಹು ಎತ್ತರವುಳ್ಳವರಾಗಿಯೂ ಭೀಮಾ ದೇಹಾಕೃತಿಯುಳ್ಳ ಸಧೃಡರಾಗಿ ಸುಂದರ ಪುರುಷ ಸಿಂಹರಂತೆ ಕಾಣುತ್ತಿದ್ದರು.

ಅದೇನು ರಾಜಾಜ್ಞೆಯೋ ಅಥವಾ ಪುರುಷ ಸೌಂದರ್ಯಕ್ಕೆ ಮತ್ತಷ್ಟು ಪೌರುಷ ಎದ್ದು ಕಾಣುವ ಹಾಗೇ ಪ್ರತಿಯೊಬ್ಬರು ಅವರವರ ಮುಖಲಕ್ಷಣಕ್ಕೆ ತಕ್ಕಂತೆ ಮೀಸೆ - ಹುರಿಮೀಸೆಗಳಿಂದ ಬಹು ಆಕರ್ಷಿತರಾಗಿ ಶತ್ರುಗಳಿಗೆ ಸಿಂಹಸ್ವಪ್ನರಂತೆಯೂ ಮಿತ್ರ ವರ್ಗದವರಿಗೆ ಪರಮಭೂಷಣ ಪ್ರಾಯರಾಗಿಯೂ ಶೋಭಿಸುತ್ತಿದ್ದರು, ಆ ರಾಜಧೂತರು.

ಮುಂಜರಾಜನ ಹಾಗೂ ಮಹಾಮಂತ್ರಿಗಳ ಆದೇಶ ನಿರ್ದೇಶನದಂತೆ ಪಟ್ಟಣದ ಮಹಾದ್ವಾರದಲ್ಲಿ ಅರಮನೆಯ ಅನೇಕ ಉಪ ಮಂತ್ರಿಗಳು, ಪ್ರಮುಖ ಅಧಿಕಾರಿಗಳು ಅಚಲಸಿಂಹನೂ ಸೇರಿದಂತೆ ಅನೇಕ ಸರದಾರರು ಸೇನಾಧಿಪತಿಗಳು, ಕುಲಪತಿಗಳು, ದಳಪತಿಗಳು ಹಾಗೂ ರಾಜಪರಿವಾರದವರು ಎಲ್ಲರಾದಿಯಾಗಿ ಅವರವರ ಘನತೆಗೆ ತಕ್ಕಂತೆ ವಿಶೇಷ ವಸ್ತ್ರಾಭರಣಭೂಷಿತರಾಗಿ ಕಾರ್ಯೋನ್ಮುಖರಾಗಿದ್ದರು.

ಪಲ್ಲಕಿ - ಮೇನಾಗಳಲ್ಲಿ ಬಂದಿದ್ದ ರಾಜಮಾತೆಯರನ್ನು ಮಹಾರಾಣಿಯರನ್ನು ರಾಜಕುಮಾರಿಯರನ್ನು ಹಾಗೂ ಅನೇಕ ರಾಜಮಹಿಳಾ ಪರಿವಾರದವರನ್ನು ನೇರ ಮಹಾರಾಣಿ (ಭಾನುಮತಿ) ಯವರ ಅಂತಃಪುರಕ್ಕೆ ಕರೆದೊಯ್ಯಲು ತಕ್ಕ ಏರ್ಪಾಡುಗಳು ಪೂರ್ವಭಾವಿಯಾಗಿಯೇ ಅಣಿಯಾಗಿತ್ತು.

ಅದರಂತೆ ನವರತ್ನಖಚಿತ ಮೇನಾ ಪಲ್ಲಕಿಗಳಲ್ಲಿ ಆಗಮಿಸಿದ್ದ ರಾಜಮಾತ, ರಾಜಕುಟುಂಬದವರನ್ನು ವಿಶೇಷವಾದ ರಾಜಗೌರವದಿಂದ ನೇರವಾಗಿ ಮಹಾರಾಣಿ ಅಂತಃಪುರಕ್ಕೆ ಕರೆದೊಯ್ಯಲು ತಕ್ಕ ವ್ಯವಸ್ಥೆ ಮಾಡಲಾಗಿತ್ತು. ರಾಜಕುಟುಂಬದವರಿಗಾಗಿ ನೂರಾರು ಮಹಿಳಾ ಸೇವಕಿಯರು ಕಾರ್ಯೋನ್ಮುಖರಾಗಿದ್ದರು.

ಅರಮನೆಯ ಮಹಾರಾಣಿ ಎಂದೆನಿಸಿದ ಮುಂಜರಾಜನ ಪಟ್ಟದರಸಿ ಭಾನುಮತಿ ದೇವಿಯು ಅನೇಕ ದಾಸಿಯರೊಂದಿಗೆ ಮುಂದೆ ಬಂದು ಅತ್ಯಂತ ಗೌರವದಿಂದ ಬರುತ್ತಿದ್ದ ಎಲ್ಲರನ್ನು ಆಹ್ವಾನಿಸುತ್ತ ಯಥೋಚಿತವಾದ ರಾಜಸತ್ಕಾರದಿಂದ ಅಂತಃಪುರದೊಳಗೆ ಕರೆದೊಯ್ಯುತ್ತಿದ್ದರು. ಒಂದೊಂದು ದೇಶದ ಒಂದೊಂದು ರಾಜಕುಟುಂಬಗಳಿಗೂ ಸಹ ಪ್ರತ್ಯೇಕ ಪ್ರತ್ಯೇಕವಾದ ಬಹುವಿಶಾಲವಾದ ಕೋಣೆಗಳಿದ್ದವು.

ಆ ಕೋಣೆಗಳಲ್ಲಿ, ಹಂಸತೂಲಿಕತಲ್ಪದಿಂದಲೂ, ರಾಜ ಪೀಠಗಳಿಂದಲೂ ನಿಲುವುಗನ್ನಡಿ ಮುಂತಾದ ಅಲಂಕಾರ ವಸ್ತುಗಳಿಂದಲೂ ಬಗೆಬಗೆಯ ಸುಗಂಧ ತೈಲ ಸುಗಂಧ ಪುಷ್ಪಗಳಿಂದಲೂ ಬಗೆಬಗೆಯ ಖಾದ್ಯ, ಲೇಹ್ಯ, ತಿಂಡಿ, ಸಿಹಿ ತಿಂಡಿ ತಿನಿಸುಗಳಿಂದಲೂ, ಬಗೆಬಗೆಯ ಫಲಗಳಿಂದಲೂ ಯಾವುದೊಂದಕ್ಕೂ ಕೊರತೆ ಇಲ್ಲದಂತೆ ಎಲ್ಲವನ್ನೂ ಅಣಿಗೊಳಿಸಿದ್ದರು.

ಅಖಂಡ ವೈಭವದಿಂದ ಕೂಡಿದ ಯೋಜನಾ ವಿಸ್ತಾರವುಳ್ಳ, ನವರತ್ನಖಚಿತ ಕಾಂತಿಯಿಂದ ಜಾಜ್ವಲ್ಯಮಾನವಾಗಿ ಶೋಭಿಸುತ್ತಿದ್ದ ಭವ್ಯಾಲಂಕೃತವಾದ, ಅತ್ಯದ್ಭುತ ವೈಖರಿ- ವಿನ್ಯಾಸಗಳಿಂದ ಕೂಡಿದ ರಾಜ ಸಭಾಭವನದಲ್ಲಿ - ಯಥೋಚಿತವಾದ ರತ್ನಖಚಿತವಾದ ಪೀಠಗಳಲ್ಲಿ..... ಒಂದೆಡೆ ವೇದ - ವೇದಾಂಗ ಪಾರಂಗತರಾದ ಅನೇಕ ಮಹರ್ಷಿಗಳು, ತಪೋಮುನಿಗಳು, ಅನೇಕ ಮಠಾಧಿಪತಿಗಳು, ಧರ್ಮಾಧಿಕಾರಿಗಳು, ಅರಮನೆಯ ಉನ್ನತಾಧಿಕಾರಿಗಳು ಕುಲಪತಿಗಳು. ಮತ್ತೊಂದೆಡೆ, ವಿಶ್ವವಿಖ್ಯಾತಿ ವಿಶ್ವಮನ್ನಣೆ ಪಡೆದಿದ್ದ ಅಷ್ಟದಿಗ್ಗಜಗಳಾದ (ಆಗಿನ್ನೂ ಕಾಳಿದಾಸ ಬಂದಿರಲಿಲ್ಲ) ವಿದ್ವನ್ಮಣಿಗಳಾದ ಹಾಗೂ ಆಸ್ಥಾನ ಕವಿಶ್ರೇಷ್ಠರೇ ಆದ ಭಾಸ, ಬಾಣ, ಬಿಲ್ಹಣ, ಭಾರವಿ, ಭವಭೂತಿ, ಭಟ್ಟಾರಕ, ದಂಡಿ, ದಿಂಡಿಮ ಮುಂತಾದ ಕವಿಶ್ರೇಷ್ಠರು, ವ್ಯಾಕರಣ ಪಂಡಿತರು ಹಾಗೂ ಅನೇಕ ಸಂಸ್ಕೃತ ಕವಿಗಳು ವಿಕಟಕವಿಗಳು ಬಗೆ ಬಗೆಯ ಕಲಾವಿದರು, ಸಂಗೀತಕಾರರು, ನೃತ್ಯಕಾರರು ನಾಟಕ ಕಾರರು ಇನ್ನೂ ಅನೇಕ ಬಗೆ ಬಗೆಯ ಕಲಾವಿದರು ದೇಶದೇಶಗಳಿಂದ ಆಗಮಿಸಿ ಯಥೋಚಿತವಾದ ಪೀಠಗಳಲ್ಲಿ ಅಲಂಕೃತರಾಗಿದ್ದರು.

ಮೊಗದೊಂದೆಡೆ ವೇದ ಸ್ವರೂಪರೇ ಆದ ವೇದಘೋಷ ಮಾಡುವ ಸಹಸ್ರಾರು ಋತ್ವಿಕ ಬ್ರಾಹ್ಮಣೋತ್ತಮರು, ಬ್ರಹ್ಮತೇಜಸ್ಸಿನಿಂದ ಕೂಡಿದವರಾಗಿ ರಾಜಪೀಠಗಳಲ್ಲಿ ಅಲಂಕೃತರಾಗಿದ್ದರು.

ಅದರಂತೆ ರಾಜವೇದಿಕೆಯ ಎದುರಾಗಿ ಇಕ್ಕೆಡೆಯ ಉದ್ದಕ್ಕೂ ಎದುರುಬದರಾಗಿ, ವಿಶೇಷಾಹ್ವಾನಿತರಾದ ಚಪ್ಪನ್ನಾರು ದೇಶಗಳ ಸಾಮಂತರಾಜರುಗಳು ಸಿಂಹಾಸನೋಪಾದಿಯ ರತ್ನಖಚಿತ ಪೀಠಗಳಲ್ಲಿ ಅಲಂಕಾರ ಪ್ರಿಯರಾಗಿ ಉಪಸ್ಥಿತರಾಗಿದ್ದರು.

ಪ್ರಜೆಗಳಿಗಾಗಿಯೇ ಒಂದೆಡೆ ಬಹು ವಿಶಾಲವಾದ ಪ್ರತ್ಯೇಕ ಸ್ಥಳವನ್ನು ಗೊತ್ತುಪಡಿಸಿದ್ದರು. ಅಂತೆಯೇ ಸಾಗರದೋಪಾದಿಯಲ್ಲಿ ಸಾಗಿ ಬರುತ್ತಿದ್ದ ಅಪರಿಮಿತ ಜನಕೋಟಿಯರು ತಂಡ ತಂಡವಾಗಿ ಗುಂಪುಗುಂಪಾಗಿ ಹರ್ಷದ ಹೊನಲನ್ನು ಹರಿಸುತ್ತ ಆ ಸಭಾಭವನದಲ್ಲಿ ತಮಗಾಗಿ ಕಾದಿರಿಸಿದ್ದ ಸ್ಥಳದಲ್ಲಿ ಉಪಸ್ಥಿತರಾಗಿದ್ದರು. ಹಾಗೆ ಬಂದಿದ್ದ ಅವರೆಲ್ಲರೂ ತಮ್ಮ ತಮ್ಮ ಅಂತಸ್ತಿಗೆ ತಕ್ಕ ಹಾಗೆ ವಿಶೇಷವಾದ ವಸ್ತ್ರಾಭರಣಗಳಿಂದ ಶೋಭಿಸುತ್ತಿದ್ದರು.

ಧಾರಾನಗರ ಪ್ರಜೆಗಳು ಎಲ್ಲರೂ ಸುಂದರ ಪುರುಷರೆ - ಸುಂದರ ಸ್ತ್ರೀಯರೆ ಆಗಿದ್ದರು.

ಬಹು ವಿಜೃಂಭಣೆಯಿಂದ ಕೂಡಿದ ಆ ರಾಜ ಸಭಾಭವನದಲ್ಲಿ ತುಂಬಿ ನೆರೆದಿದ್ದ ಎಲ್ಲರೂ ಭೋಜರಾಜನ ಆಗಮನವನ್ನೇ ನಿರೀಕ್ಷಿಸುತ್ತಿದ್ದರು.

ಭೋಜರಾಜರ ಆ ವಿಷ್ಣುದೇವಾಲಯವು ಅವನ ಅರಮನೆಯ ವೈಭವಕ್ಕಿಂತಲೂ ಮಿಗಿಲಾದ ಅತ್ಯಂತ ವೈಭವದಿಂದ ಕೂಡಿತ್ತು.

ಬೆಳಗಿನ ಹೊನ್ನ ಕಿರಣಕಾಂತಿಗೆ ಮಿಣ ಮಿಣನೆ ಹೊಳೆಯುತ್ತಿದ್ದ, ಶುದ್ಧ ಬಂಗಾರದಿಂದಲೆ ಪೂರ್ಣವಾಗಿ ರೂಪಿಸಲಾಗಿದ್ದ. ಸಕಲ ವೈಭವದಿಂದ ಕೂಡಿದ ಚಿತ್ರಚಿತ್ರಿತ ಬಂಗಾರದ ರಾಜಗೋಪುರ ಕೃತಿಯಲ್ಲಿ ವರ್ಣಿಸಲು ಅಸದಳವೋ ಎಂಬಂತೆ ಮುಗಿಲೆತ್ತರಕ್ಕೆ ಮೈಚಾಚಿ ಮೆರೆಯುತ್ತಿತ್ತು.

ದೇವಾಲಯದ ಮುಂದೆಯೇ ಮಹಾದ್ವಾರ ಇಕ್ಕೆಡೆಯಲ್ಲೂ ರಾಜರನ್ನು ಆತುರದಿಂದ ಕರೆಯುತ್ತಿದೆಯೋ ಎಂಬಂತೆ ಮಹಾದ್ವಾರದ ಮುಂದೆ ಎರಡು ಕಡೆಯಲ್ಲೂ ಬಂಗಾರದಿಂದಲೆ ನಿರ್ಮಾಣ ಮಾಡಿದ್ದ ಎರಡು ಬೃಹತ್ ಗಾತ್ರದ ಆನೆಗಳು ತನ್ನ ಸೊಂಡಿಲಿನ ಮೂಲಕ ಪುಷ್ಪಹಾರವನ್ನು ಭೋಜರಾಜನ ಕೊಳಿಗೆ ಹಾಕುತ್ತಿರುವುದೋ ಎಂಬಂತೆ ಭಾಸವಾಗುತ್ತಿತ್ತು.

ರಾಜಪುರೋಹಿತರೊಡನೆ ಹಾಗೂ ಮಹಾಮಂತ್ರಿಗಳೊಡನೆ ರಾಜಗಾಂಭೀರ್ಯದಿಂದ ಬರುತ್ತಿರುವುದನ್ನೆ ಗಮನಿಸಿದಾಗ ಸಾಕ್ಷಾತ್ ಸೂರ್ಯದೇವನ ವಿಷ್ಣು ದರ್ಶನಕ್ಕಾಗಿ ಬರುತ್ತಿದ್ದಂತೆ ತೋರುತ್ತಿತ್ತು.

ವಿನಯಭೂಷಣ ಪ್ರಾಯನಾಗಿ ಅತ್ಯಂತ ಭಕ್ತಿಭಾವದಿಂದ ಕೈ ಮುಗಿದು ದೇವಾಲಯದೊಳಗೆ ಸಾಗುತ್ತಿದ್ದ ಮಹಾಪುರುಷ ಪುಂಗವನಾದ ಭೋಜರಾಜನನ್ನು ಪ್ರತ್ಯಕ್ಷವಾಗಿ ನೋಡುತ್ತಿದ್ದ ಅಲ್ಲಿ ನೆರೆದಿದ್ದ ರಾಜ ಪರಿವಾರದವರಿಗೆ ಎಂದಿಲ್ಲದ ನೇತ್ರಾನಂದವನ್ನುಂಟು ಮಾಡಿತ್ತು.

ಮಂಗಳವಾದ್ಯ ಮೊಳಗುತ್ತಿತ್ತು. ಬಹುತೇಜಸ್ವಿಯಾದ ದೇವಾಲಯದ ಪ್ರಧಾನ ಅರ್ಚಕರು ಐದು ಜನರು ಒಟ್ಟುಗೂಡಿ ಬಂದು ಯಥಾವಿಧಿಯಂತೆ ಮಹಾರಾಜ ಭೋಜರಾಜರನ್ನು ವಿಶೇಷವಾದ ರಾಜಭಕ್ತಿಯಿಂದ 'ಪೂರ್ಣ ಕುಂಭ' ಸಮೇತವಾಗಿ ಸ್ವಾಗತಿಸಿದರು.

ದೇವಾಲಯದಲ್ಲಿದ್ದ ವೇದ ಸ್ವರೂಪರಾದ ಅನೇಕ ವಿಪ್ರರು ಒಕ್ಕೊರಳ ಕಂಚು ಕಂಠದಿಂದ ವೇದ ಘೋಷ ಪಠಿಸುತ್ತಿದ್ದರು.

ಆ ದಿನ ವಿಷ್ಣು ದೇವರನ್ನು ವಿಶೇಷ ವೈಭವದಿಂದ ಅಲಂಕರಿಸಿದ್ದರು.

ಶಾಸ್ತ್ರವಿಧಿಪೂರ್ವಕವಾಗಿ ಪೂಜೆ ಸಲ್ಲಿಸಿದ ಪ್ರಧಾನ ಅರ್ಚಕರು ಮಹಾರಾಜರಿಗೆ ಮಂಗಳಾರತಿ ಕೊಟ್ಟು ತೀರ್ಥ ಪ್ರಸಾದವನ್ನು ನೀಡಿದರು. ಆ ದಿನ ತಾನು ಅಪೂರ್ವವಾದ ರತ್ನ ಸಿಂಹಾಸನವನ್ನಲಂಕರಿಸುವ ಸುದಿನವಾದ್ದರಿಂದ ಬಹು ಭಕ್ತಿಯಿಂದ ಪ್ರಾರ್ಥಿಸಿದನು ಭೋಜರಾಜ.

ಪ್ರಧಾನ ಅರ್ಚಕರಿಂದ ವಿಷ್ಣುದೇವರಿಗೆ ಮಹಾ ಅರ್ಚನೆ ನೇವೇದ್ಯ ಮಹಾ ಮಂಗಳಾರತಿ ಆಗುತ್ತಿದ್ದಂತೆ ದೇವಾಲಯದಲ್ಲಿದ್ದ ಎಲ್ಲಾ ಘಂಟೆಗಳು ನಗಾರಿಗಳು ಏಕ ಕಾಲದಲ್ಲಿ ಮೊಳಗಿದ್ದವು.

ಆಗ ಒಳಗೆ ನಿಲುವುಗನ್ನಡಿಯ ಮುಂದೆ ನಿಂತು ವಿಶೇಷವಾಗಿ ಅಲಂಕರಿಸಿಕೊಳ್ಳುತ್ತಿದ್ದ ಭೋಜರಾಜನು.

"ಬನ್ನಿ......." ಎಂದು ಆತ್ಮೀಯವಾಗಿಯೇ ಕರೆದ.

ಭೋಜರಾಜನ ಕರೆಯನ್ನನುಸರಿಸಿ ಒಳಗೆ ಬಂದ ರಾಜಪುರೋಹಿತರು ಅಂದಿನ ಭೋಜನ ಆ ಅದ್ವಿತೀಯ ಮಹಾವೈಭವದಿಂದ ಕೂಡಿದ ವಿಶೇಷರೀತಿಯ ರಾಜಪೋಷಾಕನ್ನು ಕಂಡು ಕ್ಷಣಕಾಲ ಬೆರಗಾಗಿ ಬಿಟ್ಟರು.

"ಆಹಾ! ಈತನೇನು ಸಾಕ್ಷಾತ್ ಇಂದ್ರ ದೇವನೂ ಅಥವಾ ಸಾಕ್ಷಾತ್ ವಿಷ್ಣು ದೇವರೆ ಭೂಲೋಕದ ಧಾರಾನಗರದ ವೈಭವವನ್ನು, ಅರಮನೆಯ ಸಿರಿಸೊಬಗನ್ನು ಕಣ್ಣಾರಾ ನೋಡಿ ಹೋಗಲು ಬಂದಿರಬಹುದೆ" ಎಂದು ಅತ್ಯಾಶ್ಚರ್ಯಚಕಿತನಾಗಿ ಬೆರಗು ಕಣ್ಣಿಂದ ನೋಡುತ್ತ ಸ್ಥಂಭೀಭೂತರಾಗಿ ಬಿಟ್ಟರು, ರಾಜ ಪುರೋಹಿತರು.

ಮಹಾರಾಜರ ಪೋಷಾಕಿನಲ್ಲಿದ್ದ ಭೋಜರಾಜನನ್ನು ಯಾವ ರೀತಿ ಹೇಗೆ ಮಾತನಾಡಿಸಬೇಕೆಂಬುದೆ ಅರಿಯದಂತಾಯಿತು. ಚಿತ್ರಪಟದಂತೆ ಭೋಜರಾಜನು ಧರಿಸಿದ್ದ ರಾಜಪೋಷಾಕನ್ನ ನೋಡುತ್ತ ನಿಂತು ಬಿಟ್ಟಿದ್ದರು.

ಆಗ ಭೋಜರಾಜನೆ ರಾಜಗುರುಗಳನ್ನು ಗೌರವದಿಂದ ಮಾತನಾಡಿಸುತ್ತ "ಏಕೆ ಪೂಜ್ಯರೆ, ಹಾಗೆ ನಿಂತು ಬಿಟ್ಟರಲ್ಲ....?" ಎಂದು ರಾಜಕುಲಗುರುಗಳ ಭುಜವನ್ನು ತನ್ನೆರಡು ಕೈಗಳಿಂದ ಹಿಡಿದು ಅಲ್ಲಾಡಿಸಿ ನುಡಿದಿದ್ದ ಭೋಜರಾಜ.

ಆಗ ವಾಸ್ತವ ಲೋಕಕ್ಕೆ ಬಂದ ರಾಜಕುಲಗುರುಗಳು "ಕ್ಷಮಿಸಬೇಕು ಭೋಜರಾಜೇಂದ್ರ....., ಇಂದು ನಿಮ್ಮ ಅನಂತ ಕೀರ್ತಿಯನ್ನು ಸಾರುವ ಈ ರಾಜ ಪೋಷಾಕನ್ನು ನೋಡಿ ನಾನೇ ಬೆರಗಾಗಿ ಹೋದೆ ಅಷ್ಟೇ" ಎಂದು ನಸುನಗುತ್ತ ನುಡಿದರು, ರಾಜಗುರುಗಳು.

ಆ ರೀತಿಯಾಗಿ ಎಲ್ಲರನ್ನು ಬೆರಗುಗೊಳಿಸುವಂತೆ ವಿಶೇಷರೀತಿಯಲ್ಲಿ ಅದ್ವಿತೀಯವಾಗಿ ಅಲಂಕರಿಸಿಕೊಂಡಿದ್ದನು, ಭೋಜರಾಜ.

ಆಗ ಮಹಾಮಂತ್ರಿಗಳು ಹೊರಗಡೆಯ ವರಾಂಡದಲ್ಲಿ ಕಾದು ನಿಂತಿದ್ದರು.

ರಾಜ ಪುರೋಹಿತರ ಮಾತಿಗೆ ನಸು ನಕ್ಕು ನುಡಿಯುತ್ತಾ "ಹಾಗೇನಿಲ್ಲ ಪೂಜ್ಯರೆ, ಭಕ್ತರು ಅನನ್ಯ ಭಕ್ತಿಯಿಂದ ದೇವರಿಗೆ ನಾರಿಕೇಲ ಫಲಾದಿಗಳನ್ನು ದೇವರಿಗೆ ಅರ್ಪಿಸುವಂತೆ ನಾನು ಸಹ ಆ ಪರಮತ್ಮನ ಪ್ರೇರಣೆಯಂತೆ ಬಹು ಭಕ್ತಿಯಿಂದ ದೇವರು ಕರುಣಿಸಿರುವ ಈ ರಾಜವೈಭವವನ್ನು ಮೊಟ್ಟಮೊದಲಾಗಿ ದೇವರಿಗೆ ಅರ್ಪಿಸಬೇಕೆಂಬುದೆ ನನ್ನ ಪರಮಗುರಿ ಅಷ್ಟೆ" ಎಂದನು ಭೋಜರಾಜ.

"ಆಹಾ! ನಿಮ್ಮ ಹೃದಯದಲ್ಲಿ ಮನೆ ಮಾಡಿಕೊಂಡಿರುವ ಭಕ್ತಿ ವೈಭವ....." ತಮ್ಮ ರಾಜವೈಭವಕ್ಕಿಂತಲೂ ಶ್ರೇಷ್ಠವಾದದ್ದು" ಎಂದರು.

# ವಿಷ್ಣುದೇವಾಲಯದಲ್ಲಿ
# ಭೋಜರಾಜನ ಅಖಂಡ ಪೂಜೆ

ಅರಮನೆಯ ಬಲಪಾರ್ಶ್ವಕ್ಕೆ ಪೂರ್ವಾಭಿಮುಖವಾಗಿ ರತ್ನಖಚಿತ ಬಂಗಾರದ ಗೋಪುರಗಳಿಂದ ಕೂಡಿದ ಮಹಾಲಕ್ಷ್ಮಿ - ವಿಷ್ಣುದೇವಾಲಯವೂ ಸಹ ಅಂದು ವಿಶೇಷ ರೀತಿಯಾಗಿ ಹಸಿರು ಚಪ್ಪರ ತಳಿರು ತೋರಣ ಬಾಳೆಗೊನೆಗಳಿಂದ ಶೋಭಾಯಮಾನವಾಗಿ ಅಲಂಕರಿಸಲ್ಪಟ್ಟಿತ್ತು.

ಭೋಜರಾಜನ ಪಿತಾಮಹರಾದ, ಧಾರಾನಗರವನ್ನಾಳುತ್ತಿದ್ದ ಶೂರ ಸಿಂಧೂಲರಾಜರು ಆ ದೇವಾಲಯವನ್ನು ಕಟ್ಟಿಸಿದ್ದರು. ಮಹಾರಾಜನು ಪ್ರಥಮ ಕರ್ತವ್ಯವಾಗಿ ವಿಷ್ಣು ದೇವರಿಗೆ ಪೂಜೆ ಸಲ್ಲಿಸಿಯೇ ನಂತರ ರಾಜಕಾರ್ಯಕ್ಕೆ ಬಿಜಯಿಸುವ ಪದ್ಧತಿ ಆ ಕಾಲದಿಂದಲೂ ಯಥಾರೀತಿಯಾಗಿ ನಡೆದುಕೊಂಡು ಬರುತ್ತಿತ್ತು.

ಅದೇರೀತಿಯಾಗಿ ಭೋಜರಾಜನು ಸಹ, ಆ ದಿನ ಪಟ್ಟಾಭಿಷೇಕ ಮಹೋತ್ಸವದ ಅಂಗವಾಗಿ ಮಹಾಲಕ್ಷ್ಮಿ - ವಿಷ್ಣು ದೇವರಿಗೆ ಪೂಜೆ ಸಲ್ಲಿಸಲು ದೇವರ ದರ್ಶನಕ್ಕೆ ಸಿದ್ಧನಾಗಿದ್ದನು.

ಮಹಾರಾಜರ ಏಕಾಂತ ಮಂದಿರದಿಂದ ನೇರವಾಗಿ ಅರಮನೆಯೊಳಗಿನಿಂದಲೇ ದೇವಾಲಯಕ್ಕೆ ಹೋಗಬಹುದಾದ ವಿಶೇಷವಾದ ಮಾರ್ಗವಿತ್ತು. ಅದರಂತೆ ಮಹಾರಾಣಿ ಅಂತಃಪುರದಿಂದಲೇ ರಾಣಿವಾಸದವರು ಪ್ರತ್ಯೇಕವಾಗಿ ಹೂಗಿಬರುವಂತೆ ವಿಶೇಷವಾದ ರಾಜ ಮಾರ್ಗವಿತ್ತು.

ವಿಶೇಷ ಪೂಜೆ ಸಲ್ಲಿಸಲು ಮಹಾರಾಜ ಭೋಜರಾಜನು ಸಿದ್ಧನಾದನು. ಆ ವೇಳೆಗೆ ಸರಿಯಾಗಿ ಪೂಜ್ಯರಾದ ರಾಜಗುರುಗಳು ಮಹಾಮಂತ್ರಿಗಳು - ಎಂದಿಲ್ಲದ ಉತ್ಸಾಹದ ಹೆಜ್ಜೆಯನ್ನು ಹಾಕುತ್ತಾ ಹಸನ್ಮುಖರಾಗಿ ಭೋಜರಾಜನ ಭವ್ಯವಾದ ಏಕಾಂತಮಂದಿರಕ್ಕೆ ಆಗಮಿಸಿದರು.

ಅಂದು ವಯೋ ವೃದ್ಧರಾದ ರಾಜಗುರುಗಳು, ಮಹಾಮಂತ್ರಿಗಳೂ ಸಹ ತಮ್ಮ ತಮ್ಮ ವಯಸ್ಸಿಗೆ ಅನುಗುಣವಾಗಿ ವಿಶೇಷ ರೀತಿಯಲ್ಲಿ ರಾಜಾರ್ಹವಾದ ವಸ್ತ್ರಾಭರಣಗಳಿಂದ ಅಲಂಕೃತರಾಗಿದ್ದರು.

ಅವರು ರಾಜರ ಬಳಿಗೆ ಬರುವಾಗ ರತ್ನಖಚಿತವಾದ ಬೆಳ್ಳಿದಂಡವನ್ನು ಹಿಡಿದೇ ಬರುತ್ತಿದ್ದರು. ಅಂದು ಸಹ ಅದೇ ರೀತಿಯಾಗಿ ಬಂದಿದ್ದರು.

ಮಹಾವೈಭವದಿಂದ ಅತ್ಯಂತ ಮನೋಹರವಾಗಿ ಪರಿಶೋಭಿಸುತ್ತಿದ್ದ ಭೋಜರಾಜನ ಏಕಾಂತ ಮಂದಿರಕ್ಕೆ ಆಗಮಿಸಿದ ರಾಜ ಪುರೋಹಿತರು "ಭೋಜರಾಜೇಂದ್ರ ಶ್ರೆಯೋಭಿವೃದ್ಧಿರಸ್ತು..... ಒಳಗೆ ಬರಬಹುದೆ" ಎಂದು ಹೊರಗೆ ನಿಂತೇ ಕೇಳಿದರು.

ಅರ್ಚಕರು ಮಹಾವಿಷ್ಣು ದೇವರಿಗೆ ಮಹಾ ಮಂಗಳಾರತಿ ಬೆಳಗುತ್ತಿದ್ದಂತೆ ಭಕ್ತಿಪರವಶನಾಗಿದ್ದ ಭೋಜರಾಜನು ವಿಷ್ಣು ದೇವರನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತ"ಹೇ ಪರಮಾತ್ಮಾ, ಈ ಧಾರಾನಗರವನ್ನು ಆಳುವಂಥ ಸಾಮರ್ಥ್ಯವನ್ನು ಕರುಣಿಸಿ ಕಾಪಾಡು" ಎಂದು ಪ್ರಾರ್ಥಿಸಿದನು.

ಮಹಾ ತೇಜಸ್ವಿಗಳಾದ ಪ್ರಧಾನ ಅರ್ಚಕರು ಮಹಾರಾಜರಿಗೆ ತೀರ್ಥ ಪ್ರಸಾದವನ್ನು ಕೊಟ್ಟು ಮುಕ್ತ ಕಂಠದಿಂದ ಆಶೀರ್ವದಿಸಿದರು.

# ಭೋಜರಾಜನಿಗೆ ಪಟ್ಟಾಭಿಷೇಕ

ಭೋಜರಾಜನ ಪಟ್ಟಾಭಿಷೇಕ ಮಹೋತ್ಸವವಾದ ಅಂದು - ಪ್ರಜೆಗಳ ಸಂತೋಷಕ್ಕೆ ಪಾರವೆ ಇಲ್ಲದಂತಾಗಿತ್ತು. ಎಲ್ಲೆಲ್ಲೂ ಸಡಗರ - ಸಂಭ್ರಮ ಉತ್ಸಾಹ ತುಂಬಿ ತುಳುಕಾಡುತ್ತಿತ್ತು. ಪಟ್ಟಣದ ಪ್ರತಿಬೀದಿ ರಾಜಬೀದಿಗಳಲ್ಲೂ ಅಲ್ಲಲ್ಲೇ ಹಸಿರು ಚಪ್ಪರ ಗೊನೆಬಾಳೇ ತಳಿರು ತೋರಣಗಳಿಂದಲೂ, ಬಣ್ಣಬಣ್ಣದ ಸಾಲು ಬಾವುಟಗಳಿಂದಲೂ ಸುಗಂಧ ಪುಷ್ಪಹಾರಗಳಿಂದಲೂ ದಿವ್ಯವಾಗಿ ಅಲಂಕರಿಸಿದ್ದರು.

ಇತ್ತ ಅರಮನೆಯ ಹೊರಭಾಗದ ಸುತ್ತಲೂ ಸಾಲು ಅಂಗಡಿಗಳು, ಗುಡಾರದಂಗಡಿಗಳು, ಮಕ್ಕಳ ಬಣ್ಣ ಬಣ್ಣದ ಆಟದ ಸಾಮಾನಿನ ಅಂಗಡಿಗಳು, ಮುತ್ತು ರತ್ನ ಹವಳ ಗೋಮೇದಕ ಪುಷ್ಯರಾಗ ಮುಂತಾದ ನವರತ್ನಗಳನ್ನು ರಾಶಿರಾಶಿ ಹಾಕಿಕೊಂಡಿದ್ದ ಅಂಗಡಿಗಳು. ಫಲ ಪುಷ್ಪಗಳ ಅಂಗಡಿಗಳು, ಬತ್ತಾಸು, ಮಿಠಾಯಿ, ಕೊಬ್ಬರಿ ಮಿಠಾಯಿ, ಚಕ್ಕಲಿ ತೇಂಗಳ್ಳು, ಕೋಡುಬಳೆ ಮುಂತಾದ ತಿಂಡಿ ತಿನಿಸುಗಳ ಅಂಗಡಿಗಳು, ದೇಶ ದೇಶದಿಂದ ಬಂದಿದ್ದ ಚಿತ್ರವಿಚಿತ್ರವಾದ ಬೊಂಬೆ ಅಂಗಡಿಗಳು, ಹೀಗೆ ಸಾವಿರಾರು ರಖಂವಾರು ಅಂಗಡಿಗಳು ಆ ಅರಮನೆಯ ವೈಭವಕ್ಕೆ ಮತ್ತಷ್ಟು ಸೊಗಸು ತಂದಿತ್ತು.

ಅನೇಕ ರೀತಿಯಲ್ಲಿ ವ್ಯಾಪಾರ ಮಾಡುತ್ತಿದ್ದು, ತಮಗಿಷ್ಟ ಬಂದದ್ದನ್ನು ಕೊಂಡು ಕೊಳ್ಳುತ್ತಿದ್ದ ಆ ಎಲ್ಲರ ಕೈಗಳಲ್ಲೂ ಸುವರ್ಣ ನಾಣ್ಯಗಳು ತುಂಬಿ ತುಳುಕಾಡುತ್ತಿದ್ದವು. ಅದೊಂದು ಸುವರ್ಣ ಯುಗವೋ ಎಂಬುದಕ್ಕೆ ಪರಮ ಸಾಕ್ಷಿಯಾಗಿತ್ತು. ಗುಂಪು ಗುಂಪಾಗಿ ಸಾಗುತ್ತಿದ್ದ ನಾಗರೀಕರಿಗೆ ಖುಷಿ ತರಲು ಡೊಂಬರಾಟದವರಿಂದ ಬಗೆ ಬಗೆಯ ಮೋಜಿನ ಕುಣಿತ ನಡೆಯುತ್ತಿತ್ತು.

ಪ್ರತಿಯೊಬ್ಬ ನರನಾರಿಯರು ತಮ್ಮ ತಮ್ಮ ವಯೋಗುಣಕ್ಕೆ, ಸೌಂದರ್ಯಕ್ಕೆ, ತಕ್ಕಂತೆ ಒಳ್ಳೊಳ್ಳೆಯ ಚಿತ್ತಾಕರ್ಷಕ ಬಣ್ಣಬಣ್ಣದ ವಸ್ತ್ರಾಭರಣಗಳಿಂದ ಪರಿಶೋಭಿತರಾಗಿ ಸಂತೋಷ ಸೌರಭದಿಂದ ನಕ್ಕುನಲಿದಾಡುತ್ತಿದ್ದರು.

ರೂಪವಂತ ತರುಣ-ತರುಣೀಯರು ತಮ್ಮ ತಮ್ಮ ರೂಪಲಾವಣ್ಯಗಳಿಗೆ ಅನುಗುಣವಾಗಿ ಸೌಂದರ್ಯದಲ್ಲಿಯೇ ಆಗಲಿ, ಉಡುಗೆ ತೊಡುಗೆಯಲ್ಲಿಯೆ ಆಗಲಿ, ಒಬ್ಬರನ್ನೊಬ್ಬರು ಸ್ಪರ್ಧಿಸುತ್ತಾ ಓಡಾಡುತ್ತಿರುವರೋ ಎಂಬಂತೆ ಭಾಸವಾಗುವ ರೀತಿಯಲ್ಲಿ ಅತಿಶಯವಾದ ವಸ್ತ್ರಾಭರಣಗಳನ್ನು ಧರಿಸಿ ಅತ್ತಿಂದಿತ್ತ - ಇತ್ತಿಂದತ್ತ ಓಡಾಡುತ್ತಾ ಸ್ವರ್ಗ ಸಂತೋಷವನ್ನನುಭವಿಸುತ್ತಿದ್ದರು.

ಆ ದಿನ ಆ ಧಾರಾನಗರವು ಸ್ವರ್ಗಕ್ಕಿಂತಲೂ ಮಿಗಿಲಾದ ಮಹಾಸ್ವರ್ಗದಂತೆ ಎಲ್ಲರೂ ಅಮಿತೋತ್ಸಾಹದಿಂದ ಪಟ್ಟಾಭಿಷೇಕ ಮಹೋತ್ಸವದಲ್ಲಿ ಪಾಲ್ಗೊಳ್ಳಲು ಅರಮನೆಯತ್ತ ಸಾಗುತ್ತಿದ್ದರು.

ಅತಿಯಾದ ಉತ್ಸಾಹದಿಂದ ಓಡಾಡುತ್ತಿದ್ದ ಪ್ರಜೆಗಳು ದಣಿವು ಆಯಾಸವಾಗದ ಹಾಗೆ ಬೀದಿಬೀದಿಗಳಲ್ಲಿ ಅಲ್ಲಲ್ಲೆ ಅರವಟಿಕೆಗಳನ್ನು ಸ್ಥಾಪಿಸಿದ್ದರು. ಅಲ್ಲಿ ಆಳೆತ್ತರದ ಬಹುಗಾತ್ರದ ದೊಡ್ಡ ಕಡಾಯಿ ಪಾತ್ರೆಗಳಲ್ಲಿ ಉಪಹಾರಾದಿ ಸಿಹಿ ಪಾನಕ ಮಜ್ಜಿಗೆ ಹಾಲು ಕುಡಿಯುವವರಿಗೆ ಹಾಲು, ಮುಂತಾದ ಉತ್ತಮ ಪಾನೀಯಗಳನ್ನು ಭೋಜರಾಜನ ಅಪೇಕ್ಷೆಯಂತೆ ಮಹಾಮಂತ್ರಿಯು ಏರ್ಪಾಡು ಮಾಡಿಸಿದ್ದನು.

ಅದರಂತೆ ಪ್ರತಿಯೊಬ್ಬರೂ ಉಪಹಾರ ಪಾನೀಯಗಳಿಂದ ಸಂತೃಪ್ತರಾಗಿ ಭೋಜರಾಜನನ್ನು ಗುಣಗಾನ ಮಾಡುತ್ತಿದ್ದರು.

ಮಧ್ಯಾಹ್ನ ಮತ್ತು ರಾತ್ರಿ ಎರಡೂ ಹೊತ್ತು ಪುಷ್ಕಳ ರಾಜಭೋಜನವೂ ಏರ್ಪಾಡಾಗಿತ್ತು.

ಆ ದಿನ ಅರಮನೆಗೆ ಹೋಗಿ ಬರಲು ರಾಜಸೇವಕರಿಂದಲೇ ಆಗಲಿ, ಯಾರಿಂದಲೇ ಆಗಲಿ ಯಾವುದೇ ರೀತಿಯ ಅಡೆ ತಡೆಗಳು ಅಡ್ಡಿ ಆತಂಕಗಳು ಇಲ್ಲವಾಗಿತ್ತು. ಎಲ್ಲರೂ ಸ್ವೇಚ್ಛೆಯಾಗಿ ಅರಮನೆಗೆ ಶಿಸ್ತಿನಿಂದ ಹೋಗಿ ಬರಲು ಸದವಕಾಶ ಕಲ್ಪಿಸಲಾಗಿತ್ತು. ವಿಶ್ವದಲ್ಲಿಯೇ ಮತ್ತೆಲ್ಲೂ ದುರ್ಲಭವಾದ ಜಗದ್ವಿಖ್ಯಾತ ಬಂಗಾರದ ಅರಮನೆಯನ್ನು, ಮತ್ತು ಸುಂದರ ಕಲಾತ್ಮಕವಾದ ಅಪೂರ್ವ ರತ್ನಸಿಂಹಾಸನವನ್ನು ನೋಡಲು ಹಾಗೂ 'ರಾಜಾ ಪ್ರತ್ಯಕ್ಷದೇವತಾ" ಎಂಬಂತೆ ಪ್ರಜೆಗಳ ಪಾಲಿಗೆ ದೇವಸ್ವರೂಪನಾದ ಭೋಜರಾಜನನ್ನು ಪ್ರತ್ಯಕ್ಷವಾಗಿ ಕಣ್ತುಂಬ ನೋಡಿ ಆನಂದಿಸಲು ದೇಶದೇಶಗಳ ಮೂಲೆಮೂಲೆಗಳಿಂದ ತಂಡತಂಡೋಪವಾಗಿ ಆ ಧಾರಾನಗರಕ್ಕೆ ಆಗಮಿಸುತ್ತಿದ್ದರು. ಪ್ರಜೆಗಳು.

ಎಲ್ಲರೂ ಸಾಗರ ಸಂತೋಷದಿಂದ ನಕ್ಕು ನಲಿದಾಡುತ್ತಿದ್ದರು.

ಭೋಜರಾಜನನ್ನು ಕರೆದುಕೊಂಡು ಹೋಗಲು ಭವ್ಯಾಲಂಕೃತವಾದ ಚಿನ್ನದ ಅಂಬಾರಿ ಹೊತ್ತ ಪಟ್ಟದಾನೆಯು ಅರಮನೆಯ ಮಹಾದ್ವಾರದ ಮುಂದೆ ಕಾದು ನಿಂತಿತ್ತು.

ಆ ಪಟ್ಟದಾನೆಯನ್ನು ಸಹ ಅತಿಶಯವಾದ ಅಲಂಕಾರದಿಂದ ಥಳಥಳ ಹೊಳೆಯುವ ರತ್ನಖಚಿತ ಬಂಗಾರದ ಮುಖ ಕವಚದಿಂದ ಬಹು ಆಕರ್ಷಣೀಯವಾಗಿ ಶೃಂಗರಿಸಿದ್ದು, ಅದು ಎಲ್ಲರ ಮನಕ್ಕೆ ಹರ್ಷತೆಯನ್ನುಂಟು ಮಾಡುತ್ತಿತ್ತು.

ಭೋಜನು ತನ್ನ ಏಕಾಂತ ಮಂದಿರದಿಂದ ಸಮಸ್ತ ಬಿರುದಾವಳಿಗಳಿಂದಲೂ ಸಕಲ ರಾಜಪರಿವಾರದೊಂದಿಗೆ ಬಿಜಯಿಸಿದನು. ಮಂಗಳವಾದ್ಯಗಳು, ಭೇರಿ ದುಂದುಭಿ

ಎಲ್ಲವೂ ಏಕಕಾಲದಲ್ಲಿ ಧ್ವನಿಮೊಳಗಿದವು. ಭೋಜರಾಜನಿಗೆ ಎಂದಿಲ್ಲದ ಹರ್ಷತೆ ತಂದಿತ್ತು.

ಅಸಂಖ್ಯ ಜನಸಾಗರವನ್ನು ಯಾವ ರೀತಿಯಲ್ಲೂ ದೊಂಬಿ ಗಲಭೆಯಾಗದಂತೆ ಮತ್ತೆ ಮತ್ತೆ ಹತೋಟಿಗೆ ತರುತ್ತ ಶಾಂತಿ ಶಿಸ್ತನ್ನು ಕಾಪಾಡುವುದರಲ್ಲಿ ಸಫಲರಾಗಿದ್ದರು ರಾಜಧೂತರು.

ನೂರಾರು ಮಂಗಳವಾದ್ಯಗಳು ಧ್ವನಿಮೊಳುಗತ್ತಿತ್ತು. ಎಲ್ಲೆಲ್ಲೂ ಜಯಕಾರ ಮುಗಿಲು ಮುಟ್ಟುವಂತೆ ಧ್ವನಿ ಕೇಳಿಸುತ್ತಿತ್ತು.

ಅರಮನೆಯ ಹಾಗೂ ಪಟ್ಟಾಭಿಷೇಕದ ಸಂಪ್ರದಾಯದಂತೆ ಮಹಾ ರಾಜರನ್ನು ಭವ್ಯಾಲಂಕೃತವಾದ ಚಿನ್ನದ ಅಂಬಾರಿ ಆನೆಯ ಮೂಲಕ ಕರೆ ತರುವ ವೈಶಿಷ್ಟ್ಯತೆ ರೂಢಿಯಲ್ಲಿತ್ತು. ಅದರಂತೆ ವಿಧಿವತ್ತಾಗಿ ಭೋಜರಾಜರು ಪಟ್ಟದ ಆನೆಗೆ ಪೂಜೆ ಸಲ್ಲಿಸಿ, ನಂತರ ಅಶ್ವ ಪೂಜೆ ಗೋವು ಪೂಜೆ ಸಲ್ಲಿಸಿದ್ದರು. ಅನಂತರ ಚಿನ್ನದ ಅಂಬಾರಿಯ ಮೇಲೆ ಆರೋಹಣ ಮಾಡಿ ಕುಳಿತರು. ಆಗ ಅಲ್ಲಿ ನೆರೆದಿದ್ದ ಎಲ್ಲರೂ ಸುಗಂಧ ಪುಷ್ಪವೃಷ್ಟಿಗರೆಯುತ್ತ ಜಯಕಾರ ಹಾಕುತ್ತಿದ್ದರು. ಎಲ್ಲೆಲ್ಲೂ ಹರ್ಷ ಸಂಭ್ರಮ ಸಡಗರ ತುಂಬಿ ತುಳುಕಾಡುತ್ತಿತ್ತು. ಜನಕೋಟಿಯರ ಉತ್ಸಾಹ ಹೇಳತೀರದಷ್ಟು ಅವರ್ಣನೀಯವಾಗಿತ್ತು.

ಆ ಅಲಂಕೃತ ಪಟ್ಟದಾನೆಯನ್ನು ಹಿಂಬಾಲಿಸಿ ಅನೇಕ ರಾಜಪರಿವಾರದವರು ಆಕರ್ಷಕ ಚಿನ್ನದ ರಥಗಳಲ್ಲಿ ಕುಳಿತು ಬರುತ್ತಿದ್ದರು.

ರಾಜ ಪರಂಪರೆಯಾಗಿ ರೂಢಿಸಿಕೊಂಡು ಬಂದಿದ್ದ ಸಾವಿರಾರು ಬಿರುದು ಬಿರುದಾವಳಿಗಳೊಂದಿಗೆ ಸಾಗಿ ಬರುತ್ತಿತ್ತು ಆ ರಾಜ ವೈಭವ ಮೆರವಣಿಗೆ.

ಸುಮಾರು ಮೂರು ಹರಿದಾರಿಯಷ್ಟು ಉದ್ದಕ್ಕೆ ಅಭೂತ ಪೂರ್ವ ಅಖಂಡ ವೈಭವದಿಂದ ಸಾಗಿ ಬರುತ್ತಿದ್ದ ಆ ರಾಜ ಮೆರವಣಿಗೆಯನ್ನು ಬಣ್ಣಿಸಲದಳವೋ ಎಂಬಂತೆ ಬಹು ವರ್ಣನಾತೀತವಾಗಿತ್ತು.

ಮೆರವಣಿಗೆ ಉದ್ದಕ್ಕೂ ಭೇರಿ ದುಂದುಬಿ ಶಂಖ ಧ್ವನಿ ಮುಂತಾದ ಮಂಗಳ ವಾದ್ಯಗಳು ಧ್ವನಿಮೊಳಗುತ್ತಾ ನೆರೆದಿದ್ದ ಎಲ್ಲರಿಗೂ ಕರ್ಣಾನಂದವನ್ನುಂಟು ಮಾಡುತ್ತಿತ್ತು.

ಅದೇ ರೀತಿ ನೇತ್ರಾನಂದಮಯವಾಗಿತ್ತು.

ನೆರೆದಿದ್ದ ಎಲ್ಲ ಪ್ರಜೆಗಳು ಸ್ವರ್ಗ ಸುಖವನ್ನನುಭವಿಸುತ್ತಿದ್ದರು. ಮಹಾವಿಷ್ಣುವಿನಂತೆ ಅತಿಶಯಕಾಂತಿಯುಳ್ಳವನು ಧರ್ಮರಾಜನಂತೆ ಶಾಂತಿ ಸಮಾಧಾನ ಉಳ್ಳವನು, ಸೂರ್ಯನಂತೆ ಸುಪ್ರಕಾಶಿತನು, ಕುಬೇರನಿಗೆ ಸರಿಸಮಾನನಾದ ವಿಪುಲ ಸಂಪತ್ತುಳ್ಳವನು, ವಿದ್ಯೆಯಲ್ಲಿ ಸರಸ್ವತಿ ದೇವಿಗೆ ಸಮಾನನು, ಸರ್ವಾಂಗ ಸುಂದರನೂ, ವಿನಯಾಭರಣ ಭೂಷಿತನು, ರಾಜಗಾಂಭೀರ್ಯನೂ ಆದ ಭೋಜರಾಜನು ಆ ಮಹಾ

ರಾಜಸಭೆಯನ್ನು ಪ್ರವೇಶ ಮಾಡುತ್ತಿದ್ದಂತೆ ರಾಜಸಭೆಯಲ್ಲಿ ತುಂಬ ನೆರೆದಿದ್ದ ಎಲ್ಲರೂ ಒಕ್ಕೊರಳಿನಿಂದ ಜಯಕಾರ ಹಾಕುತ್ತಾ "ಭೋಜರಾಜರಿಗೆ ಜಯವಾಗಲಿ, ಪ್ರಜಾ ಪರಿಪಾಲಕ ಭೋಜರಾಜರಿಗೆ ಜಯವಾಗಲಿ, ವಿದ್ವನ್ಮಣಿ ತಿಲಕ ರಾಜಾಭೋಜರಿಗೆ ಜಯವಾಗಲಿ" ಎಂದು ನಾನಾರೀತಿಯ ಜಯಘೋಷ ತ್ರಿಲೋಕ ಗಳಲ್ಲೂ ಕೇಳಿಸುವಂತೆ ಧ್ವನಿಮೊಳಗುತ್ತಿದ್ದವು.

ವಂದಿಮಾಗಧರು ಒಕ್ಕೊರಳ ಕಂಠದಿಂದ ರಾಜ ಪರಾಕು ಹೇಳುತ್ತಿದ್ದರು.

ನೂರಾರು ವಿಪ್ರರು ವೇದಘೋಷ ಹೇಳುತ್ತಿದ್ದರು.

ಸಭಾಭವನದ ಭವ್ಯ ಮಹಾದ್ವಾರದಿಂದ (ಯೋಜನ ಉದ್ದದ) ರತ್ನ ಸಿಂಹಾಸನದುದ್ದಕ್ಕೂ ಇಕ್ಕೆಡೆಯಲ್ಲೂ ಸಾಲುಸಾಲಾಗಿ ನಿಂತ ಯೌವನಭರಿತ ಕಡು ಚೆಲುವೆಯರಾದ, ಸಾವಿರಾರು ತರುಣಿಯರು ಪ್ರತಿಯೊಬ್ಬರು ಬಂಗಾರದ ತಟ್ಟೆಯಲ್ಲಿ ತುಂಬಿದ ಸುಗಂಧಮಯ ಬಿಡಿ ಪುಷ್ಪಗಳನ್ನು ಬೊಗಸೆ ಬೊಗಸೆಯಾಗಿ ಮಹಾರಾಜ ಭೋಜರಿಗೆ ಪುಷ್ಪವೃಷ್ಟಿಗರೆಯುತ್ತಿದ್ದರು.

ಹಂಸನಡಿಗೆಯಿಂದಲೂ ರಾಜ ಗಾಂಭೀರ್ಯದಿಂದಲೂ ಸೂರ್ಯನಂತೆ ತೇಜಸ್ಸುವುಳ್ಳವನಾಗಿ ಚಿತ್ರಚಿತ್ರಿತ ಮೆತ್ತನೆಯ ರತ್ನಗಂಬಳಿಯ ಮೇಲೆ ನಡೆದುಬರುತ್ತಿದ್ದಂತೆ ಎಲ್ಲರು ಎದ್ದು ನಿಂತು ಗೌರವವನ್ನು ಸೂಚಿಸಿದ್ದರು.

ಸಕಲ ರಾಜಗೌರವದೊಂದಿಗೆ ಹಾಗೂ ಸಮಸ್ತ ರಾಜಪರಿವಾರದೊಂದಿಗೆ ಬಿಜಯಿಸಿದ ಭೋಜರಾಜನು ರಾಜಪುರೋಹಿತರ ಆದೇಶದಂತೆ ಆ ಅಪೂರ್ವ ರತ್ನಸಿಂಹಾಸನವನ್ನು ಪ್ರದಕ್ಷಿಣೆಯಾಗಿ ಬಂದು ಹರಿದ್ರಾ ಕುಂಕುಮಾದಿಗಳಿಂದಲೂ ಪುಷ್ಪಗಳಿಂದಲೂ ಯಥಾವಿಧಿಯಾಗಿ ಪೂಜೆ ಸಲ್ಲಿಸಿದನು. ಅನಂತರ.... ಸಿಂಹಾಸನದ ಎಡ ಬಲಗಳಲ್ಲಿ (ಮೇಲುಗಡೆ) ಹೊಸದಾಗಿ ನಿರ್ಮಾಣ ಗೊಂಡಿದ್ದ ಇಕ್ಕೆಡೆಯ ಲಕ್ಷ್ಮೀ ಸರಸ್ವತಿಯರ ಬೃಹತ್ ಚಿನ್ನದ ಮಂಟಪಕ್ಕೆ ಭಕ್ತಿಯಿಂದ ಪೂಜೆ ಸಲ್ಲಿಸಿದನು.

ಭೋಜರಾಜನು ಆ ರೀತಿ ಚಿನ್ನದ ಮಂಟಪವನ್ನು ಕಟ್ಟಿಸಲು ಸಾಕ್ಷಾತ್ ಲಕ್ಷ್ಮೀ ಸರಸ್ವತಿಯರು ತನ್ನ ಶುಭಘಳಿಗೆಯಲ್ಲಿ ಕನಸಿನಲ್ಲಿ ಕಾಣಿಸಿಕೊಂಡು ಆ ರೀತಿ ಲಕ್ಷ್ಮೀ ಸರಸ್ವತಿಯರು ಮಂಟಪ ಕಟ್ಟಿಸುವಂತೆ ಪ್ರೇರೇಪಿಸಿದರು.

ಅದರಂತೆ ಮಹಾಮಂತ್ರಿಯು ಭವ್ಯವಾದ ಅಪೂರ್ವ ವಿನ್ಯಾಸವನ್ನೊಳಗೊಂಡ ರತ್ನಖಚಿತ ಲಕ್ಷ್ಮೀ ಸರಸ್ವತಿಯರ ಮಂಟಪ ಕಟ್ಟಿಸಿ ಆ ಮಂಟಪದಲ್ಲಿ ಬೃಹದಾಕಾರದ ಲಕ್ಷ್ಮೀ ಸರಸ್ವತಿಯರ ಶಿಲಾ ಚಿತ್ರವನ್ನು ಸ್ಥಾಪಿಸಿದ್ದನು.

ಯಥಾವಿಧಿವತ್ತಾಗಿ ರಾಜಪುರೋಹಿತರ ಹಾಗೂ ನೂರಾರು ಋತ್ವಿಕ ಬ್ರಾಹ್ಮಣೋತ್ತಮರ ವೇದ ಘೋಷದೊಂದಿಗೆ ಆ ಅಪೂರ್ವ ರತ್ನ ಸಿಂಹಾಸನವನ್ನು ಆರೋಹಣ ಮಾಡಿದನು.

ಆಗ ರಾಜಗೌರವಾರ್ಥವಾಗಿ ಇಪ್ಪತ್ತೊಂದು ತೋಪಿನಿಂದ ಸಂತೋಷದ ಕುರುವಾಗಿ ಗುಂಡು ಹಾರಿಸಲಾಯಿತು

ಸಭಿಕರೆಲ್ಲರೂ ಒಕ್ಕೊರಳಿನಿಂದ ಜಯಕಾರಹಾಕುತ್ತ, ಚಪ್ಪಾಳೆಯ ಸುರಿ ಮಳೆಗೈದರು.

ಅದೆ ವೇಳೆಗೆ ಸರಿಯಾಗಿ ವೈಕುಂಠಲೋಕ - ಬ್ರಹ್ಮಲೋಕದಿಂದ ಆಗಮ್ಮಿಸಿ ಬಂದ ಲಕ್ಷ್ಮೀ ಸರಸ್ವತಿಯರು ಹೊಸದಾಗಿ ನಿರ್ಮಾಣವಾಗಿದ್ದ ಆ ಲಕ್ಷ್ಮೀ ಸರಸ್ವತಿ ಮಂಟಪದಲ್ಲಿ ಕುಳಿತು ಆಶೀರ್ವಾದ ಮಾಡಿದರು.

ಅದ್ಕೆ ಶುಭ ಸಂದರ್ಭದಲ್ಲಿ...... ದೈವಾಂಶ ಸಂಭೂತನೂ ಬ್ರಹ್ಮತೇಜಸ್ಸಿನಿಂದ ಕೂಡಿದವನು ಆದ ಭೋಜರಾಜನ ಪಟ್ಟಾಭಿಷೇಕ ಮಹೋತ್ಸವದ ಅಂಗವಾಗಿ.... ಯಾವ ಶ್ರೀ ರಾಮಚಂದ್ರನ ಪಟ್ಟಾಭಿಷೇಕ ಮಹೋತ್ಸವ ಕಾಲದಲ್ಲಿ.... ಗಗನ ಮಂಡಲದಲ್ಲಿ ಸಮಸ್ತ ದೇವಾನು ದೇವತೆಗಳು ಸೇರಿ ಪುಷ್ಪವೃಷ್ಟಿ ಸುವರ್ಣ ವೃಷ್ಟಿಗರೆದಂತೆ - ಆ ಅಖಂಡ ಪುಣ್ಯಶಾಲಿಯಾದ ಭೋಜರಾಜನಿಗೂ ಸಹ ಬ್ರಹ್ಮವಿಷ್ಣು ಮಹೇಶ್ವರಾದಿಯಾಗಿ ಸಕಲ ದೇವಾನುದೇವತೆಗಳು ಗಗನ ಮಂಡಲದಲ್ಲಿ ಗುಂಪುಗೂಡಿ ಪುಷ್ಪವೃಷ್ಟಿ ಸುವರ್ಣವೃಷ್ಟಿಗರೆದು ಆಶೀರ್ವದಿಸಿ, ಹಾರೈಸಿದ್ದರು.

ಭೋಜರಾಜನು ಸಿಂಹಾಸನವನ್ನಲಂಕರಿಸಿದಂತೆ ಮಹಾಸಭೆ ಪ್ರಾರಂಭವಾಯಿತು.

ಮೊದಲಾಗಿ ರಾಜನರ್ತಕಿಯಿಂದ ಅಮೋಘ ಭರತನಾಟ್ಯ ನೃತ್ಯ ಜರುಗಿತು. ನೃತ್ಯದಿಂದ ಎಲ್ಲರೂ ಅಮಿತಾನಂದಭರಿತರಾದರು. ನಂತರ ಕವಿಗೋಷ್ಠಿ ಪ್ರಾರಂಭವಾಯಿತು.

ಮಹಾಮಂತ್ರಿಗಳು ಆ ಸಭೆಗೆ ಬಂದಿದ್ದ ಚಮತ್ಕಾರ ಕವಿಗಳಲ್ಲಿ ಮೊದಲೇ ವಿನಂತಿಸಿಕೊಂಡು ಕೆಲವೊಂದು ಕವಿತೆಯನ್ನು ರಚಿಸಿ ಓದಲು ವಿನಂತಿಸಿಕೊಂಡಿದ್ದ. ಅದರಲ್ಲೂ ಶೃಂಗಾರ ಕವಿತೆಗೆ ಹೆಚ್ಚು ಗಮನ ಕೊಡಲಾಗಿತ್ತು. ಅದರಲ್ಲಿ ಭೋಜನ ವಿವಾಹದ ಪ್ರಸ್ತಾಪವೂ ಇತ್ತು.

"ಗಂಧರ್ವ ಪುರುಷನಂತೆ ಸರ್ವಾಂಗ ಸುಂದರನೂ ಸಕಲ ಸದ್ಗುಣ ಸಂಪನ್ನನೂ ಮಿಗಿಲಾಗಿ ಸಕಾಲವಾಗಿ ವಿವಾಹ ಯೋಗ್ಯನೂ ಆದ ಭೋಜರಾಜನು ತನ್ನ ವಿವಾಹದ ಕಡೆ ಗಮನ ಹರಿಸಲಿ. ಈ ರಾಜ್ಯಕ್ಕೆ ಭೋಜರಾಜರ ಪುರುಷ ಸೌಂದರ್ಯಕ್ಕೆ ಅನುರೂಪಳಾದ ಸರ್ವಾಂಗ ಸುಂದರಳಾದ ಮಹಾಲಕ್ಷ್ಮೀ ಸ್ವರೂಪಳಾದ ಪಟ್ಟ ಮಹಿಷಿಯೊಬ್ಬಳು ಬರುವಂಥಾಗಲಿ ಎಂಬ ಭವಿಷ್ಯದ ಚಿತ್ತಾಕರ್ಷಕ ದೃಷ್ಟಿಯಿಂದ ಸಮಯ ಚತುರನಾದ ಮಹಾಮಂತ್ರಿಯೂ ಪಟ್ಟಾಭಿಷೇಕ ಮಹೋತ್ಸವಕ್ಕೆ ಆ ಮೊದಲೆ ಕೆಲವಾರು ರಸಿಕ ಕವಿಗಳಿಗೆ ಹುರಿದುಂಬಿಸಿ ಹೆಣ್ಣಿನ ವಿಷಯದಲ್ಲಿ ಕಾಮ ಪ್ರಚೋದನೆಯಾಗಬಲ್ಲ ರಸಿಕತನದ ಕೆಲವು ಸುಂದರ ಮಧುರ ಶ್ಲೋಕಗಳನ್ನು ಸಭೆಯಲ್ಲಿ ಚಮತ್ಕಾರದಿಂದ ಹೇಳಿ ಭೋಜನ ಮನಸ್ಸನ್ನು ವಿವಾಹದ ಕಡೆಗೆ ಹರಿಯುವಂತೆ ಮಾಡಲು ಆ ಕವಿಗಳಿಗೆ ಹುರಿದುಂಬಿಸಿದ್ದನು."

ವಿದ್ವನ್ಮಣಿಗಳ ಮಧ್ಯೆ ಕುಳಿತಿದ್ದ ಆ ಚಮತ್ಕಾರ ಕವಿಗಳು ಅದೇ ಸಮಯವನ್ನು ಕಾಯುತ್ತಿದ್ದರು. ಆ ಸಮಯ ಒದಗಿ ಬಂದಿತ್ತು.

"ಈಗ ಚಮತ್ಕಾರ ಕವಿಗಳಿಂದ ಶೃಂಗಾರ ಕವಿಗೋಷ್ಠಿ" ಎಂದು ವಂಧಿ ಮಾಗಧರು ಸಭಿಕರೆಲ್ಲರಿಗೂ ಕೇಳಿಸುವಂತೆ ಘೋಷಿಸಿದರು.

ಆಗ ಚಮತ್ಕಾರ ಶೃಂಗಾರ ಕವಿಯೊಬ್ಬರು ತಾನು ಉಪಸ್ಥಿತನಿದ್ದ ಸ್ಥಳದಿಂದ ಎದ್ದು ಬಂದು ವೇದಿಕೆಯಲ್ಲಿ ನಿಂತು ಭೋಜರಾಜ ಮಹಾರಾಜರಿಗೆ ಗೌರವಿಸಿ ನುಡಿಯುತ್ತಾ "ಶ್ರೀಮಾನ್ ಮಹಾರಾಜ ರಾಜಾಧಿರಾಜ ರತ್ನಸಿಂಹಾಸನಾಧೀಶ್ವರರಿಗೆ ಜಯವಾಗಲಿ" ಎಂದು ಹೇಳಿ ತನ್ನ ಕವಿಗೋಷ್ಠಿಯನ್ನು ಈ ರೀತಿ ಪ್ರಾರಂಭಿಸಿದನು.

"ಸಹಕಾರ ಕುಸುಮಕೇಸರ ನಿಕರಭರಾ ಮೋದ ಮೂರ್ಛಿತ ದಿಗಂತೇ ।
ಮಧುರ ಮಧು ವಿಧುರ ಮಧುಪೇ ಮಧ್ ಭವೇತ್ ಕಸ್ಯನೋತ್ಕಂದಾ ॥

- ಮಾವಿನ ಪುಷ್ಪಗಳ ಸುಗಂಧದಿಂದ ಎಲ್ಲೆಡೆಯಲ್ಲೂ ಪರಿಮಳವು ಹೊರಸೂಸುವುದು. ಪರಸ್ಪರಪ್ರೇಮಿಗಳಾದ ಭ್ರಮರಗಳು ಮಧುವನ್ನು ಕುಡಿದು ಉನ್ಮತ್ತವಾಗುವುವು. ಅಂತಹ ಮಧುರ ಸಮಯದಲ್ಲಿ ಯೌವನಭರಿತ ನರನಾರಿಯರಲ್ಲಿಯೂ ಅಲ್ಲದೆ ಪ್ರಾಣಿಗಳಲ್ಲೂ ಸಹ ಕಾಮವಾಸನೆ ಉಂಟಾಗುವುದು ಪ್ರಕೃತಿನಿಯಮ. ಅಂತೆಯೇ ವಸಂತ ಮಾಸವಾದ ಈ ಮಾಸವು ತಾರುಣ್ಯದ ಹೊಸ್ತಿಲಲ್ಲಿ ಕಾಲಿರಿಸುತ್ತಿರುವಂಥ ಸರ್ವಾಂಗ ಸುಂದರ ಪುರುಷರು ಸುಂದರ ಸ್ತ್ರೀಯರನ್ನು ಅದೇ ರೀತಿ ಸುಂದರ ವಾರಾಂಗನೆಯರಾದ ಸ್ತ್ರೀಯರು ಪುರುಷರನ್ನು ಸ್ವಭಾವಿಕವಾಗಿಯೇ ಆಕರ್ಷಿತರಾಗುವರು. (ಬಯಸುವರು) ಎಂದು ಶ್ಲೋಕ ಮತ್ತು ಶ್ಲೋಕಾರ್ಥವನ್ನು ವಿವರಿಸಿ ನುಡಿದನು. ಆಗ ಎಲ್ಲರೂ ರಾಜನ ಮುಖವನ್ನು ನೋಡುತ್ತ ಚಪ್ಪಾಳೆ ಸುರಿಮಳೆಗರೆದರು.

ಮತ್ತೊರ್ವ ರಸಿಕ ಕವಿಯು ಶಿಶಿರ ಋತುವನ್ನು ತನ್ನ ರಸಿಕತೆಯಿಂದ ಗುಣಗಾನ ಮಾಡುತ್ತಾ

"ಚುಂಬತೋ ಗಂಡ ಬಿತ್ತಿರಲಕವತಿ ಮುಖೇ
ಸೀತ್ಕೃತಾನ್ಯಾದಧಾನಾ
ವಕ್ಷಸ್ತೂತ್ಕಂಚುಕೇಷು ಸ್ತನಭರಪುಲ ಕೋದ್
ಭೇಧ ಮಾಪಾದ ಯಂತಃ ।
ಉರೂನಾ ಕಂಪಯಂತಃ ಪೃಥುಜಘನ
ತಟಾತ್ಸ್ರಂಸಯಂತೋ ಶುಕಾನಿ
ವ್ಯಕ್ತಂ ಕಾಂತಾಜನಾನಾಂ ವಿಟಚರಿತ
ಭೃತಃ ಶೈಶಿರಾ ವಾಂತಿ ವಾತಾಃ ॥

- ಸುಮ ಕೋಮಲೆಯರಾದ ಸ್ತ್ರೀಯರ ಕೇಶಯುಕ್ತ ಗಲ್ಲಗಳನ್ನು ಚುಂಬಿಸುತ್ತ, ಅತಿಯಾದ ಚಳಿ ಇರುವುದರಿಂದ ತರುಣಿಯರ ಬಾಯಿಂದ ಸುಮಧುರವಾಗಿ

ಹೊರಬರುವ 'ಸೀ - ಸೀ' ದನಿಯನ್ನು ಹುಟ್ಟಿಸುತ್ತ, ರವಿಕೆ ರಹಿತ ತೆರೆದುಕೊಂಡಿರುವ ಕುಚದ್ವಯಗಳನ್ನು ರೋಮಾಂಚನ ಗೊಳಿಸುತ್ತ, ಹಾಗೂ ಬಾಳೆದಿಂಡಿನಂತೆ ದಷ್ಟಪುಷ್ಟವಾದ ತೊಡೆಗಳ ಮೇಲಿನ ವಸ್ತ್ರಗಳನ್ನು ಶಿಶಿರ ಋತುವಿನ ಮಂದವಾದ ಗಾಳಿಯು ತನ್ನ ಚೇಷ್ಟೆಯಿಂದ ಆ ತೆಳುವಾದ ವಸ್ತ್ರವನ್ನು ಸರಿಸುತ್ತ ಕೋಲಾಹಲವನ್ನುಂಟು ಮಾಡುವುದು" ಎಂದನು.

ಅದಕ್ಕೆ ಆ ಮಹಾ ಸಭೆಯಲ್ಲಿದ್ದ ಪ್ರತಿಯೊಬ್ಬರೂ ಸೋಮರಸವನ್ನು ಕುಡಿದವರಂತೆ ಮೈ ಮರೆತು "ವ್ಹಾ ವಾ್ಹ" ಎನ್ನುತ್ತ ನಗೆಗಡಲಿನಲ್ಲಿ ತೇಲಿದರು.

ಅರಮನೆಯ ಉಪ್ಪರಿಗೆಯಲ್ಲಿ ಕುಳಿತಿದ್ದ ರಾಜಮಹಿಳೆಯರಿಗಂತೂ ಹೃದಯಕ್ಕೆ ಕಚಗುಳಿ ಇಟ್ಟಂತಾಗಿ ತಮ್ಮ ತಮ್ಮ ಸೀರೆಯ ಸೆರಗನ್ನು ಮುಖಕ್ಕೆ ತೆರೆ ಹಿಡಿದು ಮುಸಿ ಮುಸಿ ನಗುತ್ತಿದ್ದರು.

"ಎಂಥ ರಸಿಕ ಕವಿಗಳಪ್ಪಾ, ಈ ಕವಿಗಳು" - ಎಂಬ ಉದ್ಗಾರದ ತುಟಿಯಂಚಿನ ಮಾತುಗಳು ಕೇಳಿ ಬರುತ್ತಿತ್ತು.

ಆಗ ಮಗದೊಬ್ಬ ಕವಿ ಶಿಖಾಮಣಿಯೂ ಸ್ತ್ರೀ ಪುರುಷರ ಬಗ್ಗೆ ಮತ್ತೊಂದು ರೀತಿಯಲ್ಲಿ ಹೇಳುತ್ತಾ,

"ಮುಖೇನ ಚಂದ್ರಕಾಂತೇನ ಮಹಾನೀಲೈಃ
ಶಿರೋರುಹೈಃ ।
ಕರಾಭ್ಯಾಂ ಪದ್ಮರಾಗಾಭ್ಯಾಂ ರೇಜೇ
ರತ್ನಮಯೀವ ಸಾ ॥

- ಎಂದು ಶ್ಲೋಕಿಸಿ ಅದರ ಪೂರ್ಣಾರ್ಥವನ್ನು ಹೇಳುತ್ತಾ,

"ಯಾವ ಸುಂದರಾಂಗನೆಯರಾದ ಯೌವನಭರಿತ ತರುಣಿಯರು, ಚಂದ್ರಕಾಂತ ಮಣಿಯಂತಹ ಮುಖ, ನೀಲವರ್ಣದ ದಟ್ಟವಾದ ನೀಳಕೇಶರಾಶಿ, ಹಾಗೂ ಪದ್ಮರಾಗದಂತ ಎರಡು ಕೈಗಳಿಂದ ಆ ಯುವತಿಯು ರತ್ನಮಯಿಯಾಗಿ ಕಾಣಿಸುತ್ತಾಳೆ. ಅಷ್ಟೇ ಅಲ್ಲದೆ ಬಹುರೂಪವಂತಳಾದ ಅವಳು ಪೂರ್ಣಚಂದ್ರಬಿಂಬದಂತೆ ಅತಿಶಯ ಕಾಂತಿಯುಕ್ತವಾದ ತನ್ನ ಮುಖ ಕಮಲದಿಂದ, ದಟ್ಟ ನೀಲವರ್ಣದ ಕೇಶವನ್ನು, ಕಮಲದಂತೆ ಅಂದಮಯವಾದ ಕೈಗಳಿಂದ ಕೂಡಿದವಳಾಗಿ ಸುಂದರ ಪುರುಷರ ಕಣ್ಣಿಗೆ ಅಪೂರ್ವ ಸುಂದರಿಯಾಗಿ ಕಾಣುವಳು. ಅರ್ಥಾತ್ ತರುಣಿಯರು ನವರತ್ನಗಳಿಗೂ ಮಿಗಿಲಾದ ಮಹಾರತ್ನಗಳ ಖಣಿಗಳಿದ್ದಂತೆ. ಯಾರೇ ರಾಜನು ವಜ್ರವೈಢೂರ್ಯಾದಿ ನವರತ್ನಗಳನ್ನು ಹೊದಿದ್ದಾಗ್ಯೂ ಸಹ ಆ ಅಂಥ ಮಹಾರತ್ನ ಒಂದನ್ನು ಹೊಂದಿರದಿದ್ದರೆ....... ಮಿಕ್ಕ ರತ್ನಗಳು (ನವರತ್ನ) ಶೋಭಿಸಲಾರವು" ಎಂದು ಪ್ರಶಂಶಿಸಿ ರತ್ನಸಿಂಹಾಸನದಲ್ಲಿ ಕುಳಿತಿದ್ದ ರಾಜ ಭೋಜರಾಜನನ್ನೇ ದೃಷ್ಟಿಸಿ ನೋಡುತ್ತ ನುಡಿದಿದ್ದ ಆ ಕವಿ.

ಆ ರೀತಿಯಾಗಿ ಇನ್ನೂ ಅನೇಕ ರಸಿಕ ಕವಿಗಳು ತಮ್ಮ ತಮ್ಮ ಕವಿ ಚಮತ್ಕಾರದ ವಾಕ್ ಬಾಣದಿಂದ ಭೋಜರಾಜನ ಮನಸ್ಸನ್ನು ಶೃಂಗಾರ ಸಾಗರದತ್ತ ಎಳೆದೊಯ್ದಿದ್ದರು.

ಚಾಣಾಕ್ಷರೇ ಆದ ಮಹಾಮಂತ್ರಿಗಳು ರಾಜರು ಕ್ಷಣಕ್ಷಣಕ್ಕೂ ವಿವರ್ಣವಾಗುತ್ತಿದ್ದುದನ್ನು ಬಹು ಸೂಕ್ಷ್ಮ ರೀತಿಯಲ್ಲಿ ಗಮನಿಸುತ್ತಿದ್ದರು.

ಕವಿಗೋಷ್ಠಿ ಮುಗಿದಂತೆ ದೇಶದ ಕ್ಷೇಮಾಭ್ಯುದಯವನ್ನು ಕುರಿತು ಹಾಕಿಕೊಂಡಿರುವ ಹಲವಾರು ಯೋಜನೆಗಳನ್ನು ಮಹಾಮಂತ್ರಿಗಳು ವಂಧಿ ಮಾಗಧರ ಮೂಲಕ ಸಭೆಯಲ್ಲಿ ಮಂಡಿಸಿದರು. ಆಗ ವಂದಿ ಮಾಗಧರು ಸಭಿಕರಲ್ಲಿ ವಿನಂತಿಸಿ ಹೇಳುತ್ತಾ "ಪ್ರಭುಗಳಲ್ಲಿ ವಂದನೆಗಳು. ಮಹಾಜನಗಳಿಗೆ ವಂದನೆಗಳು. ಮಹಾಧರ್ಮದಿಂದ ನಮ್ಮನ್ನಾಳುತ್ತಿರುವ ಭೋಜರಾಜ ಪ್ರಭುಗಳು ನಮ್ಮ ದೇಶವಾದ ಈ ಧಾರಾನಗರವೇ ಮಾತ್ರವಲ್ಲದೆ ಆರ್ಯಾವರ್ತದ(ಅಖಂಡ ಭಾರತ) ಚಪ್ಪನ್ನಾರು ದೇಶಗಳೂ ಸಹ ಸದಾ ಸುಭಿಕ್ಷವಾಗಿರಲು ಹಲವಾರು ಮುಖ್ಯ ಯೋಜನೆಗಳನ್ನು ಹಾಕಿಕೊಂಡಿದ್ದಾರೆ. ಅವುಗಳನ್ನು ಈ ಮಹಾಸಭೆಯಲ್ಲಿ ಎಲ್ಲರಿಗೂ ತಿಳಿಯುವ ಹಾಗೆ ಮಂಡಿಸುತ್ತಿದ್ದಾರೆ" ಎಂದು ಹೇಳಿ. ಯೋಜನೆಗಳನ್ನು ಓದುತ್ತಾ "ಪ್ರಭುಗಳು ಮೊಟ್ಟ ಮೊದಲನೆಯದಾಗಿ ಗ್ರಾಮಾಭಿವೃದ್ಧಿ ಮಾಡುತ್ತಿರುವ ರೈತರ ಅಭಿವೃದ್ಧಿಗಾಗಿ ಪ್ರತಿಯೊಂದು ದೇಶದಲ್ಲೂ ಇರುವ ಪ್ರತಿಗ್ರಾಮಗಳಲ್ಲೂ ನಿಷ್ಠೆಯುಳ್ಳವರಾದ ಸತ್ಯಸಂಧರೇ ಆದ ಪ್ರಜೆಗಳಿಗೆ ಆಗಲಿ. ವಂಚಿಸದ ನಿಷ್ಪಕ್ಷಪಾತರಾದ ಸ್ವಾರ್ಥರಹಿತರಾದ ಪ್ರಶಾಸ್ತಾ, ಸಮಾಹರ್ತಾ, ಸಂವಿಧಾತಾ ಲೇಖಕ, ಸಾಕ್ಷಿ - ಈ ಐದು ಅಧಿಕಾರಿಗಳನ್ನು ಪ್ರತಿಗ್ರಾಮಗಳಲ್ಲೂ ನೇಮಿಸಲಾಗುತ್ತದೆ. ಇದರಿಂದ ದೇಶದ ಅಭಿವೃದ್ಧಿಗೆ ಬಹು ಉಪಯುಕ್ತವಾಗಬಲ್ಲದು." ಎಂದು ಘೋಷಿಸಿದರು. "ಆಗ ಬಹುಮುಖ್ಯವಾಗಿ ಈ ಆರ್ಯಾವರ್ತ ದೇಶವು ಯಾವ ಕಾಲಕ್ಕೂ ಪರಾವಲಂಬನೆಯಾಗದ ಹಾಗೆ ಅಂದರೆ ವಿದೇಶದಿಂದ ಆರ್ಥಿಕಕ್ಕಾಗಿ ಯಾವಕಾಲಕ್ಕೂ ಕೈ ಚಾಚದಂತೆ ನಮ್ಮ ದೇಶವು ವಿಶ್ವದಲ್ಲಿಯೇ ಆದರ್ಶಮಯವಾದ ಮಾದರಿ ದೇಶವಾಗಿ ಮಾಡಬೇಕೆಂಬ ದೃಷ್ಟಿಯಿಂದ ಪ್ರತಿಯೊಬ್ಬ ಪ್ರಜೆಯೂ ಸಹ ಕಷ್ಟಪಟ್ಟು ದುಡಿಯುಬೇಕು..... ಸಾಲವೆಂಬುದು ಶೂಲ...... ಸಾಲಕ್ಕಾಗಿ ಪ್ರಜೆಗಳು ಪ್ರಭುಗಳನ್ನು (ಸರ್ಕಾರ) ಮೊರೆ ಹೊಕ್ಕುವುದು ಪ್ರಭುಗಳು ತಮ್ಮ ದೇಶದ ಆರ್ಥಿಕಕ್ಕಾಗಿ ವಿದೇಶದಲ್ಲಿ ಮೊರೆಹೊಕ್ಕುವುದು ಬಹು ಹೀನಾಯವಾದದ್ದು. ಆದ್ದರಿಂದ ಪ್ರಜೆಗಳು ಪ್ರತಿಯೊಬ್ಬರೂ ಸಹ ಆರ್ಥಿಕವಾಗಿ ಸಂತುಷ್ಟರಾಗಿರಬೇಕೇ ಹೊರತು ಧನಾಪೇಕ್ಷಿತರಾಗಿರಬಾರದು" ಎಂದು ನಿರೂಪಿಸಿ ಹೇಳಿದಾಗ ಮಹಾಸಭೆಯಲ್ಲಿ ನೆರೆದಿದ್ದ ಸಾಮಂತ ರಾಜರಾದಿಯಾಗಿ ಎಲ್ಲರೂ ಹರ್ಷದಿಂದ ಚಪ್ಪಾಳೆ ತಟ್ಟುತ್ತಾ ಭೋಜರಾಜನ ಆಳ್ವಿಕೆಯನ್ನು ಪ್ರಶಂಸಿಸಿ ಸಂತೋಷ ಪಡಿಸಿದ್ದರು.

ನಂತರ ಮುಂದುವರಿದ ಮಹಾಮಂತ್ರಿಗಳು.

"ಈ ನಮ್ಮ ದೇಶದಲ್ಲಿ ಬಹುಮುಖ್ಯವಾಗಿ ಆಹಾರಧಾನ್ಯಗಳಿಗಾಗಿ ಬಹುರೀತಿಯಲ್ಲಿ ಶ್ರಮಿಸುತ್ತಿರುವ ರೈತರ (ವ್ಯವಸಾಯ) ಅಭಿವೃದ್ಧಿಗಾಗಿ ಹಾಗೂ ಅವರ ಹಿತಚಿಂತನೆಗಾಗಿ ಧನಾಪೇಕ್ಷಿತರಾದ ವ್ಯವಸಾಯಗಾರರಿಗೆ ನೂರಕ್ಕೆ ಒಂದು ವರಹದಂತೆ ನ್ಯಾಯವಾದ ಬಡ್ಡಿ ರೂಪದಲ್ಲಿ ಆರ್ಥಿಕ ಸಹಾಯ ನೀಡಲು ನಿರ್ಧರಿಸಿದೆ" ಎಂದು ಘೋಷಿಸಿದರು.

ಆಗ ಸಭಿಕರಲ್ಲಿ ನೂರಾರು ಜನರು ಎದ್ದು ನಿಂತು ಒಕ್ಕೊರಲಿನಿಂದ ಧ್ವನಿಗೈಯುತ್ತ "ಈ ನಮ್ಮ ದೇಶದಲ್ಲಿ ಪ್ರತಿಯೊಬ್ಬರೂ ಧನದಿಂದಲೇ ಆಗಲಿ ಧಾನ್ಯದಿಂದಲೇ ಆಗಲಿ ಸಂತುಷ್ಟರಾಗಿದ್ದಾರೆ. ಕಾರಣ ಪ್ರತಿಯೊಬ್ಬ ರೈತನೂ ಸಹ "ಶ್ರದ್ಧಾಹೀ ಪರಮಗತಿಹೀ" ಎಂಬ ನಾಣ್ನುಡಿಯಂತೆ ಬಹುಶ್ರದ್ಧೆಯಿಂದಲೂ ಆಸಕ್ತಿಯಿಂದಲೂ ದೇಶದ ಏಳಿಗೆಯ ದಿವ್ಯ ದೃಷ್ಟಿಯಿಂದಲೂ. ರಾಜ ಬೊಕ್ಕಸವೂ ಸದಾಕಾಲವು ತುಂಬಿ ತುಳುಕಾಡುತ್ತಿರಬೇಕೆಂಬ ಸ್ಥಿತಿ ಪ್ರಜ್ಞೆಯಿಂದಲೂ. ಇದ್ದಾರೆ" ಅದರಲ್ಲೂ ನೆರೆದಿದ್ದ ಪ್ರಜೆಗಳು 'ಉಘೇ ಉಘೇ' (ಒಪ್ಪಿಗೆ) ಎಂದು ಒಕ್ಕರಲಿನಿಂದ ಧ್ವನಿ ಮೊಳಗಿಸಿದರು.

"ಪ್ರತಿ ಗ್ರಾಮಗಳಲ್ಲೂ ಆಗಿಂದಾಗ್ಗೆ ಸಮಾಜಘಾತುಕ ಶಕ್ತಿ, ದುಷ್ಟ ಜನರಿಂದ ನಡೆಯಬಹುದಾದ ಕಳ್ಳತನ, ಸುಲಿಗೆ ವಂಚನೆ ದರೋಡೆ ಇವುಗಳ ಹಾವಳಿ ತಪ್ಪಿಸಲು ನಿಷ್ಠಾವಂತರಾದ ರಾಜಧೂತರನ್ನು ಹಾಗೂ ಮೇಲ್ವಿಚಾರಕ ಅಧಿಕಾರಿಯನ್ನು ಪ್ರತಿ ಗ್ರಾಮ-ಊರುಗಳಲ್ಲೂ ನೇಮಿಸಲು ತೀರ್ಮಾನಿಸಲಾಗಿದೆ" ಎಂದು ಘೋಷಿಸಿದರು.

ಆಗ ಕೆಲವಾರು ಪ್ರಜೆಗಳು ಸಭೆಯಲ್ಲಿ ಎದ್ದು ನಿಂತು ಏಕಮನಸ್ಕರಾಗಿ ಮಾತನಾಡುತ್ತಾ,

"ಮಹಾಪ್ರಭುಗಳಲ್ಲಿ ವಿನಂತಿ, ನಮ್ಮ ದೇಶದಲ್ಲಿ...., ಸದಾ ಪ್ರಜಾಹಿತ ಚಿಂತಕರಾದ, ದೇಶದ ಏಳಿಗೆಗಾಗಿ ಸದಾ ಶ್ರಮಿಸುತ್ತಿರುವ ನ್ಯಾಯಪರರೇ ಆದ, ನಿಷ್ಪಕ್ಷಪಾತರೂ ಆದ ಚಾಣಾಕ್ಷರೂ ಆದ ಮಹಾಮಂತ್ರಿಗಳ ಕಾರ್ಯದಕ್ಷತೆಯಲ್ಲಿ ಅಂತಹ ಯಾವುದೇ ಸಮಾಜಘಾತುಕ ಶಕ್ತಿಯಾಗಲಿ, ದರೋಡೆ - ಕಳ್ಳತನ ಸುಲಿಗೆಯಾವುದೊಂದೂ ಕನಸು ಮನಸಿನಲ್ಲೂ ಇಲ್ಲವಾಗಿದೆ. ಶ್ರೇಷ್ಠ ಸಮಾಜವನ್ನು ಬಯಸುವ ಪ್ರತಿಯೊಬ್ಬ ಪ್ರಜೆಯೂ ಸಹ ಎಲ್ಲೆಡೆಯಲ್ಲೂ ಸುಸ್ಥಿತಿಯಲ್ಲಿ ಸಾಗುತ್ತಿದ್ದಾರೆ. ಕಳ್ಳತನ ಸುಲಿಗೆ ವಂಚನೆ ಎಂಬ ಕ್ರೂರ ಶಬ್ದವೇ ಕೇಳಿಬರುತ್ತಿಲ್ಲ. ಈ ದೇಶದ ಸಮಸ್ತ ಪ್ರಜೆಗಳು ಸತ್ಯಸಂಧರಾಗಿ ಜೀವನ ಸಾಗಿಸುತ್ತಿದ್ದಾರೆ. ದೇಶದ ಕೀರ್ತಿಗೆ (ರಾಜ್ಯ ಕೀರ್ತಿ) ಪ್ರತಿಯೊಬ್ಬರೂ ಕಂಕಣ ಬದ್ಧರಾಗಿದ್ದಾರೆ." ಎಂದು ತಿಳಿಸಿದರು.

ಆಗ ಸಿಂಹಾಸನದಲ್ಲಿ ಅಲಂಕೃತನಾಗಿದ್ದ ಭೋಜರಾಜನು "ಪರಮಸಂತೋಷ" ಎಂದು ಹರ್ಷದಿಂದ ನುಡಿದ.

ಮಹಾಮಂತ್ರಿಗಳು ಮತ್ತೊಂದು ಯೋಜನೆಯೊಂದನ್ನು ತಿಳಿಸುತ್ತ, "ಪ್ರಭುಗಳು ತಮ್ಮ ತಂದೆಯವರಾದ ಸಿಂಧೂಲರಾಜರು ಅನುಸರಿಸುತ್ತಿದ್ದಂತೆ ಬ್ರಾಹ್ಮಣ, ವೈಶ್ಯ, ಶೂದ್ರ ಈ ಮೂರು ವರ್ಣಗಳ ಪಾಲನೆಯ ವಿಷಯದಲ್ಲಿ ಪಕ್ಷಪಾತ ತೋರದೆ - ಎಲ್ಲ ಸಮಸ್ತ ಪ್ರಜೆಗಳು ಸಹ ಒಂದೇ ಧರ್ಮ ಒಂದೇ ನೀತಿ ಒಂದೇ ರೀತಿಯಿಂದ ನಿಷ್ಪಕ್ಷಪಾತವಾಗಿ ದೇಶದ ಏಳಿಗೆಗಾಗಿ ಪ್ರತಿಯೊಬ್ಬರೂ ಶ್ರಮಿಸುವಂತಹ ಯೋಜನೆಯನ್ನು ಕೈಗೊಂಡಿದ್ದಾರೆ" ಎಂದು.

ಸಭಿಕರಿಂದ ಯಾವುದೊಂದು ಟೀಕೆ ಇಲ್ಲದೆ 'ಉಘೆ ಉಘೆ' ಎಂಬ ಜಯಕಾರ ವಾಣಿ ಮೊಳಗಿತು.

ಅನಂತರ ಮುಂದುವರಿದು ಮಾತನಾಡಿದ ವಂದಿಮಾಗಧರು.

"ಆದರಂತೆ ಇಡಿ ವಿಶ್ವದಲ್ಲಿಯೇ ಅತಿಶ್ರೇಷ್ಠವಾದ, ಅನಾದಿಕಾಲದಿಂದಲೂ (ಬಹು ಪ್ರಾಚೀನ ಕಾಲದಿಂದಲೂ) ಎಂದೆಂದಿಗೂ ಬತ್ತದ ಜೀವನದಿಗಳಂತೆ ಹಾಸುಹೊಕ್ಕಾಗಿ ನಮ್ಮ ಪೂರ್ವಿಕರಿಂದ ಆಚರಿಸುತ್ತಾ ಬಂದಿರುವ ನಮ್ಮ ಸಂಸ್ಕೃತಿ ಸಮಾಜ ಇವುಗಳನ್ನು ಕಾಪಾಡಿಕೊಂಡು ಬರುವುದೇ ನಮ್ಮ ಪ್ರಥಮ ಗುರಿಯಾಗಿದೆ. ಮಿಗಿಲಾಗಿ ಧರ್ಮಜ್ಞರಾದ ನಮಗೆ ಧರ್ಮ ರಕ್ಷಣೆಯೆ ಪ್ರಥಮ ಆದ್ಯ ಕರ್ತವ್ಯವಾಗಿದೆ.

ನಮ್ಮ ಆರ್ಯಾವರ್ತದ (ಭರತಖಂಡ) ಸಮಸ್ತ ಪ್ರಜೆಗಳು ಸಹ ಧರ್ಮರಕ್ಷಣೆಗಾಗಿ ಹಾಗೂ ಸಮಾಜ ಸಂಸ್ಕೃತಿ ಇವುಗಳ ಏಳಿಗೆಗಾಗಿ ಪಣ ತೊಟ್ಟು ಮುಂದೆ ಸಾಗಬೇಕು. ಧಮ ರಕ್ಷಣೆಗಾಗಿ ಇಲ್ಲಿ ಉಪಸ್ಥಿತರಾಗಿರುವ ಚಪ್ಪನ್ನಾರು ದೇಶದ ರಾಜರುಗಳು ಸಹ ಕಂಕಣ ಬದ್ಧರಾಗಿ ಪಣ ತೊಟ್ಟು ಗುರಿ ಸಾಧಿಸಬೇಕು. 'ಧರ್ಮೋ ರಕ್ಷತಿ ರಕ್ಷಿತಹ' ಎಂಬ ದೇವವಾಣಿಯಂತೆ ನಾವುಗಳು ಆ ಧರ್ಮದ ಹಾದಿಯಲ್ಲಿ ಸಾಗುತ್ತ ಯಶಸ್ಸನ್ನು ಕೀರ್ತಿಯನ್ನು ಪಡೆಯಬೇಕು ಎಂದರು. ಪಟ್ಟಾಭಿಷೇಕ ಮಹೋತ್ಸವದ ಮಹಾ ಸುದಿನವಾದ ಅಂದು ಭೋಜರಾಜನ ಮಹಾ ಅಪೇಕ್ಷೆಯಂತೆ ಧಾರಾನಗರದಲ್ಲಿ ಆಗಮಿಸಿದ್ದ ಹತ್ತುಲಕ್ಷ ಪ್ರಜೆಗಳಿಗೆ ಯಾವುದೇ ತಾರತಮ್ಯವಿಲ್ಲದ ರೀತಿಯಲ್ಲಿ - ಭಕ್ಷ್ಯ - ಭೋಜ್ಯ - ಲೇಹ್ಯ ಜೋಷ್ಯ ಪಾನಿಯಗಳಿಂದ ಕೂಡಿ ಪುಷ್ಕಳ ರಾಜಭೋಜನವನ್ನು ಏರ್ಪಡಿಸಿದ್ದನು. ರಾಜ ಭೋಜನದಿಂದ ಪ್ರತಿಯೊಬ್ಬರೂ ಸಂತುಷ್ಟರಾದರು.

ರಾಜ ಭೋಜನದಿಂದ ತೃಪ್ತರಾದ ಎಲ್ಲಾ ಪ್ರಜೆಗಳು ವೀಳ್ಯವನ್ನು ಜಗಿಯುತ್ತ ಭೋಜರಾಜನನ್ನು ಅನೇಕ ರೀತಿಯಲ್ಲಿ ಗುಣಗಾನ ಮಾಡುತ್ತ ತಮ್ಮ ತಮ್ಮ ಮನೆಯನ್ನು ಸೇರಿದರು.

# ಭೋಜರಾಜನ ರಾಜ್ಯಾಡಳಿತ ವೈಖರಿ

ಸದ್ಧರ್ಮ ದುರಂಧರನೂ, ರಾಜನೀತಿ ವಿಶಾರದನೂ, ಅಮಿತ ಪರಾಕ್ರಮಿಯೂ, ಪ್ರಜಾಪ್ರೇಮಿಯೂ ಅಜಾತ ಶತ್ರುವು ಆದ ಭೋಜರಾಜನು ಎಂದಿನಂತೆ ಆ ದಿನವೂ ಸಹ ತನ್ನ ಸಕಲ ರಾಜ ಗೌರವ, ರಾಜ ಪರಿವಾರದೊಂದಿಗೆ ನಿತ್ಯವೈಭವದಿಂದ ಕೂಡಿದ ಸಭಾ ಭವನಕ್ಕೆ ಬಿಜಯ ಮಾಡಿದನು.

ಆ ಮಹಾ ಸಭೆಯಲ್ಲಿ ಅನೇಕ ಋಷಿಮುನಿ, ತಪೋಮುನಿಗಳಿಂದಲೂ ಅಷ್ಟದಿಗ್ಗಜರಾದ ಆಸ್ಥಾನ ಕವಿಗಳಿಂದಲೂ ಸಂಸ್ಕೃತ ಪಂಡಿತರಿಂದಲೂ, ವ್ಯಾಕರಣ ಪಂಡಿತರಿಂದಲೂ ಅನೇಕ ಕಲಾವಿದರಿಂದಲೂ ವಿಪ್ರೋತ್ತಮರಿಂದಲೂ ಪ್ರಮುಖ ಪ್ರಜೆಗಳಿಂದಲೂ ತುಂಬಿ ನೆರೆದಿತ್ತು.

ವಂಧಿಮಾಗಧರು ರಾಜಪರಾಕು ಹೇಳುತ್ತಾ ಮಹಾರಾಜನಿಗೆ ಗೌರವ ಸಲ್ಲಿಸಿದ್ದರು. ಮಹಾಸಭೆ ಪ್ರಾರಂಭವಾಯಿತು.

ಮೊದಲಾಗಿ ಸಭಿಕರೆಲ್ಲರ ಸಂತೋಷಕ್ಕಾಗಿ ಅದ್ಭುತವಾದ ಸಂಗೀತ ಕಛೇರಿಯೊಂದನ್ನು ಏರ್ಪಡಿಸಿದ್ದರು.

ಅದರಂತೆ ಜೋಡಿ ವೀಣೆ, ಜೋಡಿ ಮೃದಂಗ, ಘಟ, ಪಿಟೀಲು, ಕೊಳಲು ಮೋರ್ಚಿಂಗು ಕಂಚಿನ ತಾಳ ಮುಂತಾದ ಮಧುರಮಯ ಪಕ್ಕವಾದ್ಯಗಳಿಂದ ಕೂಡಿದ ಅಮೋಘ ಸಂಗೀತ ಕಛೇರಿ ಜರುಗಿತು.

ಆ ಮಹಾಸಭೆಯಲ್ಲಿ ಒಂದಿಷ್ಟು ಹೊತ್ತು ರತ್ನಸಿಂಹಾಸನವನ್ನಲಂಕರಿಸಿದ್ದ ಭೋಜರಾಜನಾದಿಯಾಗಿ ಎಲ್ಲರೂ ಸಂಗೀತಲೋಕದಲ್ಲಿ ತಲ್ಲೀನರಾಗಿದ್ದರು.

ನಂತರ ಮಹಾ ಮಂತ್ರಿಗಳು ಆ ದಿನ ಮಹಾಸಭೆಯ ಮುಖ್ಯ ವಿಷಯವನ್ನು ಮಹಾರಾಜರ ಪರವಾಗಿ ಮಂಡಿಸುತ್ತಾ "ಶ್ರೀಮನ್ ಮಹಾರಾಜ, ರಾಜಾಧಿರಾಜ, ಚಕ್ರವರ್ತಿ ಸಾರ್ವಭೌಮ, ಆರ್ಯಾವರ್ತದ, ಅಖಂಡ ವೈಭವ ಸಾಮ್ರಾಜ್ಯ ರತ್ನ ಸಿಂಹಾಸನಾಧೀಶ ಭೋಜರಾಜೇಂದ್ರ ಮಹಾಪ್ರಭುಗಳ ಅಜ್ಞಾನುಸಾರ ಆರ್ಯಾವರ್ತದ ಚಪ್ಪನ್ನಾರು ದೇಶಗಳ ಮಹಾ ಪ್ರಜೆಗಳ ಪರವಾಗಿ, ಈ ರೀತಿಯಾಗಿ ಮುಖ್ಯ ವಿಷಯಗಳನ್ನು ಮಂಡಿಸಿ ಚರ್ಚಿಸಲಿದ್ದಾರೆ....." ಎಂದರು.

'ಉಘೆ ಉಘೆ' ಎಂದು ಸಭಿಕರೆಲ್ಲರೂ ಒಪ್ಪಿಗೆ ಸೂಚಿಸಿ ಜಯಕಾರ ಹಾಕಿದರು.

ನೆರೆದ ವಂಧಿಮಾಗಧರು ಮಹಾಸಭೆಯನ್ನುದ್ದೇಶಿಸಿ ಎಲ್ಲರಿಗೂ ಕೇಳುವ ಹಾಗೆ ಕಂಚುಕಂಠದಿಂದ ಘೋಷಿಸುತ್ತಾ... "ಮಹಾಪ್ರಭುಗಳಿಗೆ ಸಭಿಕರೆಲ್ಲರ ಪರವಾಗಿ ವಂದನೆಗಳು. ಅದಾಗಿ ಆರ್ಯಾವರ್ತದ ಸಮಸ್ತ ಪ್ರಜೆಗಳ ಹಿತಮಿತ ಸಂತೋಷ ಸಂರಕ್ಷಣೆಗಾಗಿ ಈ ರೀತಿಯಾದ ಹೊಸಹೊಸ ಯೋಜನೆಯೊಂದನ್ನು ಕೈಗೊಂಡು ಈ ಮಹಾಸಭೆಗೆ ಒಪ್ಪಿಸಿರುತ್ತೇವೆ. ಅದೇನೆಂದರೆ ಪ್ರಾಚೀನದಿಂದಲೂ ನಮ್ಮ ಪೂರ್ವಜರು ಸುದೀರ್ಘ ಕೀರ್ತಿಪ್ರಾಯವಾದ ಹಾಗೂ ಆದರ್ಶಪ್ರಾಯವಾದ

ಸನ್ಮಾರ್ಗ-ಸದಾಚಾರಗಳಿಂದ ನಡೆದುಕೊಂಡು ಬಂದಿದ್ದಾರೆ. ಧರ್ಮ, ಸಂಸ್ಕೃತಿ, ಉತ್ತಮ ಸಮಾಜ ಇವುಗಳು ಅಂದಿನಿಂದ ಇಂದಿಗೂ ಎಂದೆಂದಿಗೂ ಒಂದೇ ರೀತಿಯಲ್ಲಿರುವಂತೆ ಮಾಡಬೇಕಾಗಿದೆ.

"ಉಘೆ ಉಘೆ" - ಪ್ರಜೆಗಳು ಉದ್ಗಾರ ಮಾಡುತ್ತಲೇ ಎದ್ದು,

ಚತುರ್ವರ್ಣದವರೇ ಆದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರರು ಎಲ್ಲರೂ ಒಂದೇ ಎಂದು ಏಕಮನೋಭಾವದಿಂದ ಕ್ಷುದ್ರವಲ್ಲದ ಒಮ್ಮತ ಮನಸ್ಸಿನಿಂದ ದೇಶದ ಏಳಿಗೆಗಾಗಿ ಕಾಯಾ ವಾಚ ಮನಸಾ ಶ್ರಮಿಸುತ್ತಾ ಕೀರ್ತಿಯ ಹಾದಿಯಲ್ಲಿ ಮುನ್ನಡೆಯಬೇಕು.

"ಉಘೆ ಉಘೆ" - ಮತ್ತೆ ಕೇಳಿಸಿತು.

"ನಮ್ಮ ಅಖಂಡ ಸಾಮ್ರಾಜ್ಯವನ್ನು ಬಲಪಡಿಸಲು ಅನೇಕ ಯೋಜನೆಗಳನ್ನು ಮಂಡಿಸಿರುತ್ತೇವೆ. ಮೊದಲನೆಯದಾಗಿ ಕೃಷಿ, ಗ್ರಾಮ, ಊರು, ನಗರಗಳಲ್ಲಿ ಅನನ್ಯವಾಗಿ ಶ್ರಮಿಸುತ್ತಿರುವ ರೈತರ (ವ್ಯವಸಾಯಗಾರರು) ಹಿತರಕ್ಷಣೆ ಹಾಗೂ ಸರ್ವತೋಮುಖ ಅಭಿವೃದ್ಧಿಗಾಗಿ ಈಗಿರುವುದನ್ನು ಮತ್ತಷ್ಟು ಅಧಿಕ ಪ್ರಮಾಣದಲ್ಲಿ ಹಾಗೂ ಕೊರತೆಯಾಗಿರುವ ಹಲವಾರು ಗ್ರಾಮಗಳಿಗೆ ಕೆರೆ ಕುಂಟೆ ಮರಗಳು ಸಾಲು ಮರಗಳು ಅರಣ್ಯ ಸಂಪತ್ತಿನ ಅಭಿವೃದ್ಧಿ, ಗಣಿಗಳ ಬಂಧನ, ಕ್ರಿಮಿಕೀಟಗಳ ನಾಶ, ಖನಿಜ ಸಂಪತ್ತು ಹಾಗೂ ಪೂರ್ವ ರಾಜ ಮಹಾರಾಜರು ಮಹಾಜನಗಳಿಂದ ಶೇಕರಿಸಿ ಭೂಮಿಯಲ್ಲಿ ಹೂತಿಟ್ಟ ವಿಪುಲ ಸಂಪತ್ತನ್ನು ರಾಜ ಶಾಸನಗಳ ಮೂಲಕ ಸಂಗ್ರಹಿಸಬೇಕಾಗಿದೆ. ಇವುಗಳ ಮೂಲಕ ರಾಜ ಬೊಕ್ಕಸ ಸದಾ ತುಂಬಿ ತುಳುಕಾಡಲು ಸಾಧ್ಯವಾಗಬಲ್ಲದು."

"ಉಘೆ ಉಘೆ"

ಮುಖ್ಯವಾಗಿ ಪ್ರಜೆಗಳಿಗೆ ಯಾವುದೇ ರೀತಿ ತೊಂದರೆಯಾಗದಂತೆ ತೆರಿಗೆ ಹೊರೆಯನ್ನು ಅತಿ ಕಡಿಮೆ ಪ್ರಮಾಣಕ್ಕೆ ಇಳಿಸಿ ದೇಶದ ನಾಗರೀಕರ ಮೂಲ ಸಂತೋಷಕ್ಕೆ ಕಾರಣರಾಗಬೇಕಗಿದೆ. "ಉಘೆ ಉಘೆ" ಎಂದು ಸುದೀರ್ಘವಾದ ಧ್ವನಿ ಮೊಳಗಿಸಿ ಕರತಾಡನ ಮಾಡಿದ್ದರು, ಎಲ್ಲ ಸಭಿಕರು.

ನಂತರ ಮುಂದುವರಿದು ಸಭೆಯಲ್ಲಿ ಮಂಡಿಸುತ್ತ, "ಅದಾಗಿ ಗೋವುಗಳ ಸಂರಕ್ಷಣೆ, ಪಶುಪ್ರಾಣಿಗಳಲ್ಲಿ ದಯೆ.... ಪ್ರತಿ ಗ್ರಾಮ, ಊರು, ಪಟ್ಟಣಗಳಲ್ಲಿ ಯಾವುದೇ ಕಳ್ಳಕಾಕರ, ದರೋಡೆಕೋರರ ಹಾಗೂ ಯಾವುದೇ ರೀತಿಯ ದುಷ್ಟರ ಕೂಟ, ಸಮಾಜಘಾತುಕ ಶಕ್ತಿಗಳನ್ನು ಹೇಳ ಹೆಸರಿಲ್ಲದಂತೆ ನಿರ್ಮೂಲ ಮಾಡುವ ಸಲುವಾಗಿ ಬಲವಾದ ನಿಷ್ಠಾವಂತರಾದ ಧೂತರ ನೇಮಕ ಮಾಡಿರುತ್ತಾರೆ. ಅದೇ ರೀತಿಯಾಗಿ ಅಂತಹವರನ್ನು ಹತ್ತಿಕ್ಕಲು ನಿಪುಣರಾದ ಗೂಢಚಾರರನ್ನು ಎಲ್ಲೆಲ್ಲೂ ನೇಮಿಸಲಾಗಿದೆ. ಯಾವುದೇ ರೀತಿಯ ಸಮಾಜಘಾತುಕ ಶಕ್ತಿಯನ್ನು ಬೆಂಬಲಿಸುವ ದುಷ್ಟ ಜನರಿಗೆ ಕ್ರೂರ ಶಿಕ್ಷೆ ವಿಧಿಸಲು ಸಹ ಮಹಾಪ್ರಭುಗಳು ಯೋಜನೆಯನ್ನು ಕೈಗೊಂಡಿದ್ದಾರೆ."

"ಉಘೆ ಉಘೆ"

"ನಮ್ಮ ಅಖಂಡ ಸಾಮ್ರಾಜ್ಯವು ವಿಶ್ವದಲ್ಲಿಯೇ ಎಲ್ಲಾ ರೀತಿಯ ವಿದ್ಯಾವಂತ ರಾಷ್ಟ್ರವಾಗಬೇಕು. ಅದಕ್ಕಾಗಿ ಪ್ರತಿ ಗ್ರಾಮ - ಊರು- ನಗರ - ದೊಡ್ಡ ದೊಡ್ಡ ಪಟ್ಟಣಗಳಲ್ಲೂ, ಗುರುಕುಲ ವಿದ್ಯಾಶಾಲೆಗಳಲ್ಲಿ ಸಂಸ್ಕೃತಕ್ಕೆ ಮೇರು ಆದ್ಯತೆ ಕೊಟ್ಟು ಸ್ಥಾಪಿಸಲು ಕಾರ್ಯೋನ್ಮುಖರಾಗಿದ್ದಾರೆ."

"ಉಘೆ ಉಘೆ"

"ಅದರಂತೆ ಸಂಗೀತ, ಸಾಹಿತ್ಯ, ನೃತ್ಯ, ನಾಟಕ, ಮುಂತಾದ ಲಲಿತಕಲೆಗಳಿಗೆ ಪ್ರಾಧಾನ್ಯತೆ ಕೊಟ್ಟಿರುತ್ತಾರೆ."

"ಉಘೆ ಉಘೆ"

"ಅದೇ ರೀತಿಯಾಗಿ ಸಾವಿರಾರು ಸಂಸ್ಕೃತ ಪಂಡಿತರಿಗೆ ವ್ಯಾಕರಣ ಪಂಡಿತರಿಗೆ ಯಜ್ಞಯಾಗಾದಿಗಳನ್ನು ಮಾಡುವಂಥ ಋತ್ವಿಕ ಬ್ರಾಹ್ಮಣರಿಗೆ, ಸಾಧು ಸಜ್ಜನರಿಗೆ ಎಲ್ಲರಿಗೂ ಎಲ್ಲಾ ರೀತಿಯಲ್ಲೂ ಪ್ರೋತ್ಸಾಹ ಕೊಟ್ಟಿರುತ್ತಾರೆ."

"ಉಘೆ ಉಘೆ"

"ಅದೇ ರೀತಿಯಾಗಿ ಬಹುಮುಖ್ಯವಾಗಿ ದೇಶದ ಮಾತೃ ಸಮಾನರಾದ ಮಹಿಳೆಯರಿಗೆ ಎಲ್ಲಾ ರೀತಿಯ ಹಕ್ಕು ಬಾಧ್ಯತೆ, ಸಮಾಜದಲ್ಲಿ ಗೌರವ, ಎಲ್ಲಾ ರೀತಿಯ ರಕ್ಷಣೆ, ಸಂರಕ್ಷಣೆ, ಪ್ರೋತ್ಸಾಹ ಯಾವುದೇ ರೀತಿಯ ಪಕ್ಷಪಾತವಿಲ್ಲದ ರೀತಿಯಲ್ಲಿ ದೇಶದ ಪ್ರಜೆಗಳು ಅತ್ಯಂತ ಗೌರವದಿಂದ ಕಾಣುವ ರೀತಿಯಲ್ಲಿ ತಕ್ಕ ಯೋಜನೆಗಳನ್ನು ರೂಪಿಸಿಕೊಂಡಿದ್ದಾರೆ."

"ಉಘೆ ಉಘೆ" - ಆಗ ಅರಮನೆ ಉಪ್ಪರಿಗೆಯಲ್ಲಿ ಪ್ರತ್ಯೇಕವಾದ ಮಹಿಳಾ ರಾಜಪೀಠಗಳಲ್ಲಿ ಜಾಲಾಂದರರ ಮೂಲಕ ಮಹಾಸಭೆಯನ್ನು ವೀಕ್ಷಿಸುತ್ತಿದ್ದ ಎಲ್ಲಾ ಮಹಿಳೆಯರು ತುಂಬ ಸಂತೋಷದಿಂದ ಚಪ್ಪಾಳೆ ತಟ್ಟುತ್ತಾ 'ಉಘೆ ಉಘೆ' ಎಂದು ತಮ್ಮ ಸಂತೋಷವನ್ನು ಹಂಚಿಕೊಂಡಿದ್ದರು.

ಆ ಸನ್ನಿವೇಶವನ್ನು ಭೋಜರಾಜರಾದಿಯಾಗಿ ಎಲ್ಲಾ ಸಭಿಕರು ಆನಂದದಿಂದ ಕೇಳಿ, ಮಂದಹಾಸದಿಂದ ಕೂಡಿದ ಗಂಭೀರ ನಗೆಯನ್ನು ಚೆಲ್ಲಿದ್ದರು.

ನಂತರ ಮುಂದುವರಿದು ಮಂಡಿಸುತ್ತಾ "ಬಹು ಮುಖ್ಯವಾಗಿ ಈ ದೇಶವನ್ನು ಸದಾ ಕಾಲವೂ ರಕ್ಷಿಸುತ್ತಿರುವ, ನಿಷ್ಕಾಮ, ನಿಷ್ಕಪಟ, ನಿಸ್ವಾರ್ಥತನದಿಂದ ಕಾಯಾ ವಾಚ ಮನಸಾ ಹಗಲಿರುಳು ಶ್ರಮಿಸುತ್ತಿರುವ ಮಹಾ ಪರಾಕ್ರಮಿಗಳಾದ ಯುದ್ಧಯೋಧರಿಗೆ (ಸೇನಾ ಪಡೆ) ವೀರ ಸೇನಾನಾಯಕರಿಗೆ ದಂಡನಾಯಕರಿಗೆ ದಂಡಾಧಿಕಾರಿಗಳಿಗೆ ಹಾಗೂ ಸರ್ಕಾರದಲ್ಲಿ ದೇಶದ ಏಳಿಗೆಗಾಗಿ ದುಡಿಯುತ್ತಿರುವ ಸತ್ಯಸಂಧರಿಗೆ ಅವರುಗಳು ದೇಶಕ್ಕಾಗಿ ಮತ್ತು ದೇಶದ ಏಳಿಗೆಗಾಗಿ ಮಾಡಿದ ತ್ಯಾಗ, ಸಾಹಸ, ಮೇರು ಸಾಹಸ

ಇಂತಹವರನ್ನು ಗುರುತಿಸಿ ಸೂಕ್ತ ರೀತಿಯಲ್ಲಿ ಗೌರವಿಸಿ ಸನ್ಮಾನ ಮಾಡುವ ಹಾಗೂ ಮಾಶಾಸನ ನೀಡುವ ಯೋಜನೆಯನ್ನು ಕೈಗೊಂಡಿದ್ದಾರೆ."

"ಉಘೆ ಉಘೆ"

"ಅದೇ ರೀತಿಯಾಗಿ ಬಹು ಶ್ರದ್ಧೆಯಿಂದಲೂ ಸ್ವಾರ್ಥರಹಿತ ಸಾಹಸದಿಂದಲೂ ಕಾರ್ಯೋನ್ಮುಖರಾಗಿ ನಗರ, ಊರು, ಪಟ್ಟಣ, ಗ್ರಾಮಗಳಲ್ಲಿ ಆಗಾಗ್ಗೆ ಸಂಭವಿಸಬಹುದಾದ ಸಮಾಜಘಾತುಕ ಶಕ್ತಿಗಳೇ ಆದ ಕಳ್ಳಕಾಕರನ್ನು ದರೋಡೆಕೋರರನ್ನು ಅಮಾಯಕ ಜನರಿಂದ ನಾನಾ ರೀತಿಯ ದುಷ್ಟತನದಿಂದ ಸುಲಿಗೆ ಮಾಡುವವರನ್ನು ಅನೇಕ ರೀತಿಯಲ್ಲಿ ವಂಚಿಸುವ ನಯವಂಚಕರನ್ನು ಮಹಿಳೆಯರ ಮಾನಭಂಗಕ್ಕೆ ಕಾರಣೀಭೂತರಾದ ವಿಷಯಲಂಪಟರನ್ನು ಇನ್ನು ಅನೇಕ ರೀತಿಯಲ್ಲಿ ಶ್ರೇಷ್ಠ ಮಾನವ ಸಮಾಜಕ್ಕೆ ವಿಷಬೀಜ ಬೀರುವ ದುಷ್ಟರನ್ನು ಪತ್ತೆಹಚ್ಚಿ ಅವರುಗಳಿಗೆ ಸೂಕ್ತ ಶಿಕ್ಷೆ ವಿಧಿಸುವುದರ ಮೂಲಕ, ದೇಶದ ಪ್ರಜೆಗಳಿಗೆ ಶಾಂತಿ, ನೆಮ್ಮದಿ, ಸುರಕ್ಷತೆ ಇವುಗಳಿಗಾಗಿ ಹಗಲು ರಾತ್ರಿ ದುಡಿಯುವ ಸಾಹಸವಂತರಾದ ನಗರರಕ್ಷಕರನ್ನು ಸೂಕ್ತ ರೀತಿಯಲ್ಲಿ ಸನ್ಮಾನಿಸಿ ಬಹುಮಾನ (ಸುವರ್ಣ ನಾಣ್ಯಗಳ ರೂಪದಲ್ಲಿ) ಕೊಡುವುದಲ್ಲದೆ ಅವರುಗಳಿಗೆ ಅಧಿಕ ಮಾಸಾಶನವನ್ನು ಸಹ ಕೊಡಲಾಗುವುದು" ಎಂದು ಘೋಷಿಸಿದರು.

ಆಗ ಅಲ್ಲಿದ್ದ ಕಾವಲು ಭಟರು ಭೋಜರಾಜನನ್ನು ಬಹುವಾಗಿ ಗುಣಗಾನ ಮಾಡುತ್ತಾ "ಆಹಾ! ಎಂಥ ಆದರ್ಶ ಮಹಾರಾಜರಪ್ಪ ಇವರು. ಬಡವರ ಪಾಲಿಗೆ ಭಾಗ್ಯದ ದೇವರಿವರು" ಎಂದು ಉದ್ಗಾರ ಮಾತುಗಳನ್ನಾಡಿ ಮನದಲ್ಲಿಯೇ ಸಾವಿರ ಸಾವಿರ ನಮಸ್ಕಾರ ಹಾಕಿದ್ದರು.

ಅದೇ ರೀತಿಯಾಗಿ ದೇಶಕ್ಕೆ ಬಹು ಉಪಯುಕ್ತವಾದ ಸಂಸ್ಕೃತ ಗ್ರಂಥಕರ್ತರಿಗೆ, ಕವಿ - ವಿದ್ವನ್ಮಣಿಗಳಿಗೆ, ಸಂಸ್ಕೃತ ಪಂಡಿತರಿಗೆ, ವಾಗ್ಮಿಗಳಿಗೆ, ಸಂಗೀತಕಾರರಿಗೆ, ನಾಟಕಕಾರರಿಗೆ, ನೃತ್ಯಕಲಾವಿದರಿಗೆ ದೇಶವನ್ನು ಮತ್ತಷ್ಟು ಉತ್ತಮ ಮಾರ್ಗದಲ್ಲಿ ಕೊಂಡೊಯ್ಯಲು ಸೂಕ್ತ ಸಲಹೆ ನೀಡುವ ಸಲಹೆಗಾರರಿಗೆ ಸೂಕ್ತವಾದ ಹಾಗೂ ಯಥೇಚ್ಛವಾದ ಬಹುಮಾನ ಕೊಡಲಾಗುವುದು.

"ಉಘೆ ಉಘೆ"

ಹೀಗೆ ಇನ್ನು ಅನೇಕ ರೀತಿಯಲ್ಲಿ ಪರಮ ಸೂಕ್ತವಾದ ಹಾಗೂ ಆದರ್ಶಪ್ರಾಯವಾದ ವಿಚಾರಗಳನ್ನು ಆ ಮಹಾಸಭೆಯಲ್ಲಿ ಮಂಡಿಸಿ ಜನಕೋಟಿಯರ ಪ್ರೀತಿಗೆ ಪಾತ್ರನಾಗಿದ್ದನು - ಆ ಭೋಜರಾಜನು.

ಬಹು ಆದರ್ಶ ತಿಲಕಪ್ರಾಯನಾದ ಹಾಗೂ ತಾನು ಅಲಂಕರಿಸಿದ ರತ್ನ ಸಿಂಹಾಸನಕ್ಕಿಂತಲೂ ಮಿಗಿಲಾದ ಪ್ರಜೆಗಳ ಹೃದಯ ಸಿಂಹಾಸನದಲ್ಲಿ ಪರಮಾತ್ಮನಂತೆ ವಿರಾಜಮಾನನಾಗಿ ಪ್ರಜೆಗಳ ಹೃದಯ ಮಂದಿರದಲ್ಲಿ ಸದಾಕಾಲವೂ ವಿರಾಜಿಸುತ್ತಿದ್ದ ಭೋಜರಾಜನು ಕೇವಲ ಹೊರನೋಟಕ್ಕೆ ಮಾತ್ರ ತನ್ನೆಲ್ಲ ವೈಭವವನ್ನು ಸೂಸುತ್ತಿದ್ದನೇ ಹೊರತಾಗಿ ತನ್ನ ಅಂತರಂಗದಲ್ಲಿ ಸದಾ ಸರ್ವದಾ ದೇಶ ಪ್ರೇಮ, ದೇಶದ ಏಳಿಗೆ,

ದೇಶದ ಕೀರ್ತಿ ಪ್ರಜೆಗಳ ಮೇಲಿನ ಸಂತೋಷ, ಅದಕ್ಕೂ ಮಿಗಿಲಾಗಿ ದೇಶದ ಧರ್ಮ, ನೀತಿ, ಸಂಸ್ಕೃತಿ ಸಮಾಜ, ಆಡಳಿತದಲ್ಲಿ ದಕ್ಷತೆ, ಚಾಣಾಕ್ಷತೆ, ದುಷ್ಟ ಶಿಕ್ಷಕ ಶಿಷ್ಟ ರಕ್ಷಕನೋಪಾದಿಯಲ್ಲಿ ದುಷ್ಟರಿಗೆ ಸಿಂಹ ಸ್ವಪ್ನನಾಗಿಯೂ ಶಿಷ್ಟರಿಗೆ ಸಾಕ್ಷಾತ್ ಪರಮಾತ್ಮನಂತೆ ಉದಾರ ಗುಣಗಳುಳ್ಳವನ್ನಾಗಿ ರಾಜ್ಯಭಾರ ಮಾಡುತ್ತಿದ್ದನು. ಆ ಮೂಲಕ ಮೇರು ಕೀರ್ತಿಗಳಿಸಿದ್ದನು ಭೋಜರಾಜ.

ಭೋಜರಾಜನ ಚರಿತೆ ಅವತಾರ ಪುರುಷನಾದ ಆದರ್ಶ ರಾಮನಂತೆಯೂ, ಮಹಾ ಭಾರತದ ಮಹಾನ್ ರಾಜಕಾರಿಣಿಯೆಂದೇ ಮನೆ ಮನೆ ಮಾತಾಗಿರುವ ಬಹು ಚಾಣಾಕ್ಷ ನಿಪುಣನೇ ಆದ ಎಲ್ಲರ ಪಾಲಿಗೆ ದೇವ ದೇವೋತ್ತಮನೇ ಆದ ಶ್ರೀಕೃಷ್ಣ ಪರಮಾತ್ಮನಂತೆಯು ಆದರ್ಶದ ಹಾದಿಯಲ್ಲಿ ಅವನ ಕೀರ್ತಿ ತ್ರಿಲೋಕಗಳಲ್ಲಿಯೂ ವ್ಯಾಪಿಸುವಂತೆ ರಾಜದಂಡವನ್ನು ಹಿಡಿದು ರಾಜ್ಯಭಾರ ಮಾಡುತ್ತಿದ್ದ ಭೋಜರಾಜನ ಹಿರಿಮೆ ದಿನೇ ದಿನೇ ಕೀರ್ತಿಯ ಮೆಟ್ಟಲನ್ನು ಏರುತ್ತಾ ಸಾಗುತ್ತಿತ್ತು.

ಅಂದಿನ ಮಹಾಸಭೆ ಮುಕ್ತಾಯವಾಗಿತ್ತು.

# ಭೋಜರಾಜನು ವಿಜಯಯಾತ್ರೆಗೆ ಸಂಕಲ್ಪ ಮಾಡಿದ್ದುದು

ವಿಶ್ವಕೀರ್ತಿ ಕಿರೀಟಪ್ರಾಯನಾದ, ಬಹು ಮೇಧಾವಿಯಾದ, ಧರ್ಮರಾಯನಂತೆ ಧರ್ಮಿಷ್ಠ ರಾಜನಾದ, ಪ್ರಜಾಪ್ರೇಮಿಯಾದ ಭೋಜರಾಜನು ಧಾರಾನಗರದ ಅಪೂರ್ವ ನವರತ್ನ ಖಚಿತ ಸಿಂಹಾಸನವನ್ನಲಂಕರಿಸಿ ಆರು ಮಾಸಗಳು ಕಳೆದಿದ್ದವು. ಅವನ ಆಳ್ವಿಕೆಯು ಇಡೀ ವಿಶ್ವಕ್ಕೆ ಆದರ್ಶಪ್ರಾಯವಾಗಿತ್ತು.

ದೇಶ ಕಲ್ಯಾಣಕ್ಕಾಗಿ ಅನೇಕ ಮಹಾ ಮಹಾ ಯಜ್ಞಯಾಗಾದಿಗಳನ್ನು ಆಗಾಗ್ಗೆ ಮಾಡಿಸುತ್ತಿದ್ದನು. ಸ್ವತಃ ವಿಷ್ಣುಭಕ್ತನು. ಶಿವಭಕ್ತನೂ. ಆದ ಅವನು ದೇಶದ ಎಲ್ಲೆಡೆಗಳಲ್ಲೂ ದೇವಾಲಯ, ಗುಡಿ ಗೋಪುರಗಳನ್ನು ನಿರ್ಮಾಣ ಮಾಡಿಸಿದ್ದನು. ದೇವಾಲಯಗಳಲ್ಲಿ ಪ್ರತಿನಿತ್ಯವೂ ಪೂಜೆ-ವಿಶೇಷ ಪೂಜೆ - ಇವುಗಳಿಂದ ದೇವರ ಕೃಪೆಗೆ ಪಾತ್ರನಾಗಿದ್ದನು. ಅನೇಕ ಧಾರ್ಮಿಕ ಕಾರ್ಯಗಳನ್ನು ಮಾಡಿಸುವುದರಲ್ಲಿ ನಿಷ್ಣಾತನಾಗಿ, ಮುನಿಗಳು, ತಪೋಮುನಿಗಳ ಹಾಗೂ ಪ್ರಜೆಗಳ ಸಂತೋಷಕ್ಕೆ ಕಾರಣನಾಗಿದ್ದನು.

ಅನಾದಿಕಾಲದ ಪೂರ್ವಜರಿಂದ ಹಾಸುಹೊಕ್ಕಾಗಿ ಅನುಕ್ರಮವಾಗಿ ನಡೆದು ಬಂದ ಭರತ ಖಂಡದ ಜಗತ್ಪ್ರಸಿದ್ಧವಾದ ಹಾಗೂ ಅತಿಶ್ರೇಷ್ಠವಾದ, ವಿಶ್ವದಲ್ಲಿ ಬೇರೆಲ್ಲೂ ಕಾಣದ, ಮಾನವಕೋಟಿಯರಿಗೆ ಆಧಾರ ಸ್ಥಂಭವಾದ ಭಾರತೀಯ ಧರ್ಮ ಸಂಸ್ಕೃತಿ ಸಮಾಜಕ್ಕೆ ಎಲ್ಲಾ ರೀತಿಯಲ್ಲೂ ಪ್ರೋತ್ಸಾಹಿಸಿ ಮುನ್ನಡೆಯುತ್ತಿದ್ದನು. ಎಲ್ಲದಕ್ಕಿಂತಲೂ ಮುಖ್ಯವಾಗಿ ವಿಶ್ವಕ್ಕೆ ಕನ್ನಡಿಯಂತಿದ್ದ ದೇವನಾಗರಿ ಭಾಷೆಯಾದ ಸಂಸ್ಕೃತ ಭಾಷೆಗೆ ಅತೀ ಹೆಚ್ಚಿನ ಪ್ರಾಧಾನ್ಯತೆ ನೀಡಿದ್ದನು. ಅದರ ಏಳಿಗೆಗಾಗಿ ಪ್ರತಿ ಗ್ರಾಮ-ಊರು-ಪಟ್ಟಣಗಳಲ್ಲೂ ಸಂಸ್ಕೃತ ವಿದ್ಯಾ ಶಾಲೆಗಳನ್ನೂ ಸಂಸ್ಕೃತ ವಿಶ್ವ ವಿದ್ಯಾನಿಲಯಗಳನ್ನು ಗುರುಕುಲಗಳನ್ನು ಸ್ಥಾಪಿಸಿದ್ದನು. ಇದರಿಂದ ಮನೆಮನೆಯ ಪ್ರತಿ ಪ್ರಜೆಯೂ ಸಹ ಸಂಸ್ಕೃತ ಭಾಷೆಯಲ್ಲಿ ನಿರರ್ಗಳವಾಗಿ ಮಾತನಾಡುವ ವಾಡಿಕೆ ಬೇರೂರಿ ಹರಿಯಿತು. ಪುಟ್ಟ ಪುಟ್ಟ ಪುಟಾಣಿ ಮಕ್ಕಳೂ ಸಹ ಸಂಸ್ಕೃತ ಭಾಷೆಯಲ್ಲಿಯೇ ನಿರಾಯಾಸವಾಗಿ ಮಾತಾನಾಡುತ್ತಿದ್ದವು. ವಿಶ್ವಕಲ್ಯಾಣಕ್ಕಾಗಿ ಹಾಗೂ ವಿಶ್ವ ಮಾನವ ಕಲ್ಯಾಣಕ್ಕಾಗಿ ಭೋಜರಾಜನು ಕೈಗೊಂಡ ಧಾರ್ಮಿಕ ಚಟುವಟಿಕೆಗಳಿಂದ ದೇಶದ ಎಲ್ಲೆಡೆಯಲ್ಲೂ ಕಾಲಕಾಲಕ್ಕೆ ಮಳೆ-ಬೆಳೆಯಿಂದ ಕೂಡಿದ ಅತಿಯಾದ ಸಂಪದ್ಭರಿತ ರಾಷ್ಟ್ರವಾಗಿ ರಾಜ ಬೊಕ್ಕಸವು ಸದಾ ಸರ್ವದಾ ತುಂಬಿ ತುಳುಕಾಡುತ್ತಿತ್ತು. ಮನೆ ಮನೆಯು ಹರ್ಷದಿಂದ ನಕ್ಕು ನಲಿದಾಡುತ್ತಾ ಸ್ವರ್ಗ ಸಂತೋಷಕ್ಕಿಂತಲೂ ಮಿಗಿಲಾದ ಅತಿಶಯ ಸಂತೋಷದಿಂದ ಮಧುರಮಯವಾದ ನೆಮ್ಮದಿಯ ಜೀವನವನ್ನು ಸಾಗಿಸುತ್ತಾ ಭೋಜರಾಜನನ್ನು ಮುಕ್ತಕಂಠದಿಂದ ಹೊಗಳಿ ಹಾರೈಸುತ್ತಿದ್ದರು.

ಹೀಗಿರಲೂ ಕ್ಷತ್ರಿಯ ಧರ್ಮಾನುಸಾರವಾಗಿ ತಾನು ಸಕಲ ಚತುರಂಗ ಬಲ ಸಮೇತನಾಗಿ ಭರತಖಂಡದ ಚಪ್ಪನ್ನಾರು ದೇಶಗಳಿಗೆ (ಆಗಿನ ಭಾರತದ ಐವತ್ತಾರು ದೇಶಗಳು) ತನ್ನ ಸಕಲ ಚತುರಂಗಬಲ ಸಮೇತನಾಗಿ ವಿಜಯಯಾತ್ರೆ ಮಾಡಿ ಬರಲು ಸಂಕಲ್ಪಿಸಿದ್ದನು.

ಆ ಸಂಬಂಧವಾಗಿ ಅಂದು ಅರಮನೆಯ ಮಂತ್ರಾಗಾರದಲ್ಲಿ ಮಹಾಪ್ರಜ್ಞಾಗುಣವುಳ್ಳವರೇ ಆದ ರಾಜ ಧರ್ಮ ಮಾರ್ಗದರ್ಶಕರು ವಯೋವೃದ್ಧರು ಆದ ಮಹಾಮಂತ್ರಿಗಳನ್ನು ಮತ್ತು ದೇಶದ ಏಳಿಗೆಗಾಗಿ ವಿಶಿಷ್ಟ ರೀತಿಯ ಧಾರ್ಮಿಕ ಕಾರ್ಯಗಳಲ್ಲಿ ಪಾಲ್ಗೊಂಡು ರಾಜನನ್ನು ಪ್ರಜಾಕೋಟಿಯರನ್ನು ಹರಸಿ ಹಾರೈಸುತ್ತಿದ್ದ ರಾಜಪುರೋಹಿತರನ್ನು ಬರಮಾಡಿಕೊಂಡನು.

ಆ ಇಬ್ಬರು ರತ್ನಖಚಿತ ಪೀಠದಲ್ಲಿ ಉಪಸ್ಥಿತರಾಗಿದ್ದರು. ಆಗ ಭೋಜರಾಜನೇ ತನಗೆ ಪೂಜ್ಯರಾದ ಅವರುಗಳನ್ನು ಕುರಿತು ಸಂಭಾಷಿಸುತ್ತಾ "ಪೂಜ್ಯರೇ..... ತಮ್ಮ ದಿವ್ಯ ಅನುಗ್ರಹ ಬಲದಿಂದ ನಾನು ಈ ಧಾರಾನಗರದ ರತ್ನಸಿಂಹಾಸನಕ್ಕೆ ಅಧಿಪತಿಯಾಗಿ ಆರುಮಾಸಗಳು ಕಳೆಯಿತು. ಈಗ ನಾನು ದೇಶದ ಸರ್ವತೋಮುಖ ಅಭಿವೃದ್ಧಿಗಾಗಿ ಹಾಗೂ ಕ್ಷತ್ರಿಯ ಧರ್ಮಕ್ಕನುಗುಣವಾಗಿ ಸಕಲ ಚತುರಂಗಬಲದೊಡನೆ ನಮ್ಮ ಭರತಖಂಡದ ಸಮಸ್ತ ದೇಶಗಳನ್ನು ಕುರಿತು 'ವಿಜಯಯಾತ್ರೆ' ಹೋಗಿಬರಬೇಕೆಂದು ಆ ಮಹಾವಿಷ್ಣು-ಶಿವನ ಪ್ರೇರಣೆ ಎಂಬಂತೆ ಸಂಕಲ್ಪಿಸಿದ್ದೇನೆ. ಇದಕ್ಕೆ ತಮ್ಮ ಸಲಹೆಯನ್ನು ಕೋರುತ್ತೇನೆ " ಎಂದನು.

ಆಗ ರಾಜ ಪುರೋಹಿತರು ಭೋಜರಾಜನ ಜಾತಕಬಲವನ್ನು ಕುಲಂಕುಶವಾಗಿ ಪರಿಶೀಲಿಸಿ ಹೇಳುತ್ತಾ "ಹೇ ಭೋಜರಾಜೇಂದ್ರ, ನಿನ್ನ ಮನೋವಾಂಛಲ್ಯವು ಸಾಧುವಾಗಿದೆ. ಹಾಗೂ ನೀನು ನುಡಿದಂತೆ ಈ ವಿಜಯಯಾತ್ರೆಯು ದೈವ ಪ್ರೇರಣೆಯಿಂದಲೂ ಕೂಡಿದ್ದುದಾಗಿದೆ. ಮಿಗಿಲಾಗಿ ಈ ನಿನ್ನ ಗ್ರಹಗತಿಗಳು ಉಚ್ಛಸ್ಥಾನದಲ್ಲಿರುವುದರಿಂದ ನೀನು ಹೋದೆಡೆಯಲ್ಲಿ ದಿಗ್ವಿಜಯ ಕಟ್ಟಿಟ್ಟ ಬುತ್ತಿಯಂತಾಗಿದೆ. ಎಲ್ಲ ರೀತಿಯಲ್ಲೂ ಸಕಾಲವಾಗಿದೆ. ಆದ್ದರಿಂದ ಪ್ರಸ್ತುತ ಈಗ ನಡೆಯುತ್ತಿರುವ ಜೇಷ್ಟಮಾಸ ಕಳೆದಂತೆ ಬರುವ ಅಶ್ವಯುಜಮಾಸದ ಪಂಚಮಿ ಲಗ್ನದಲ್ಲಿ ನೀನು ವಿಜಯಯಾತ್ರೆ ಹೊರಡುವಂಥವನಾಗು. ಆ ಪಂಚಮಿ ಲಗ್ನವು ನಿನ್ನ ಗ್ರಹಬಲಕ್ಕೆ ಬಹಳ ಶುಭದಾಯಕವಾಗಿದೆ " ಎಂದು ತಿಳಿಸಿದರು - ಪಂಚಾಂಗ ಶಾಸ್ತ್ರವನ್ನು ಚೆನ್ನಾಗಿ ಬಲ್ಲವರೇ ಆದ ರಾಜಪುರೋಹಿತರು.

"ತಮ್ಮ ದಿವ್ಯ ಅನುಗ್ರಹ.... ಹಾಗೆಯೇ ಮಾಡುತ್ತೇನೆ" ಎಂದು ವಿನಯಭಾವದಿಂದ ನುಡಿದ ಭೋಜರಾಜ, "ಎಲ್ಲ ಆ ವಿಷ್ಣು ಲೀಲೆ" ಎಂದರು ರಾಜಪುರೋಹಿತರು.

ಆಗ ಮಹಾಮಂತ್ರಿಗಳು ಕಾರ್ಯೋನ್ಮುಖರಾಗಿ ಭರತಖಂಡದ ಚಪ್ಪನ್ನಾರು ದೇಶಗಳಾದ....(ಐವತ್ತಾರು ರಾಜ್ಯಗಳು)

ಅಂಗ - ವಂಗ - ಕಳಿಂಗ - ಕಾಳಿಂಗ - ಕೊಂಕೂಣ - ಟೆಂಕಣ - ವರ್‍ಹಾಟ - ಪೆನಾಟ - ಚೋಳ - ಮಹಾರಾಷ್ಟ್ರ - ಸೌರಾಷ್ಟ್ರ - ಸಿಂಹ - ಲಾವಣ್ಯ - ಧ್ಯಾಂದ - ಕರ್ಣಾಲ - ಬಹುಳ - ಕಾಶ್ಮೀರ - ಚೀನಿ - ಮಹಾಚೀನಿ - ಮಗಧ - ಮಾಗಧ - ಕೇರಳ - ದ್ರಾವಿಡ - ದ್ರಾವಿಳ - ನೇಪಾಳ - ಬಂಗಾಳ - ಗೌಳ - ಮಲೆಯಾಳ - ಕಿರಾತ - ಪಾಂಚಾಲ - ಬರ್ಬರ - ಬಹುದಾನಿತ -ವತ್ಸಲ್ಯಕ - ವತ್ಸ - ವಿಂಧ್ಯ - ಸಿಂಹಳ - ಶಾಲ್ಮಲ - ಚೇದಿ - ವಿದೇಹ - ವಿಧರ್ಭ - ಸಿಂಧೂ - ಕೋಸಲ - ಕರ್ನಾಟಕ - ಕಲ್ಹಾಟ - ಪುಳಿಂದ್ರ - ಜ್ವಾಲಾಂದ್ರ - ಕಾಂಬೋದಿ ಮಾಳವ - ಹಿಮಾಚಲ - ಪಾಂಚಾಲ -

ತಾಮ್ರಲಿಪ್ತ - ಲಕ್ಷದ್ವೀಪ - ಬಾಹ್ಲೀಕ - ಮಲೇಯ - ವಶಾತಲ - ಅವಂತಿ ಇವೇ ಮುಂತಾದ ಐವತ್ತಾರು ದೇಶಗಳಿಗೆ ವಾರ್ತಾವಾಹಿಗಳ ಮೂಲಕ ವರ್ತಮಾನವನ್ನು ಈ ರೀತಿಯಾಗಿ ಬರೆದು ಕಳುಹಿಸಿ ಕೊಡಲಾಯಿತು.

"ಅಖಂಡ ಆರ್ಯಾವರ್ತದ (ಭರತ ಖಂಡ) ಕೇಂದ್ರ ಬಿಂದುವಾದ ಮಾಳವ ದೇಶದ ಮಹಾ ರಾಜಧಾನಿಯಾದ ಧಾರಾನಗರದ ರತ್ನ ಸಿಂಹಾಸನಾದೀಶ್ವರರಾದ.... ಅತುಲ ಭುಜಬಲ ಪರಾಕ್ರಮನೂ - ಅಸಮಾನಶೂರನೂ - ರಾಜನೀತಿವಿಶಾರದನು - ಧರ್ಮದುರಂಧರನು - ದಯಾಶೀಲನು - ದಾನಶೂರನು - ರಾಜತಂತ್ರ ನಿಪುಣನು - ಮಹಾ ಚತುರಂಗಬಲವುಳ್ಳವನು - ಯುದ್ಧಪ್ರಿಯನು - ಶಾಂತಿಪ್ರಿಯನು - ಕ್ಷಮಾಗುಣನು - ಸಕಲ ಶಾಸ್ತ್ರ - ಅಸ್ತ್ರಶಾಸ್ತ್ರ - ಶಸ್ತ್ರಶಾಸ್ತ್ರ ನಿಪುಣನು - ಮಲ್ಲಯುದ್ಧ-ಗದಾಯುದ್ಧ - ದ್ವಂದ್ವಯುದ್ಧ - ಮಹಾಯುದ್ಧಗಳಲ್ಲಿ ಅಗಾಧ ನಿಷ್ಣಾತನು - ಏಕೈಕ ವೀರ - ಜಗದೇಕ ವೀರ- ಮಲ್ಲರ ಮಲ್ಲ - ಜಗದೇಕ ಮಲ್ಲ ಹಾಗೂ ವೇದ - ವೇದಾಂಗ ಪಾರಂಗತನಾದ - ವಿದ್ವನ್ಮಣಿ ತಿಲಕ ರಾಜಾಧಿರಾಜ ಭೋಜರಾಜರು ಆರ್ಯಾವರ್ತದ ಚಪ್ಪನ್ನಾರು ದೇಶಗಳಿಗೆ ..... ಬರುವ ಆಶ್ವಯುಜ ಬಹುಳ ಪಂಚಮಿ ಲಗ್ನದಲ್ಲಿ ವಿಜಯಯಾತ್ರೆ ಹೊರಡಲಿದ್ದಾರೆ. ಪ್ರಭುಗಳಾದ ಅವರೊಡನೆ ಯಾವುದೇ ರೀತಿಯ ಯುದ್ಧವನ್ನು ಮಾಡಬಲ್ಲ ವೀರ ರಾಜರುಗಳು ಯುದ್ಧ ಮಾಡಲು ಅಪೇಕ್ಷೆವುಳ್ಳವರು. ಅಂತಹ ಸಾಹಸವಂತರು ಯುದ್ಧ ಮಾಡಬಹುದು - ಇಲ್ಲವೇ ಯುದ್ಧ ಮಾಡುವುದಿಲ್ಲವೆಂಬ ಸಂಕೇತವಾಗಿ ಶ್ವೇತಧ್ವಜವನ್ನು ತಮ್ಮ ತಮ್ಮ ರಾಜ್ಯದಲ್ಲಿ ಹಾರಿಸುವುದರ ಮೂಲಕ ಅವರಿಗೆ ಕಪ್ಪ ಕಾಣಿಕೆಗಳನ್ನು ಕೊಟ್ಟು ಸಾಮಂತ ರಾಜರೆಂದು ಒಪ್ಪಿಕೊಳ್ಳುವುದು.

ಇತಿ

ಧಾರಾನಗರದ ರತ್ನಸಿಂಹಾಸನಾಧೀಶ

ಭೋಜರಾಜರ ಪರವಾಗಿ.

- ಎಂದು ರಾಯಸವನ್ನು ಮೇಲೆ ಕಾಣಿಸಿದ ಎಲ್ಲ ದೇಶದ ರಾಜರುಗಳಿಗೆ ರವಾನಿಸಲಾಯಿತು. ಅಶ್ವಾರೂಢ ವಾರ್ತಾವಾಹಿಗಳು ರಾಯಸವನ್ನು ಹೊತ್ತು ದೇಶ ದೇಶಕ್ಕೆ ಪ್ರಯಾಣ ಬೆಳೆಸಿದರು.

ಕಾಲಚಕ್ರವನ್ನು ತಡೆಗಟ್ಟುವುದು ಯಾರಿಂದ ತಾನೆ ಸಾಧ್ಯವಾದೀತು? ಅದು ನಿತ್ಯ ಚಾಲಿತ ಯಂತ್ರ ಎಂಬಂತೆ.... ಆಶ್ವಯುಜ ಬಹುಳ ಪಂಚಮಿ ಲಗ್ನವಾದ ಆ ಶುಭ ದಿನದ ಸುಮುಹೂರ್ತ ಬಂದೇಬಿಟ್ಟಿತು.

## ಭೋಜರಾಜನ ವಿದಯಯಾತ್ರೆ

ಆ ದಿನ ಧಾರಾನಗರದಾದ್ಯಂತ ಎಂದಿಲ್ಲದ ಸಂತೋಷ ಸಂಭ್ರಮ ಸಡಗರವು ಅವರ್ಣನೀಯವಾಗಿತ್ತು. ಅರಮನೆಯಿಂದ ರಾಜಬೀದಿಯ ಮೂಲಕ ಸುಮಾರು ಹತ್ತು-ಹದಿನೈದು ಹರಿದಾರಿಯಷ್ಟು ದೂರ ಬಲು ದೂರದವರೆವಿಗೂ ಧಾರಾನಗರ ಸಾಮ್ರಾಜ್ಯದ

ಚತುರಂಗಬಲಗಳು ಸಾಲಾಗಿ ನಿಂತಿದ್ದವು. ಅಭೂತಪೂರ್ವ ಅಮೋಘ ದೃಶ್ಯವನ್ನು ಕಣ್ಣಾರ ಕಾಣಲು ಧಾರಾನಗರ ಮಾತ್ರವೇ ಅಲ್ಲದೆ ಅನೇಕ ಗ್ರಾಮ - ಊರು - ಪಟ್ಟಣ- ಮಹಾ ಪಟ್ಟಣಗಳಿಂದ ಬಂದು ನೆರೆದಿದ್ದ ಜನಪ್ರವಾಹ ಸಾಗರದೋಪಾದಿಯಲ್ಲಿ ಕಿಕ್ಕಿರಿದು ನೆರೆದಿದ್ದರು.

ಮಹಾರಾಜ ಭೋಜರಾಜನ "ವಿಜಯಯಾತ್ರೆ" ಅಂಗವಾಗಿ ಭವ್ಯ ಬಂಗಾರದ ಅರಮನೆಯಿಂದ ರಾಜಬೀದಿಗಳ ಉದ್ದಕ್ಕೂ ಹಸಿರು ಚಪ್ಪರ ತಳಿರು ತೋರಣಗಳಿಂದ ಭವ್ಯವಾಗಿ ಅಲಂಕರಿಸಲಾಗಿತ್ತು. ಪ್ರಜೆಗಳ ಉತ್ಸಾಹ ಅಮಿತವಾಗಿತ್ತು.

ವಿಜಯಯಾತ್ರೆಗೆ ಹೊರಡಲು ಸಿದ್ಧವಾಗಿ ನಿಂತಿದ್ದ ಆನೆ - ಕುದುರೆ - ಯುದ್ಧರಥಗಳ ಸಾಲು ಪಟ್ಟಣದಿಂದ ಸುಮಾರು ಇಪ್ಪತ್ತು ಹರದಾರಿ ದೂರದುದ್ದಕ್ಕೂ ಸಾಲುಗಟ್ಟಿ ನಿಂತಿದ್ದವು. ಆ ದೃಶ್ಯವನ್ನು ನೋಡುತ್ತಿದ್ದ ಜನಕೋಟಿಯರಿಗೆ ಮಹಾಭಾರತದ ಅಕ್ಷೋಹಿಣಿ ಸೈನ್ಯಗಳ ನೆನಪನ್ನು ಮರುಕಳಿಸುತ್ತಿತ್ತು.

ಅರಮನೆಯ ಮುಂದೆ ಸಮಸ್ತ ರಾಜಪರಿವಾರದವರು ಕಿಕ್ಕಿರಿದು ನೆರೆದಿದ್ದರು. ಅದರಂತೆ ಅಸಂಖ್ಯ ಪ್ರಜೆಗಳು ಸಹ ಉದ್ದಕ್ಕೂ ಸಾಲುಗಟ್ಟಿ ನಿಂತಿದ್ದರು. ಅವರೆಲ್ಲರೂ ಒಕ್ಕೊರಳಿನಿಂದ ಮುಗಿಲು ಮುಟ್ಟುವಂತೆ ಜಯಕಾರ ಹಾಕುತ್ತಿದ್ದರು.

ಶುಭ ಮುಹೂರ್ತ ಸಮೀಪಿಸುತ್ತಿದ್ದಂತೆ ನೂರಾರು ಮಂಗಳವಾದ್ಯಗಳು ಧ್ವನಿಮೊಳಗಿದವು. ಜೊತೆಗೆ ಕಿನ್ನರರ ಶಂಖಧ್ವನಿ, ಕಹಳೆ ದುಂದುಭಿ ಮುಂತಾದ ರಣಭೇರಿ ವಾದ್ಯಗಳು ನಭೋಮಂಡಲವನ್ನೇ ಭೇದಿಸುವಂತೆ ಭೋರ್ಗರೆದು ಮೊಳಗುತ್ತಿತ್ತು.

ಭವ್ಯಾಲಂಕೃತವಾದ ಅರಮನೆಯ ಒಡ್ಡೋಲಗದಲ್ಲಿ ಎಂದಿಲ್ಲದ ಸಂಭ್ರಮ ಸಡಗರ - ಸಂತೋಷ ಸೌರಭ....ಹೇಳತೀರದಷ್ಟು ಅವರ್ಣನೀಯವಾಗಿತ್ತು.

ಭೋಜರಾಜನಿಗೆ ಆಶೀರ್ವಾದ ಮಾಡಿ ಬೀಳ್ಕೊಡುವ ಸಲುವಾಗಿ ಅನೇಕಾನೇಕ ಮುನಿಶ್ರೇಷ್ಠರು, ಋಷಿಪುಂಗವರು, ವೇದವೇದಾಂಗ ಸ್ವರೂಪರಾದ ಋತ್ವಿಕ ಬ್ರಹ್ಮಗೋತ್ರದವರು, ಮಠಾಧಿಪತಿಗಳು, ಕುಲಪತಿಗಳು, ಜೈನಗುರುಗಳು ಆದಿಯಾಗಿ ಎಲ್ಲರೂ ತುಂಬ ನೆರೆದಿದ್ದರು.

ಅವರಲ್ಲಿಗೆ ಅಷ್ಟದಿಗ್ಗಜಗಳಾದ ವಿದ್ವನ್ಮಣಿಗಳು, ಆಸ್ಥಾನ ಕವಿಗಳು, ಸಾವಿರಾರು ಸಂಸ್ಕೃತ ಪಂಡಿತರು, ವ್ಯಾಕರಣಕಾರರು, ನೀತಿಶಾಸ್ತ್ರಜ್ಞರು, ತಜ್ಞರು, ವಿಜ್ಞಾನಿಗಳು, ಪ್ರಮುಖ ಪ್ರಜೆಗಳು ಎಲ್ಲರಾದಿಯಾಗಿ ಸೇರಿದ್ದರು.

ಒಡ್ಡೋಲಗದ ಸುತ್ತಲೂ ಅಲ್ಲಲ್ಲೆ ಘಮಘಮಿಸುವ ಆಜ್ಯದಿಂದ ಕೂಡಿದ್ದ ಹಗಲು ದೀವಿಟಿಕೆಗಳು ಪ್ರಜ್ವಲಮಾನವಾಗಿ ಕಾಂತಿಯುಕ್ತವಾಗಿ ಶೋಭಿಸುತ್ತಿತ್ತು.

ಸಕಾಲಕ್ಕೆ ಸರಿಯಾಗಿ ಭೋಜರಾಜರು ತಮ್ಮ ವಿಶಾಲ ಏಕಾಂತಮಂದಿರದಿಂದ "ವಿಜಯಯಾತ್ರೆ" ಗಾಗಿಯೇ ವಿಶೇಷವಾಗಿ ಅಲಂಕೃತರಾಗಿದ್ದರು, ತಮ್ಮ ರಾಜವೈಭವಕ್ಕೆ ತಕ್ಕ ಹಾಗೆ ನವರತ್ನ ಖಚಿತವಾದ ವಸ್ತ್ರಾಭರಣಗಳಿಂದಲೂ, ವಜ್ರದ ಕಿರೀಟವನ್ನು

ಧರಿಸಿದವರಾಗಿಯೂ, ಖಡ್ಗಧಾರಿಯಾಗಿಯೂ, ಸಾಕ್ಷಾತ್ ಹರಿಶ್ಚಂದ್ರ ಮಹಾರಾಜರಂತೆ ಶೋಭಿಸುತ್ತಿದ್ದರು.

..... ಆ ರೀತಿಯಾದ ವಿಶೇಷವಾದ ಅಲಂಕಾರದಿಂದ ಸಮಸ್ತ ರಾಜಪರಿವಾರದೊಂದಿಗೆ ಬಿಜಯಿಸುತ್ತಿದ್ದರು. ಮಂಗಳವಾದ್ಯಗಳು ಮೊಳಗುತ್ತಿದ್ದವು. ನೂರಾರು ವಿಪ್ರರಿಂದ ವೇದಘೋಷ ಮಂತ್ರ ಶುಶ್ರಾವ್ಯವಾಗಿ ಕೇಳಿ ಬರುತ್ತಿತ್ತು. ಮೊದಲಾಗಿ ತನ್ನ ರಾಜ ಪರಿವಾರದೊಂದಿಗೆ ತನ್ನ ಆರಾಧ್ಯದೇವತೆ ಆದ ವಿಷ್ಣು ದೇವಾಲಯಕ್ಕೆ ಹೊರಟು ಬಂದು ವಿಧಿವತ್ತಾಗಿ ಪೂಜೆ ಸಲ್ಲಿಸಿದನು. ವಿಷ್ಣು ದೇವರಿಗೆ ಪ್ರಧಾನ ಅರ್ಚಕರಿಂದ ಮಹಾ ಮಂಗಳಾರತಿ ಜರುಗುತ್ತಿದ್ದಂತೆ ಅಲ್ಲಿದ್ದ ಹತ್ತಾರು ಘಂಟೆಗಳು ಏಕಕಾಲದಲ್ಲಿ ಧ್ವನಿಗೈದವು. ಝಾಗಟೆ, ನಗಾರಿ ಭೇರಿ, ದುಂದುಬಿ ಇವುಗಳು ಸಹ ಧ್ವನಿಗೈದು ಮೊಳಗಿದ್ದವು. ಬಹು ಭಕ್ತಿಯಿಂದ ಪರಮಾತ್ಮನನ್ನು ಪ್ರಾರ್ಥಿಸಿ ಮಹಾ ಮಂಗಳಾರತಿಯನ್ನು ಸ್ವೀಕರಿಸಿದರು. ನಂತರ ತೀರ್ಥ ಪ್ರಸಾದವನ್ನು ಪಡೆದರು.

ರಾಜಪರಿವಾರದೊಂದಿಗೆ ಒಡ್ಡೋಲಗಕ್ಕೆ ಬಿಜಯಿಸಿ ಬಂದರು.

ಅನಂತರ ರಾಜಪುರೋಹಿತರಿಂದ ಯಥಾವಿಧಿಯಾಗಿ ಮಂಗಳ ಕಾರ್ಯಗಳು ಸಾಂಗೋಪಾಂಗವಾಗಿ ನೆರವೇರಿತು. ಆಗ ವಿಜಯಯಾತ್ರೆಗೆ ಸಕಾಲವೂ ಆಗಿತ್ತು.

ತನಗೆ ವಯೋವೃದ್ಧರು, ಪಿತೃಸಮಾನರು ಆದ ರಾಜ ಪುರೋಹಿತರಿಗೂ, ಮಹಾಮಂತ್ರಿಗಳಿಗೂ, ಅನೇಕ ಋಷಿ ತಪೋಮುನಿ ಶ್ರೇಷ್ಠರಿಗೂ, ಅಷ್ಟದಿಗ್ಗಜಾದಿ ಸಮಸ್ತ ಸಂಸ್ಕೃತ ಪಂಡಿತರಿಗೂ ಭಕ್ತಿಭಾವೈಕ್ಯರಾಗಿ ಕೈ ಮುಗಿದು ನಮಸ್ಕರಿಸಿದರು. ಎಲ್ಲರ ಕಣ್ಣುಗಳಲ್ಲಿ ಆನಂದಭಾಷ್ಪ ಹರಿದಿತ್ತು.

ಅನಂತರ ಭೋಜರಾಜನು ಮಹಾಮಂತ್ರಿಗಳಿಗೆ ರಾಜಪುರೋಹಿತರಿಗೆ ತಿಳಿಯ ಹೇಳುತ್ತಾ "ರಾಜಪುರೋಹಿತರೇ, ಮಹಾಮಂತ್ರಿಗಳೇ, ಭಗವತ್‌ಪ್ರೇರಣಾನುಸಾರ ಹಾಗೂ ತಮ್ಮ ಸಂಪೂರ್ಣ ಅನುಗ್ರಹದಿಂದ ವಿಜಯಯಾತ್ರೆಗೆ ಪ್ರಯಾಣ ಬೆಳೆಸುತ್ತಿದ್ದೇನೆ.... ನಾನು ದಿಗ್ವಿಜಯ ಸಾಧಿಸಿಕೊಂಡು ಬರುವವರೆವಿಗೂ ಈ ಧಾರಾನಗರದ ಹಾಗೂ ಧಾರಾನಗರದ ಪ್ರಜೆಗಳ ಯೋಗಕ್ಷೇಮ ನಿಮ್ಮ ಕೈಲಿದೆ. ಹೋಗಿ ಬರುತ್ತೇನೆ" ಎಂದರು. ಆಗ ಅಲ್ಲಿ ನೆರೆದಿದ್ದ ಎಲ್ಲ ಪ್ರಜೆಗಳಿಗೂ ತಡೆಯಲಾಗದ ದುಃಖ ಉಮ್ಮಳಿಸಿ ಬಂದಿತ್ತು.

"ಆಹಾ! ಈ ಆದರ್ಶ ಮಹಾರಾಜನಾದ ಭೋಜರಾಜನು ಪ್ರಜೆಗಳ ವಿಷಯದಲ್ಲಿ ಅದೆಷ್ಟು ಪ್ರೀತಿ, ಅದೆಷ್ಟು ವಾತ್ಸಲ್ಯ, ಅದೆಷ್ಟು ಅಂತಃಕರಣ ಉಳ್ಳವನಾಗಿದ್ದಾನೆ? ನಿಜಕ್ಕೂ ಇಂತಹ ಓರ್ವ ಆದರ್ಶ ಮಹಾರಾಜನನ್ನು ಪಡೆದ ಪ್ರಜೆಗಳಾದ ನಾವೇ ಧನ್ಯರು ಮಹಾ ಧನ್ಯರು " ಎಂದು ಭೋಜರಾಜನನ್ನು ಮನದಲ್ಲೇ ಹಲವು ವಿಧದಲ್ಲಿ ಕೊಂಡಾಡುತ್ತಿದ್ದರು.

ದುಃಖವು ಶಮನವಾಗಿ ಎಲ್ಲರ ಕಣ್ಣಿನಲ್ಲೂ ಆನಂದ ಬಾಷ್ಪವು ಧಾರೆಯಾಗಿ ಹರಿದಿತ್ತು.

ಭೋಜರಾಜನು ಪ್ರಜೆಗಳತ್ತ ಹಾಗೂ ಅಲ್ಲಿ ನೆರೆದಿದ್ದ ಎಲ್ಲರನ್ನು ಮತ್ತೊಮ್ಮೆ ಮುಖಮಾಡಿ ವಿನಯಭರಣಭೂಷಣವಾಗಿ ಕೈಮುಗಿದು ವಂದಿಸುತ್ತಾ ಅರಮನೆಯ ಮಹಾದ್ವಾರಕ್ಕೆ ಪರಿವಾರದೊಂದಿಗೆ ಮಂಗಳವಾದ್ಯ ಸಮೇತನಾಗಿ ಬಿಜಯ ಮಾಡಿಬಂದನು.

ಮಹಾದ್ವಾರದಲ್ಲಿ ಭವ್ಯಾಲಂಕೃತವಾಗಿ ಕಾದು ನಿಂತಿದ್ದ ಅಂಬಾರಿ ಆನೆ ಮೇಲೇರಿ ಪರಮಾತ್ಮನನ್ನ ಸ್ಮರಿಸುತ್ತ ಪೀಠವನ್ನಲಂಕರಿಸಿದನು.

ಆಗ ಪ್ರಜೆಗಳ ಜಯಕಾರ ಚತುರ್ದಿಕ್ಕನ್ನು ವ್ಯಾಪಿಸಿತ್ತು.

ಬ್ರಾಹ್ಮಣೋತ್ತಮರಿಂದ ವೇದಮಂತ್ರ ಘೋಷಣೆಯೊಂದಿಗೆ ಹಾಗೂ ರಾಜಪುರೋಹಿತರ ಆಶೀರ್ವಚನದೊಂದಿಗೆ ಭೋಜರಾಜನು ಕುಳಿತಿದ್ದ ಅಂಬಾರಿ ಆನೆಯು ಒಂದಾವರ್ತಿ ತನ್ನ ಸೊಂಡಿಲನ್ನು ಮೇಲೆತ್ತಿ ಘರ್ಜಿಸಿ ಮತ್ತೆ ವಿಜಯದ ಹೆಜ್ಜೆ ಹಾಕಿತ್ತು. ಮಹಾರಾಜರ ಅಂಬಾರಿ ಆನೆ ಮುಂದೆ ಸಾಗಿದ್ದಂತೆ ಅದನ್ನು ಹಿಂಬಾಲಿಸಿ ಸಮಸ್ತದಿಂದ ಕೂಡಿದ ಚತುರಂಗ ಬಲವು ಸಾಲುಸಾಲಾಗಿ ಶಿಸ್ತಿನಿಂದ ಸಾಗುತ್ತಿದ್ದವು. ಎಲ್ಲೆಡೆಯಲ್ಲೂ ವಿಜಯ ಧ್ವನಿ ಮೊಳಗುತ್ತಿತ್ತು. ರಾಜಬೀದಿಯ ಉದ್ದಕ್ಕೂ ಇಕ್ಕಡೆಯಲ್ಲೂ ಉಪ್ಪರಿಗೆಯಲ್ಲಿ ನಿಂತಿದ್ದ ಪ್ರಜೆಗಳು, ಮಂಗಳಾಂಗಿಯರು ತರುಣಿಯರು ಬಂಗಾರದ ಮತ್ತು ರಜತ ಹರಿವಾಣದಲ್ಲಿ ತುಂಬಿರಿಸಿದ್ದ ಸುಗಂದಮಯ ಬಿಡಿ ಪುಷ್ಪಗಳನ್ನು ಬೊಗಸೆ ಬೊಗಸೆಯಾಗಿ ತುಂಬಿಕೊಂಡು ಪುಷ್ಪ ವೃಷ್ಟಿಗೆರೆಯುತ್ತ ಜಯಕಾರ ಹಾರುತ್ತಿದ್ದರು.

ಆ ರೀತಿಯಾಗಿ ಅದ್ವಿತೀಯ ವೈಭವದಿಂದ ಸಾಗಿದ ಭೋಜರಾಜನ ವಿಜಯ ಯಾತ್ರೆ........ ವಿಶ್ವದ ಪ್ರಥಮ ಮಹಾಸಮರವೋ ಎಂಬಂತೆ ಅತಿಯಾದ ಸಂಭ್ರಮದಿಂದ ಧಾರಾನಗರವನ್ನು ಬಿಟ್ಟು ದೂರ ದೂರ ಸಾಗುತ್ತಿತ್ತು. ವಿಜಯಧ್ವನಿ ಎಲ್ಲೆಲ್ಲೂ ಮೊಳಗುತ್ತಲೇ ಇತ್ತು.

ಸುಮಾರು ಮೂವತ್ತು ಹರಿದಾರಿಯುದ್ದಕ್ಕೂ ಅತಿಯಾದ ಉತ್ಸಾಹಭರದಿಂದ ಮುನ್ನುಗ್ಗಿ ಸಾಗಿ ಬರುತ್ತಿದ್ದ ಅಸಮಾನ ಶೂರರಿಂದ ಕೂಡಿದ ಯುದ್ಧವೀರರ ಆ 'ವಿಜಯ ಯಾತ್ರೆ'ಯ ದಂಡು ಬಲು ಎತ್ತರವಾದ ಹಾಗೂ ಅತಿ ಬಲಾಢ್ಯವುಳ್ಳ ಹತ್ತುಸಾವಿರ ಗಂಡಾನೆಗಳಿಂದಲೂ, ವಾಯುವೇಗದಲ್ಲಿ ಓಡಬಲ್ಲ ದಷ್ಟಪುಷ್ಟವಾದ ಹೊಂಬಣ್ಣದ ಐವತ್ತು ಸಾವಿರ ಯುದ್ಧ ಕುದುರೆಗಳಿಂದಲೂ, ಸಾವಿರಾರು ಆಕರ್ಷಕ ಯುದ್ಧ ರಥಗಳಿಂದಲೂ, ಸಶಸ್ತ್ರ ಸಮವಸ್ತ್ರಧಾರಿಗಳಾದ ಐದು ಲಕ್ಷಜನ ಕಾಲಾಳು ಯುದ್ಧವೀರರಿಂದಲೂ ಕೂಡಿದ ಆ ಚತುರಂಗ ಬಲದಿಂದ ಕೂಡಿದ ಸೇವಾ ಪಡೆಯು

ಭರತಖಂಡದ (ಆರ್ಯಾವರ್ತ) - ರಾಜ ವೈಭವವನ್ನು ಇಡಿ ವಿಶ್ವಕ್ಕೆ ಸಾರುತ್ತಿರುವಂತೆ ಭಾಸವಾಗುತ್ತಿತ್ತು.

ಪ್ರತಿಯೊಂದು ಯುದ್ಧದ ಆನೆಗಳಿಗೂ ಸಹ ಯುದ್ಧದ ಸಮಯದಲ್ಲಿ ಯಾವುದೇ ರೀತಿಯ ಅಪಾಯವಾಗದ ಹಾಗೆ ಶಿರದಿಂದ ಸೊಂಡಿಲ ತುದಿತನಕ ಉಕ್ಕಿನ ಮುಖಕವಚವನ್ನು ಕಟ್ಟಿದ್ದರು. ಅದಲ್ಲದೆ ಪ್ರತಿ ಆನೆಯ ಮೈಮುಚ್ಚುವಷ್ಟು ರೀತಿಯಲ್ಲಿ ಕೆಂಪು ಬಣ್ಣದ ಜಮಖಾನ ಹಾದಿ(ಹಾಸಿಗೆ)ಯನ್ನು ಬಿಗಿದು ಕಟ್ಟಿದ್ದರು. ಒಂದೊಂದು ಆನೆಗಳಲ್ಲೂ ಪೀಠಗಳಲ್ಲಿ ನಾಲ್ಕು ನಾಲ್ಕು ಜನ ಉನ್ನತ ದರ್ಜೆಯ ಯುದ್ಧ ಪಡೆಯವರಾದ ಸೇನಾಪತಿಗಳು ದಂಡನಾಯಕರು. ಸರದಾರರು ಮುಂತಾದವರು ಕುಳಿತು ಸಾಗುತ್ತಿದ್ದರು. ಅವರುಗಳು ಸಹ ಭೀಮಕಾಯಶರೀರಉಳ್ಳವರಾಗಿ ಭಯಂಕರ ಸ್ವರೂಪರಾಗಿ ಕಾಣುತ್ತಿದ್ದರು.

ಶತ್ರುಗಳನ್ನು ಹಿಮ್ಮೆಟ್ಟಿಸಲು ಸಾಗರದೋಪಾದಿಯಲ್ಲಿ ಸಾಗುತ್ತಿದ್ದ ಆ ಅದ್ಭುತ ಚತುರಂಗ ಬಲವು ಬಲಾಢ್ಯ ಆನೆ ಕುದುರೆಗಳ ಭಾರದಿಂದಲೂ ಯುದ್ಧ ರಥ ಕಾಲಾಳುಗಳ ಭಾರದಿಂದಲೂ ಕೂಡಿದ ಪೃಥ್ವಿಯ ಭಾರ ತಡೆಯಲಾಗದೆ ಪೃಥ್ವಿಯನ್ನು ಪೊತ್ತಿರುವ ಆದಿ ಶೇಷನೂ ಸಹ ತನ್ನ ಸ್ಥಾನದಿಂದ ಸರಿದು ಬಿಟ್ಟಿರುವನೊ - ಇದರಿಂದಾಗಿ ಭೂಮಿ ಕಂಪಿಸುತ್ತಿರುವುದೊ ಎಂಬಂತೆಯೂ. ಅಷ್ಟೇ ಅಲ್ಲದೆ ಈ ಅದ್ಭುತವನ್ನು ಗಗನದಲ್ಲಿ ನೋಡುತ್ತಿದ್ದ ಇಂದ್ರನು ಸಹ ಚಕಿತನಾಗಿರುವನೊ ಎಂಬಂತೆಯೂ ಹಾಗೂ ಕುದುರೆ. ಆನೆ. ರಥ. ಕಾಲಾಳು ಇವುಗಳಿಂದ ಹೊರಟಿದ್ದ ಧೂಳು ಇಡಿ ನಭೋ ಮಂಡಲವನ್ನೆಲ್ಲ ವ್ಯಾಪಿಸಿ. ಸೂರ್ಯನು ಸಹ ಧೂಳಿನಿಂದ ಮುಚ್ಚಿ ಹೊಗಿರುವನೋ ಎಂಬಂತೆ ಭಾಸವಾಗುತ್ತಿತ್ತು - ಆ ಯುದ್ಧ ಪಡೆಯ ಭಯಂಕರಸ್ವರೂಪದ ಅಸಮಾನ ವಿಜಯ ಯಾತ್ರೆಯಿಂದ.

ಚತುರಂಗ ಬಲದ ಪ್ರತಿಯೊಬ್ಬ ಯುದ್ಧವೀರರೂ ಸಹ ಉಕ್ಕಿನ ಎದೆಕವಚ - ಉಕ್ಕಿನ ಶಿರಸ್ತ್ರಾಣಗಳನ್ನು ಧರಿಸಿದ್ದರು. ಆ ಯುದ್ಧವೀರರೂ ಶತ್ರುಗಳ ದೃಷ್ಟಿಯಲ್ಲಿ ನೋಡಲು ಅತಿ ಭಯಂಕರ ರೂಪವುಳ್ಳವರಾಗಿಯೂ. ಕೆಂಡದಂತಹ ಕಣ್ಣುಳ್ಳವರಾಗಿಯೂ ಕಾಣುತ್ತಿದ್ದರು.

ನಡುವಲ್ಲಿ ಖಡ್ಗ, ಬೆನ್ನಲ್ಲಿ ಗುರಾಣಿ ಧರಿಸಿದ್ದ ಆ ಪ್ರತಿಯೊಬ್ಬ ಯುದ್ಧವೀರರೂ ಸಹ ಪುರುಷಾಕೃತಿಗೆ ಮತ್ತಷ್ಟು ಪೌರುಷವು ಎದ್ದು ಕಾಣುವ ಹಾಗೆ" ಹುರಿಮೀಸೆ ಬಿಟ್ಟಿದ್ದರು. (ಮೀಸೆ ಇಲ್ಲದ ಯೋಧರೆ ಅಲ್ಲಿರಲಿಲ್ಲ)

ಆ ಯುದ್ಧ ಪಡೆಯ ನಡಿಗೆಯ ಶಿಸ್ತು ಇಡಿ ವಿಶ್ವಕ್ಕೆ ಮಾರ್ಗದರ್ಶಕವಾಗಿತ್ತು.

ಕಿರೀಟಧಾರಿಯಾದ ಭೋಜರಾಜನು ಅಂಗರಕ್ಷಕರಿಂದ ಕೂಡಿದ ಅಲಂಕೃತ ಆನೆಯಲ್ಲಿ ಕುಳಿತು ಉತ್ಸಾಹದಿಂದ ಕೂಡಿದ ರಾಜಗಾಂಭೀರ್ಯದಿಂದ ಸಾಗುತ್ತಿದ್ದನು.

ಹಾಗೆ ಸಾಗುತ್ತಿದ್ದ ಭೋಜರಾಜನು ಸಾಕ್ಷಾತ್ ಇಂದ್ರದೇವರೇ ಸಾಗಿಬರುತ್ತಿದ್ದಂತೆ ಕಾಣಸುತ್ತಿತ್ತು.

ದಟ್ಟವಾದ ಅರಣ್ಯ ಗಿರಿಧಾಮಗಳನ್ನು ದಾಟಿಕೊಂಡು ಮುನ್ನಡೆದು ಸಾಗುತ್ತಿದ್ದರು. ಹಾಗೆ ಭಯಂಕರವಾದ ಅರಣ್ಯ ಮಧ್ಯದಲ್ಲಿ ಸಾಗುತ್ತಿದ್ದಾಗ ಆನೆಯ ಮಾವುಟಿಗರು ಅಂಕುಶದಿಂದ ಮೃದುವಾಗಿ ಚುಚ್ಚಿ ಅವುಗಳು ಘೀಳಿಡುವಂತೆ ಮಾಡುತ್ತಿದ್ದರು. ಆಗ ಎಲ್ಲಾ ಆನೆಗಳು ನಭೋಮಂಡಲವೇ ಭೇದಿಸುವಂತೆ ಘೀಳಿಡುತ್ತಿದ್ದವು. ಸಾವಿರಾರು ಕಾಲುನಡುಗೆಯ ಕಾಲಾಳುಗಳು ಶಂಖೋಧ್ಘೋಷ ಮಾಡುತ್ತಿದ್ದರು. ಅದಲ್ಲದೆ ಕೊಂಬು ಕಹಳೆಗಳಿಂದಲೂ ಶಬ್ಧಮಾಡುತ್ತಿದ್ದರು. ಇದರಿಂದ ವನ್ಯಜೀವಿಗಳಾದ ಸಿಂಹವೇ ಮೊದಲಾದ ಹುಲಿ. ಚಿರತೆ. ಕಾಡುಹಂದಿ. ಕರಡಿ ಮುಂತಾದ ಕ್ರೂರ ಪ್ರಾಣಿಗಳು ಭಯದಿಂದ ದಿಕ್ಕು ಕಾಣದೆ ಚೆಲ್ಲಾಪಿಲ್ಲಿಯಾಗಿ ಓಡುತ್ತಿದ್ದವು.

ಕಾಲಾಳುಗಳ ಶಿಸ್ತಿನ ನಡುಗೆ ಇಡಿ ವಿಶ್ವಕ್ಕೆ ಒಂದು ಮಾದರಿಯಾಗಿತ್ತು.

ಬಹು ಪರಾಕ್ರಮಿಯೂ, ಅಸಮಾನ ಶೂರನೂ, ಯುದ್ಧತಂತ್ರ ವಿಶಾರದನೂ ಆದ ಭೋಜರಾಜನ ಅತ್ಯದ್ಭುತವಾದ ಚತುರಂಗ ಬಲದಿಂದ ಕೂಡಿದ ಅಭೂತಪೂರ್ವ ವಿಜಯಯಾತ್ರೆ ಪಡೆಯು...... ವಿಶ್ವದ ಪ್ರಥಮ ಮಹಾ ಸಮರಕ್ಕಾಗಿ ಧಾವಿಸಿ ಬರುತ್ತಿದೆಯೋ ಎಂಬಂತೆ ಹತ್ತು ಹರದಾರಿಯಷ್ಟು ಉದ್ದಕ್ಕೂ ಏಕಮೇವವಾಗಿ ಸಾಗುತ್ತಿತ್ತು.

ಪ್ರತಿಯೊಬ್ಬರಲ್ಲೂ ಉತ್ಸಾಹ ಶೌರ್ಯ - ಸಾಹಸ ನಖಶಿಖಾಂತವಾಗಿ ತುಂಬಿತುಳುಕಾಡುತ್ತಿತ್ತು. ಇಡೀ ವಿಶ್ವವನ್ನೇ ಜಯಿಸಿ ಅಖಂಡ ಭಾರತಕ್ಕೆ ಮಹಾಕೀರ್ತಿಯನ್ನು ತರುತ್ತೇವೆ ಎಂಬ ಛಲ ಎಲ್ಲರ ಮನದಲ್ಲೂ ಮನೆಮಾಡಿಕೊಂಡಿತ್ತು.

ದಾರಿ ಸವೆಯುವ ಪ್ರತಿಯೊಬ್ಬರು ಒಕ್ಕೊರಳಿನಿಂದ ದೇಶಭಕ್ತಿ ಗೀತೆ ಹಾಡುತ್ತಾ,

"ಈ ಭಾರತ ಜಯಭಾರತ
ಈ ಭಾರತ ಜಯಭಾರತ
ಈ ಭಾರತ ಜಯಭಾರತ

ಅಂದಲ್ಲ ಇಂದಲ್ಲ ಎಂದೆಂದು ಈ ಭಾರತ ಜಯಭಾರತ"

- ಎಂದು ವೀರಗೀತೆಯನ್ನು ಹಾಡುತ್ತ, ಹಾಗೂ ಭರತ ಖಂಡ ವೈಭವದ ಇನ್ನು ಅನೇಕ ದೇಶಭಕ್ತಿ ಗೀತೆಗಳನ್ನು ಹಾಡುತ್ತ ಮುನ್ನಡೆಯುತ್ತಿದ್ದರು.

ಆ ರೀತಿ ಸಾಗುತ್ತ ಭೋಜರಾಜನಿಗೆ ಎಂದಿಲ್ಲದ ಸಂತೋಷವನ್ನುಂಟು ಮಾಡಿದ್ದರು.

ಮಹಾರಾಜ ಭೋಜರಾಜರು ವಿಜಯ ಯಾತ್ರೆ ಹೊರಟುಬರುತ್ತಿದ್ದಾರೆ ಎಂಬ ವಾರ್ತೆ ಆರ್ಯಾವರ್ತದ ಚಪ್ಪನ್ನಾರು ದೇಶಗಳ ದಿಕ್ಕುದಿಕ್ಕಿಗೂ ಹಬ್ಬಿಬಿಟ್ಟಿತ್ತು. ದಾರಿಯಲ್ಲಿ ಸಿಗುವ ಅನೇಕಾನೇಕ ಗ್ರಾಮ ಊರು ಪಟ್ಟಣ ದೊಡ್ಡ ದೊಡ್ಡ ಮಹಾನಗರಗಳು ಎಲ್ಲೆಡೆಯಲ್ಲೂ ಅಮುನ್ನವೆ ಅಲ್ಲಲ್ಲೇ ಡಂಗೂರ ಸಾರುತ್ತಾ "ಧಾರಾನಗರದಿಂದ, ಮಹಾರಾಜ ಭೋಜರಾಜರು ಚತುರಂಗ ಬಲ ಸಮೇತರಾಗಿ ವಿಜಯ ಯಾತ್ರೆ ಹೊರಟು ಬರುತ್ತಿದ್ಧಾರೆ ತಿಳಿಯಿರಿ, ತಿಳಿಯಿರಿ" ಎಂದು 'ಡಂಗೂರ' ಸಾರುತ್ತಿದ್ದರು.

ಆ ಸಂತೋಷಸುದ್ದಿ ಎಲ್ಲೆಡೆ ಹರಿಡಿತು. ದೇವರದರ್ಶನ, ರಾಜದರ್ಶನ ದೊರಕುವುದು ಬಹುದುರ್ಲಭ.

ಪ್ರಜಾಪ್ರೇಮಿಯಾದ ಭೋಜರಾಜನನ್ನು ನೋಡಲು, ಗ್ರಾಮಸ್ಥರು, ಹತ್ತಿರದ ಹಳ್ಳಿಯ ಸ್ತ್ರೀಯರು, ಪುರುಷರು, ಮದುವೆಯಾಗದ ಕನ್ಯೆಯರು, ಕಿಶೋರರು,

ವಯೋವೃದ್ಧರಾದಿಯಾಗಿ ಎಲ್ಲರೂ ಆ ರಾಜ ಮಾರ್ಗದುದ್ದಕ್ಕೂ (ಇಕ್ಕೆಡೆಯಲ್ಲೂ) ಸಾಲುಗಟ್ಟಿ ನಿಂತಿದ್ದರು. ವಿಜಯಪಡೆ ಬರುವುದನ್ನೇ ನಿರೀಕ್ಷಿಸುತ್ತಿದ್ದರು.

ಭೇರಿ - ದುಂದುಬಿ - ತಮಟೆ ಮದ್ದಳೆ ಶಂಖಧ್ವನಿ ಮುಂತಾದ ರಾಜ ವಾದ್ಯಗಳಿಂದ ಧ್ವನಿ ಮೊಳಗಿಸುತ್ತ ಹುರುಪು ಉತ್ಸಾಹಗಳಿಂದ ಜಯಕಾರ ಹಾಕುತ್ತಾ ಧಾವಿಸಿ ಬರುತ್ತಿದ್ದ, ಆ ವಿಜಯ ಯಾತ್ರೆ ಪಡೆಯನ್ನು' ನೋಡಿ ಮಹಾನಂದಭರಿತರಾದರು. ಹತ್ತಿರ ಹತ್ತಿರ ಬರುತ್ತಿದ್ದಂತೆ ಅವರೊಡನೆ ಜೊತೆಗೂಡಿ ಜಯಕಾರ ಹಾಕುತ್ತಾ "ಭೋಜರಾಜರಿಗೆ ಜಯವಾಗಲಿ ಭೋಜರಾಜರಿಗೆ ಜಯವಾಗಲಿ"

- ಎಂದು ನಾನಾರೀತಿಯಲ್ಲಿ ಜಯಕಾರ ಹಾಕುತ್ತಿದ್ದರು.

ರಾಜದರ್ಶನದಿಂದ ಸಂಪ್ರೀತರಾದ ಆ ಉತ್ಸಾಹೀ ಪ್ರಜೆಗಳು ತಮ್ಮ ತಮ್ಮ ಗ್ರಾಮಗಳಲ್ಲೂ ಹೇರಳವಾಗಿ ಬೆಳೆದಿದ್ದ ಅಕ್ಕಿ, ಗೋದಿ, ಬೆಲ್ಲ, ಕಡಲೆಕಾಯಿ, ಹಣ್ಣುಹಂಪಲುಗಳನ್ನು ಗಾಡಿಗಾಡಿಗಳಲ್ಲಿ, ಮೂಟೆ-ಮೂಟೆಗಳಲ್ಲಿಯೂ ದೊಡ್ಡ ದೊಡ್ಡ ಬುಟ್ಟಿ- ಬುಟ್ಟಿಗಳಲ್ಲೂ ಹೇರಿಕೊಂಡು ಬಂದು ಆ ವಿಜಯ ಪಡೆಗೆ ಒಪ್ಪಿಸುತ್ತಿದ್ದರು. ಇದರಿಂದ ಆನೆಗಳಿಗೆ ಆಹಾರವಾಗುತ್ತಿತ್ತು. ಅದಲ್ಲದೆ, ಆನೆ-ಕುದುರೆಗಳಿಗೂ ಆಹಾರಕ್ಕಾಗಿ ಪ್ರಜೆಗಳೇ ಮುಂದಾಳು ತನದಿಂದ ದಟ್ಟವಾದ ಅರಣ್ಯದಲ್ಲಿ ಸೊಂಪಾಗಿ ಬೆಳೆದಿದ್ದ ಬಗೆಬಗೆ ಸೊಪ್ಪು, ಜಂಡು, ಹುಲ್ಲು ಮುಂತಾದುವುಗಳನ್ನು ಗಾಡಿಗಾಡಿಗಟ್ಟಲೆ ಹೇರಿಕೊಂಡು ಬಂದು ಆನೆ-ಕುದುರೆಗಳಿಗೆ ಮೇವನ್ನು ಸ್ವಇಚ್ಛೆಯಿಂದಲೇ ತಂದೊಪ್ಪಿಸುತ್ತಿದ್ದರು.

ಪ್ರಜೆಗಳ ಕಾರ್ಯಗಳಿಗೆ ಪ್ರತಿಯಾಗಿ ಭೋಜರಾಜನು ಸಹ ಸಂತೋಷಚಿತ್ತನಾಗಿ ತನ್ನಲ್ಲಿದ್ದ ವಿಫಲ ಸುವರ್ಣನಾಣ್ಯಗಳನ್ನು ಬೊಗಸೆ ಬೊಗಸೆಯಾಗಿ ಪ್ರಜೆಗಳತ್ತ (ಆನೆಯ ಮೇಲೆಯೇ ಕುಳಿತು) ಸುವರ್ಣ ವೃಷ್ಟಿಗೆರೆಯುತ್ತಿದ್ದನು. ಆ ಅಪೂರ್ವನೋಟವು ಪ್ರಜೆಗಳ ಮತ್ತು ಆದರ್ಶ ಮಹಾರಾಜನಾದ ಭೋಜರಾಜನ ನಡುವಿನ ಅನುಪಮ ಭಾಂದವ್ಯದ ಕುರುಹು ಆಗಿದ್ದು ಅದು ಅವಿಸ್ಮರಣೀಯವಾಗಿತ್ತು. ಅದೇರೀತಿಯಾಗಿ ಆ ಅಪೂರ್ವ 'ಅಧ್ಬುತ ವಿಜಯ'ಯಾತ್ರೆಯೂ ಅವ್ಯಾಹತವಾಗಿ ಮುಂದುವರಿದು ಸಾಗುತ್ತಿತ್ತು.

ಬೇರೆ ಯಾವುದೇ ದೇಶವೂ ಸಹ ಹೊಂದಿರದ ಅಖಂಡಮಯವಾದ ಅಗಣಿತ ಪ್ರಬಲ ಚತುರಂಗ ಬಲವನ್ನು ಹೊಂದಿದ್ದ ಹಾಗೂ ಮಹಾ ಪರಾಕ್ರಮಿಯೂ ಆದ ಅಷ್ಟೇ ಆದರ್ಶ ತಿಲಕಪ್ರಾಯನಾದ, ಧರ್ಮಿಷ್ಟನಾದ ಭೋಜರಾಜನ ಮುಂದೆ ನಿಂತು ಯುದ್ಧ ಮಾಡಲು ಮುಂದೆ ಬಾರದೆ ಪ್ರತಿಯೊಬ್ಬ ರಾಜರುಗಳೂ ಸಹ ಅವನೊಡನೆ ಮಿತ್ರತ್ವವನ್ನೇ ಬಯಸಿದವರೆ ಆಗಿದ್ದರು. ಮಿಗಿಲಾಗಿ ಭೋಜರಾಜನ ತಂದೆ ಸಿಂಧೂಲ ರಾಜನ ಕಾಲದಿಂದಲೂ ಮಿತ್ರತನವನ್ನೇ ರೂಢಿಸಿಕೊಂಡು, ಕಪ್ಪಕಾಣಿಕೆಯನ್ನರ್ಪಿಸುತ್ತಿದ್ದ ಆ ಎಲ್ಲ ರಾಜರುಗಳು ಅದೇ ರೀತಿಯಾಗಿ ಮುಂದುವರಿಯಲು ಇಚ್ಛೆಯುಳ್ಳವರೇ ಆಗಿದ್ದರು. ಹೀಗಾಗಿ ಭೋಜರಾಜನನ್ನು ಎದುರು ಹಾಕಿಕೊಳ್ಳುವ ಬದಲಾಗಿ ಶ್ವೇತಧ್ವಜವನ್ನು ತೋರಿಸುತ್ತ ಬಹುಆದರದಿಂದ ಬರಮಾಡಿಕೊಂಡು ವಿಶೇಷವಾದ ರಾಜಗೌರವಗಳಿಂದಲೂ ಅರ್ಘ್ಯಪಾದ್ಯಾದಿಗಳಿಂದಲೂ ಸತ್ಕರಿಸಿ ತಮ್ಮ ತಮ್ಮ ದೇಶದ

ವಿಪುಲ ಸಂಪತ್ತನ್ನು, ಚತುರಂಗ ಸೈನೀಕರಿಗೆ ಬೇಕಾಗುವ ಯಥೇಚ್ಛವಾದ ಆಹಾರ ಧಾನ್ಯಗಳನ್ನು ಸಂತೋಷದಿಂದ ನೀಡಿ ಅಂತಃಕರಣದಿಂದ ಬೀಳ್ಕೊಡುತ್ತಿದ್ದರು. ಹೀಗಾಗಿ ಭೋಜರಾಜನ ಆ ವಿಜಯಯಾತ್ರೆಯೂ...... ಅದೇನು ವಿಜಯಯಾತ್ರೆಯೋ ಅಥವಾ ವಿಹಾರ ಯಾತ್ರೆಯೊ ಎಂಬಂತೆ ವಿಜಯ - ದಿಗ್ವಿಜಯವಾಗಿ ಸಾಗುತ್ತಿತ್ತು. ತಾನು ಹೋದೆಡೆಯಲ್ಲಿ ಕಪ್ಪಕಾಣಿಕೆಯ ಸುರಿಮಳೆಯ ಸುವೃಷ್ಟಿಯಾಗುತ್ತಿತ್ತು. ಹಾಗೆಯೇ ಮುಂದುವರಿದುಸಾಗುತ್ತಾ ವಂಗ ಮತ್ತು ಕಳಿಂಗ ದೇಶಕ್ಕೆ ಬಿಜಯಿಸಿಬಂದನು. ತನ್ನ ತಂದೆಯಾದ ಸಿಂಧೂಲ ರಾಜನಿಗೆ ಪರಮ ಮಿತ್ರ ರಾಜ್ಯಗಳೇ ಆದ ಆ ರಾಜ್ಯಗಳಿಗೆ ಪ್ರವೇಶ ಮಾಡಿದಂತೆ ಆ ದೇಶದ ರಾಜರುಗಳು ಭೋಜನನ್ನು ಅಮಿತೋತ್ಸಾಹದಿಂದ ಬರಮಾಡಿಕೊಂಡು ಅರ್ಘ್ಯಪಾದಾದಿಗಳಿಂದ ಸತ್ಕರಿಸಿದರು. ಚತುರಂಗ ಬಲದೊಡನೆ ತನ್ನ ರಾಜ್ಯದಲ್ಲಿ ಎಂಟು ದಿವಸ ಇದ್ದು ವಿಶ್ರಮಿಸಿಕೊಂಡು ಮುಂದೆ ಹೋಗುವಂತೆ ವಿನಂತಿಸಿಕೊಂಡರು. ನಂತರ ಚತುರಂಗ ಬಲ ಸೈನ್ಯ ಸಮೇತರಾಗಿ ವಿಜಯ ಪತಾಕೆ ಹಾರಿಸುತ್ತಾ ಚೇದಿದೇಶಕ್ಕೆ ಬಂದನು. ಅಲ್ಲಿನ ಚಾರುಕೀರ್ತಿ ಮಹಾರಾಜನನ್ನು ಸಾಮಧಾನಗಳಿಂದಲೇ ಸಾಮಂತ ರಾಜನನ್ನಾಗಿ ಮಾಡಿ ಕೊಂಡನು. ಚಾರುಕೀರ್ಥಿ ಮಹಾರಾಜನು ಸಹ ಭೋಜರಾಜನಿಗೆ ವಿಪುಲ ಐಶ್ವರ್ಯದಿಂದ ಕೂಡಿದ ಯಥೇಚ್ಛವಾದ ಮುತ್ತು, ರತ್ನ, ವಜ್ರ, ವೈಡೂರ್ಯಗಳನ್ನು ಸುವರ್ಣನಾಣ್ಯಗಳನ್ನು ಕಪ್ಪಕಾಣಿಕೆರೂಪದಲ್ಲಿ ಕೊಟ್ಟು ಬಹು ಆದರದಿಂದ ಬೀಳ್ಕೊಟ್ಟನು.

# ಭೋಜರಾಜನಿಂದ ಕೋಸಲ ದೇಶದ ಕ್ಷಾಮನಿವಾರಣೆ

ನಂತರ ಕೋಸಲ ದೇಶಕ್ಕೆ ಬಿಜಯಿಸಿಬಂದನು. ಆದರೆ ಆ ದೇಶದ ಸ್ಥಿತಿ ಬಹು ಚಿಂತಾಜನಕವಾಗಿತ್ತು. ನಾಲ್ಕೈದು ವರ್ಷಗಳಿಂದಲೂ ಆ ದೇಶದಲ್ಲಿ ಮಳೆ ಇಲ್ಲದೆ ಬೆಳೆಯಾಗದೆ ಪ್ರಜೆಗಳು ತೀರ ಅನರ್ಥಕ್ಕೆ ಗುರಿಯಾಗಿದ್ದರು. ಇದರಿಂದ ಆ ದೇಶದ ರಾಜನು ತೀರ ಕಂಗಾಲಾಗಿ ಹೋಗಿದ್ದನು. ಪ್ರಜೆಗಳಿಗಾಗಿ ತನ್ನ ರಾಜ ಬೊಕ್ಕಸವನ್ನು ಬರಿದು ಮಾಡಿಕೊಂಡನು. ಅದಷ್ಟೇ ಅಲ್ಲದೆ, ತಾನು ಆಪತ್ಕಾಲದಲ್ಲಿ ವಿನಿಯೋಗಿಸಲು ಇರಿಸಲಾಗಿದ್ದ ಅಪಾರ ಗುಪ್ತ ಧನವೂ ಸಹ ಸಂಪೂರ್ಣವಾಗಿ ಕರಗಿಹೋಗಿತ್ತು. ಅಲ್ಲಿನ ಪ್ರಜೆಗಳು ಹೊಟ್ಟೆಗಿಲ್ಲದೆ ಹಾಹಾಕಾರ ಹಾಕುತ್ತಿದ್ದರು. ದನಕರುಗಳಿಗೆ ನೀರು, ಮೇವುಗಳಿಲ್ಲದೆ ಅಲ್ಲಲ್ಲೆ ಅಸುನೀಗಿದ್ದವು. ಹಸಿವಿನಿಂದ ಬಳಲುತ್ತಿದ್ದ ನರರು ನರರನ್ನೇ ವಧಿಸಿ ನರಮಾಂಸವನ್ನು ತಿಂದು ಹಸಿವೆಯನ್ನು ಹಿಂಗಿಸಿಕೊಳ್ಳುವಂತಹ ಅಮಾನುಷ ಬರ್ಬರ ಕೃತ್ಯಕ್ಕೆ ಒಳಗಾಗಿ ಬಿಟ್ಟಿದ್ದರು.

ಇದೆಲ್ಲವನ್ನು ಕಣ್ಣಾರೆ ಕಂಡ, ಕರುಣಾಳುವಾದ ಭೋಜರಾಜನು ಬಹುದುಃಖಿಯಾದನು. ದುಃಖ- ಕಷ್ಟ ಕಾರ್ಪಣ್ಯವೇನೆಂಬುದನ್ನೇ ಅರಿಯದ ಅವನಿಗೆ ದಿಕ್ಕೇ ತೋಚದಂತಾಯಿತು. ಮೊದಲಾಗಿ ತನ್ನ ಚತುರಂಗಬಲದಲ್ಲಿದ್ದ ಎಲ್ಲ ಆಹಾರ ಸಾಮಗ್ರಿಗಳನ್ನು ಆ ರಾಜ್ಯದ ಪ್ರಜೆಗಳಿಗೆ ಹಂಚಿಬಿಟ್ಟನು. ಆನಂತರ ಈ ದೇಶ ಹೀಗಾಗಲು ಕಾರಣವಾದರೂ ಏನು ಎಂದರಿಯಲು ನೇರವಾಗಿ ರಾಜನ ಅರಮನೆಗೆ ಬಂದನು. ಆದೇಶದ ರಾಜನಾದ ಮಯೂರ ವರ್ಮನು ತನ್ನ ದೇಶದ ಪರಿಸ್ಥಿತಿ ಹೀಗಾಯಿತಲ್ಲ ಎಂದು ಮನೋವ್ಯಥೆಯಿಂದ ಹಾಸಿಗೆಹಿಡಿದು ಅತಿಯಾದ ವೇದನೆಯಿಂದ ಬಳಲುತ್ತಿದ್ದನು. ಆ ಭಾದೆಯಿಂದಾಗಿ ತೀರ ಕೃಷವಾಗಿಬಿಟ್ಟಿದ್ದನು. ಅಲ್ಲಿಯೇ ರಾಜನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದ ಅರಮನೆಯ ಮಹಾಮಂತ್ರಿಯಲ್ಲಿ ವಿಚಾರಮಾಡಿದ. ಮೂರು ನಾಲ್ಕು ವರ್ಷಗಳಿಂದಲೂ ಮಳೆಬೆಳೆ ಇಲ್ಲದೆ ಪ್ರಜೆಗಳು ಪೂರ ಕಂಗಾಲಾಗಿಬಿಟ್ಟಿದ್ದಾರೆ. ದೇಶ ಹಾಹಾಕಾರದಿಂದ ತತ್ತರಿಸಿ ತಾಂಡವವಾಡುತ್ತಿದೆ. ದನಕರುಗಳು.ಪಶುಪ್ರಾಣಿಗಳು ನೀರು, ಹುಲ್ಲು ಇಲ್ಲದೆ ರಕ್ತಕಾರುತ್ತ ಪ್ರಾಣಬಿಡುತ್ತಿವೆ ಎಂದು ನಾನಾ ರೀತಿಯಲ್ಲಿ ತಮ್ಮ ದೇಶದ ಸ್ಥಿತಿಗತಿಗಳನ್ನು ಹೇಳಿಕೊಂಡು ದುಃಖಿಸಿದರು ಮಂತ್ರಿಗಳು.

ಧೃತಿಗೆಡದೆ ಭೋಜನು ತನ್ನ ಚತುರಂಗ ಬಲ ಸೇನೆಯನ್ನು ಒಂದೆಡೆ ಬೀಡುಬಿಟ್ಟು ಆ ದೇಶದ ಪರಿಸ್ಥಿತಿಯನ್ನು ಮತ್ತಷ್ಟು ಅರಿಯುವ ಸಲುವಾಗಿ ಅನುಭವಿಗಳಾದ ಆ ರಾಜ್ಯ ಸೇನಾ ಪಡೆಯರೊಂದಿಗೆ ಅಶ್ವಾರೂಢರಾಗಿ ಸಂಚಾರ ಮಾಡಿಬಂದರು. ರಸ್ತೆಯಲ್ಲಿ ಅಲ್ಲಲ್ಲೇ ಕೆರೆಕುಂಟೆಗಳೆಲ್ಲ ಒಣಗಿ ಹೋಗಿದ್ದವು. ಬರಿ ಭೂಮಿ ಸಂಪೂರ್ಣ ಬರಕಲಾಗಿ ಬಾವಿಗಳಲ್ಲೂ ಸಹ ನೀರಿಲ್ಲದಂತಾಯಿತು. ಬಿಸಿಲಿನ ತಾಪಕ್ಕೆ ನಾಗರೀಕರು ಬಳಲಿದ್ದರು. ಪುಣ್ಯವಶಾತ್ ಹಾಗೆ ಸಂಚರಿಸುವಲ್ಲಿ ಅವರಿಗೆ ಒಂದು ವಿಷ್ಣು ಮತ್ತು ಶಿವ ದೇವಾಲಯ ಸಿಕ್ಕಿತು. ಆ ದೇವರಲ್ಲಿ ಸಂಪೂರ್ಣ

ನಂಬಿಕೆಯುಳ್ಳ ಅವನು ತನ್ನ ಆರಾಧ್ಯದೇವರೇ ಆದ ವಿಷ್ಣು ದೇವರನ್ನು ಮೊರೆಹೊಕ್ಕು ಪ್ರಾರ್ಥಿಸುತ್ತ ನಾನಾ ರೀತಿಯಲ್ಲಿ ಬೇಡಿ "ಹೇ ಪರಮಾತ್ಮ...... ಈ ದೇಶಕ್ಕೆ ಮಳೆಯನ್ನು ಕರುಣಿಸು ತಂದೆ" ಎಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿದ.

ಆದರೆ ಭೋಜರಾಜನ ಪ್ರಾರ್ಥನೆಗೆ ಮೌನಿಯಾಗಿಯೇ ಇದ್ದ ಭಗವಂತ.

ಆಗ ಭೋಜರಾಜನಿಗೆ ಪರಮಾತ್ಮನ ಮೇಲೂ ಸಿಟ್ಟು ಬಂತು. ಅಷ್ಟೇ ಅವ್ಯಕ್ತ ಛಲ ಅವನ ಹೃದಯ ಮಂದಿರದಲ್ಲಿ ತಾಂಡವವಾಡಿತು.

"ಹೇ ಪರಮಾತ್ಮ...... ನೀನು ಅವತರಿಸಿದ ದಶಾವತಾರವನ್ನು ಕುರಿತು ನಾನೊಂದು ಹಾಡನ್ನು ಹೇಳುತ್ತೇನೆ. ಆ ಹಾಡಿಗೂ ನೀನು ಮಳೆಬಾರಿಸದೆ ಮೌನಿಯಾಗಿಯೇ ಇದ್ದಲ್ಲಿ, ಇದೊ ನನ್ನ ಈ ಖಡ್ಗದಿಂದ ನನ್ನ ಕತ್ತನ್ನು ನಾನೇ ಶಿರಚ್ಛೇಧನ ಮಾಡಿಕೊಂಡು ನಿನಗೊಪ್ಪಿಸಿ ಬಿಡುತ್ತೇನೆ. ಇದು ಶತಸಿದ್ದ. ನನ್ನಲ್ಲಿ ಸತ್ಯವಿದ್ದದ್ದೇ ಆದರೆ ಈ ದೇಶದ ಸುಭಿಕ್ಷವಾಗಲು ಮಳೆ ಬರುವಂತೆ ಅನುಗ್ರಹಿಸು ತಂದೆ" ಎಂದು ಪರಮಾತ್ಮನನ್ನು ಕುರಿತು ತನ್ನ ಮಧುರವಾದ ಕಂಠದಿಂದ ಗೀತೆಯೊಂದನ್ನು ಹೇಳಲು ಪ್ರಾರಂಭಿಸಿದನು.

ದೇವಾ - ಶ್ರೀಶಾ - ಭಕ್ತವತ್ಸಲಾ
ಜಗದೋದ್ಧಾರ - ನಮಿಸುವೇ ಲೋಕಪಾಲಾ
ನಾರಾಯಣ ನರಹರೀ ದಶರೂಪಿ ಗೋವಿಂದಾ ||ಪಲ್ಲವಿ||

ವಿಧಿಗೆ ವೇದ ನೀಡಲು ಮತ್ಸ್ಯನಾಗಿ ಬಂದೆ
ಮಂದರ ಗಿರಿ ಹೊರಲು ಕೂರ್ಮನಾಗಿ ಮೆರೆದೆ
ಭೂದೇವಿಯ ರಕ್ಷಿಸಲು ವರಾಹನಾದೆ
ನಾರಸಿಂಹನಾಗಿ ಭಕ್ತ ಪ್ರಹ್ಲಾದನ ಪೊರೆದಾ ||೧||

ವಾಮನನಾಗುತ ಮೂರು ಲೋಕವನೆ ಅಳೆದೆ
ಪರಶುರಾಮನಾಗಿ ಪಿತೃಭಕ್ತಿಯನು ಬೆಳಗಿಸಿದೆ
ಶ್ರೀರಾಮನಾಗಿ ಸತಿಯ ಹೊನ್ನಗುಣವ ತೋರಿದೆ
ಶ್ರೀಕೃಷ್ಣನಾಗಿ ಜಗಕೆ ಗೀತಸಂದೇಶವಿತ್ತ ||೨||

ಬೌದ್ಧನಾಗಿ ರಕ್ಕಸ ತ್ರಿಪುರನಾ ಹತಿಸಿದೆ
ಕಲ್ಕಿಯಾಗಿ ಈ ಲೋಕದ ಕಲಿತನವನೂ ಕಳೆಯುವೆ
ಶ್ರೀಶೇಷಶಾಯಿ ಮಹಾ ವಿಷ್ಣು ವಿಶ್ವರೂಪನೇ
ಶ್ರೀಶವನಿನ್ನ ಬೇಡುವೆ ಈ ದೇಶವ ಸುಭಿಕ್ಷಗೊಳಿಸು ||೩||

ಭೋಜರಾಜನು ಹೇಳಿದ ಆ ಭಕ್ತಿಗೀತೆಯೂ ನಭೋಮಂಡಲವನ್ನು ಛೇದಿಸಿಕೊಂಡು ನೇರವಾಗಿ ವೈಕುಂಠಲೋಕಾಧಿಪತಿಗೆ ಅರ್ಪಿತವಾಯಿತೋ ಎಂಬಂತೆ..... ಒಮ್ಮೆಯೆ ನೂರಾರು ಗುಡುಗುಸಿಡಿಲು ಆರ್ಭಟಿಸಿತು. ಮೋಡ ರಹಿತವಾಗಿದ್ದ

ಗಗನಮಂಡಲವು ಕಪ್ಪು ಕಾರ್ಮೋಡ ತುಂಬಿ ಸಿಡಿಲು ಆರ್ಭಟದೊಂದಿಗೆ ಧಾರಾಕಾರ ಮಳೆ ಸುರಿಯಲಾರಂಭಿಸಿತು. ನೀರಿಗಾಗಿ ಜನರು ಬಾಯಿ ಒಡ್ಡಿ ಆ ಮಳೆನೀರನ್ನು ಕುಡಿದು ತಮ್ಮ ತಮ್ಮ ಉದರದಾಹವನ್ನು ಹಿಂಗಿಸಿಕೊಳ್ಳುತ್ತಿದ್ದರು. ನೀರಿಗಾಗಿ ಪ್ರಾಣ ತೊರೆಯುತ್ತಿದ್ದ ದನಕರುಗಳು ಪಶುಪ್ರಾಣಿಗಳು ಎಲ್ಲಕ್ಕೂ ಮತ್ತೆ ಜೀವ ಚೇತನವುಂಟಾಯಿತು.

ಭೋಜರಾಜರು ಬಂದಿದ್ದರಿಂದ ನಾವು ಮಳೆ ನೋಡುವಂತಾಯಿತು. ಜನರು ಬದುಕುವಂತಾಯಿತು ಎಂದು ಅವನನ್ನು ಮುಕ್ತ ಕಂಠದಿಂದ ಸ್ತುತಿಸಿಕೊಂಡಾಡಿದರು.

ಆ ದೇಶದ ರಾಜನಿಗೂ ಸಹ ಈ ವಿಷಯ ತಿಳಿಯಿತು. ಅಹಾ.. ನಮ್ಮ ದೇಶವನ್ನು ರಕ್ಷಿಸಿದ ಮಹಾ ಪುರುಷ ಎಂದು ಅನೇಕ ರೀತಿಯಲ್ಲಿ ಭೋಜರಾಜನ ಮಹಿಮೆಯನ್ನು, ಆತ್ಮಬಲವನ್ನು ಕೊಂಡಾಡಿದ್ದನು.

ಶಕ್ತಿಹೀನನಾಗಿದ್ದಾಗ್ಯೂ ಸಹ ಆತ್ಮಬಲದಿಂದ ಭೋಜರಾಜನಿದ್ದೆಡೆಗೆ ಬಂದು ಅವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಹೇಳುತ್ತಾ "ಹೇ ಮಹಾನುಭಾವನಾದ ಭೋಜರಾಜರೆ, ಆಪತ್ಕಾಲದಲ್ಲಿ ಶ್ರೀಮನ್ ನಾರಾಯಣನಂತೆ ಈ ದೇಶಕ್ಕೆ ಬಂದು ಮಳೆಬರುವಂತೆ ಮಾಡಿದ್ದೀರಿ. ಇನ್ನು ಮುಂದೆ ಈ ದೇಶ ನಿಮ್ಮ ದೇಶ. ಈ ದೇಶಕ್ಕೆ ನೀವೇ ತಂದೆ, ನೀವೆ ತಾಯಿ. ಈಗಲೆ ಈ ದೇಶವನ್ನು ನಿಮಗೆ ಒಪ್ಪಿಸಿ ಬಿಡುತ್ತೇವೆ" ಎಂದು ಭಾವೋದ್ರೇಕದಿಂದ ನುಡಿದ.

"ಆ ರೀತಿ ಹೇಳಬೇಡಿ, ಈ ದೇಶವನ್ನು ನೀವೇ ಆಳಿ, ನೀವೇ ಸಂರಕ್ಷರಿಸಿ.... ಇದರ ಮೇಲ್ವಿಚಾರಣೆಯನ್ನು ನಾನು ನೋಡಿಕೊಳ್ಳುತ್ತೇನೆ. ಈ ದೇಶದ ಸುಭಿಕ್ಷತೆಗಾಗಿ ನೀವು ಒಂದು ಮಹಾಯಾಗ ಮಾಡಿರಿ, ಅದರಿಂದ ಎಲ್ಲ ರೀತಿಯಲ್ಲೂ ಒಳ್ಳೆಯದಾಗಬಲ್ಲದು. ಈ ನಮ್ಮ ಭರತಖಂಡವು 'ಪುಣ್ಯಭೂಮಿ'. ಈ ಪುಣ್ಯ ಭೂಮಿಯಲ್ಲಿ ಸದಾ ಕಾಲವು ಯಜ್ಞ ಯಾಗಗಳು ಜಪತಪಗಳು ಪೂಜೆಗಳು ಸದಾ ಕಾಲವು ನಡೆಯುತ್ತಿರಬೇಕು. ಧರ್ಮಕಾರ್ಯಗಳು, ದಾನಧರ್ಮಗಳು ಇವುಗಳೇ ದೇಶದ ಸುಭಿಕ್ಷತೆಗೆ ಮೂಲ ಮಂತ್ರ," ಎಂದು ಅನೇಕ ರೀತಿಯಲ್ಲಿ ಉಪದೇಶಿಸಿ ತನ್ನ ಚತುರಂಗ ಬಲದೊಡನೆ ಮುಂದಿನ ದೇಶವನ್ನು ಕುರಿತು ಪ್ರಯಾಣಮಾಡಿದನು.

ಕೋಸಲ ದೇಶದ ಪ್ರಜೆಗಳು ಭೋಜರಾಜನನ್ನು, "ಸಾಕ್ಷಾತ್ ದೇವರೇ ಆ ರೂಪದಲ್ಲಿ ಬಂದು ನಮ್ಮ ದೇಶವನ್ನು ಸುಭಿಕ್ಷಗೊಳಿಸಿದ್ದಾರೆ, ನಮ್ಮೆಲ್ಲರಿಗೂ ಜೀವದಾನ ಮಾಡಿದ್ದಾರೆ" ಎಂದು ಹಲವು ವಿಧದಲ್ಲಿ ಗುಣಗಾನ ಮಾಡುತ್ತಿದ್ದರು.

ಇದರಿಂದ ಭೋಜನ ಕೀರ್ತಿ ಎಲ್ಲೆಲ್ಲೂ ಹರಡುತ್ತಾ ಅವನೊಬ್ಬ ಮಹಾರಾಜ - ಚಕ್ರವರ್ತಿ ಸಾರ್ವಭೌಮನು ಮಾತ್ರವೇ ಅಲ್ಲ. ಅವನೊಬ್ಬ ರಾಜ ಋಷಿ... ದೇವ ಸಮಾನನು ಎಂದು ಕೊಂಡಾಡಿದ್ದರು ಎಲ್ಲರೂ.

# ವಿದರ್ಭದೇಶದಲ್ಲಿ ಭೋಜರಾಜ

ಶೂರ ಸಿಂಧೂಲ ರಾಜನ ವಂಶ ಪ್ರದೀಪನಾದ ಮಹಾ ಪರಾಕ್ರಮಿಯು, ಅಜಾತ ಶತ್ರುವೂ ಆದ ಭೋಜರಾಜನು ತನ್ನ ಅಪರಿಮಿತ ಚತುರಂಗಬಲ ಸೇನಾಪಡೆಯೊಂದಿಗೆ ದೇಶದೇಶಗಳ ಎಲ್ಲೆಡೆ ವಿಜಯ ದಿಗ್ವಿಜಯವನ್ನು ಸಾಧಿಸುತ್ತಾ ವಿಜಯ ಪತಾಕೆ ಹಾರಿಸುತ್ತಾ ವಿದರ್ಭದೇಶಕ್ಕೆ ಬಂದನು.

ಆ ದೇಶದಲ್ಲೂ ಸಹ ಅಲ್ಲಿನ ಮಹಾರಾಜನಾದ ವಿದ್ಯಾಧರ ಮಹಾರಾಜನು ಭೋಜರಾಜನನ್ನು ಬಹು ಆದರದಿಂದ ಬರಮಾಡಿಕೊಂಡು ಯಥೋಚಿತವಾದ ಅರ್ಘ್ಯ-ಪಾದ್ಯಾದಿಗಳಿಂದ ಸತ್ಕರಿಸಿದ್ದನು.

- ಹೀಗೆ ಭೋಜರಾಜನು ಹೋದೆಡೆಯಲ್ಲೆಲ್ಲ ಅವನನ್ನು ಶ್ವೇತಬಾವುಟವನ್ನು ತೋರುತ್ತಾ ಆದರದಿಂದ ಬರಮಾಡಿಕೊಂಡು ಎಲ್ಲರೂ ಸತ್ಕರಿಸುತ್ತಿದ್ದರೆ ವಿನಹ ಅವನೊಡನೆ ಯುದ್ಧಮಾಡಿ ಜಯಿಸುವವರು ಯಾರೊಬ್ಬರು ಇಲ್ಲವಾಗಿದ್ದರು. ಕಾರಣ ಭೋಜರಾಜನಲ್ಲಿದ್ದ ಆದರ್ಶತೆಯೇ ಅವನಿಗೆ ಶ್ರೀರಕ್ಷೆಯಾಗಿತ್ತು. ಮಿಗಿಲಾಗಿ ಭೋಜರಾಜನಲ್ಲಿ ಇದ್ದಷ್ಟು ಅಪಾರ ಚತುರಂಗ ಸೇನಾಬಲ ಮತ್ಯಾರಲ್ಲೂ ಇಲ್ಲದಿದ್ದುದು ಮತ್ತೊಂದು ಕಾರಣವಾಗಿತ್ತು.

ಇದರಿಂದ ಅತಿ ಬಲಾಢ್ಯನಾದ ಯುದ್ಧಪ್ರಿಯನಾದ ಭೋಜರಾಜನಿಗೂ ಸಹ ವಿವೇಚನೆಗೆ ಎಡೆ ಮಾಡಿಕೊಟ್ಟಿತ್ತು. "ಎಲ್ಲ ರಾಜರುಗಳು ಈ ರೀತಿ ನನ್ನಲ್ಲಿ ಮಿತ್ರುತ್ವವನ್ನು ಬಯಸುವುದಾದರೆ ನಾನೇಕೆ ಈ ಅಪಾರ ಚತುರಂಗವನ್ನು ತೆಗೆದುಕೊಂಡು ದೇಶದೇಶದಾಧ್ಯಂತ ಸುತ್ತಾಡುವ ಅಗತ್ಯವಾದರೂ ಏನಿತ್ತು! ನನ್ನಲ್ಲಿ ಮನೆಮಾಡಿಕೊಂಡಿರುವ ಅತುಲ ಪರಾಕ್ರಮವನ್ನು, ಶೌರ್ಯವನ್ನು ಸಾಹಸವನ್ನು ಯಾವರೀತಿ ಜಗತ್ತಿಗೆ ತೋರಿಸಲಿ" ಎಂದು ನಾನಾ ರೀತಿಯಲ್ಲಿ ಚಿತ್ತಚಂಚಲನಾದನು.

ಅದೆ ಮನದತೊಳಲಾಟದಲ್ಲಿ ಆ ರಾತ್ರಿ ವಿದರ್ಭರಾಜನ ಅತಿ ಸುಂದರವಾದ ಅರಮನೆಯ ಭವ್ಯ ಅತಿಥಿಗೃಹದಲ್ಲಿ ವಿರಮಿಸುತ್ತಿದ್ದನು.

ಅರಮನೆಯ ಸಮೀಪದಲ್ಲಿಯೇ ವಿಶಾಲವಾದ ಮೈದಾನದಲ್ಲಿ ಭೋಜರಾಜನ ಚತುರಂಗಬಲವು ದೊಡ್ಡ ಪ್ರಮಾಣದ ಡೇರೆಗಳಲ್ಲಿ ತಂಗಿದ್ದರು. ಆನೆ, ಕುದುರೆ, ಒಂಟೆ ಹಾಗೂ ರಥಗಳಿಗಾಗಿ ಮೂರು ಯೋಜನ ಉದ್ದದ ಪ್ರತ್ಯೇಕ ಸ್ಥಳವನ್ನು ವಿದ್ಯಾಧರ ಮಹಾರಾಜನೆ ಸೂಚಿಸಿ ಏರ್ಪಡಿಸಿದ್ದನು. ಅದರಂತೆ ಅವೆಲ್ಲವೂ ಪುಷ್ಟಿಯಾದ ಮೇವನ್ನು ಜಗಿಯುತ್ತ ದೂರದ ಊರಿನಿಂದ ಬಂದಿದ್ದ ಆಯಾಸವನ್ನು ಪರಿಹರಿಸಿಕೊಳ್ಳುತ್ತಿದ್ದವು.

ಡೇರೆಗಳಲ್ಲಿ ತಂಗಿದ್ದ ಎಲ್ಲಾ ಸೈನಿಕರಿಗೂ ದಂಡನಾಯಕರಿಗೂ ಉನ್ನತ ಅಧಿಕಾರಿಗಳು ವಿಶೇಷವಾದ ರಾಜಭೋಜನ (ಭಕ್ಷ್ಯ - ಭೋಜ್ಯಾದಿ ಕಾಯಿಪಲ್ಯಗಳಿಂದ ಕೂಡಿದ ಹಾಗೂ ಹಾಲು ತುಪ್ಪಮೊಸರು ಮೊದಲಾದವುಗಳಿಂದ ಕೂಡಿದ ಷಡ್ರಸ ಪರಮಾನ್ನಾದಿ ಮೃಷ್ಟಾನ್ನ ಭೋಜನ)ದ ಏರ್ಪಾಟಾಗಿತ್ತು.

ಅಂದು ಆ ಚತುರಂಗ ಬಲ ಸೈನಿಕರ ಊಟಕ್ಕಾಗಿಯೇ ಐದು ಸಾವಿರ ಮೂಟೆ ಗೋದಿ. ಅಷ್ಟೇ ಪ್ರಮಾಣದ ತಂಡುಲ (ಅಕ್ಕಿ) ಅದಕ್ಕೆತಕ್ಕ ಸಾಂಬಾರ ಪದಾರ್ಥಗಳು ಎಲ್ಲವನ್ನು ಮಹಾರಾಜ ವಿದ್ಯಾದರನೇ ಒದಗಿಸಿದ್ದನು. ಹಾಲು ಮೊಸರು ತುಪ್ಪ ಇವುಗಳಂತೂ ದೊಡ್ಡ ದೊಡ್ಡ ಕೊಳದಪ್ಪಲೆಗಳಲ್ಲಿ ಶೇಖರಿಸಲಾಗಿತ್ತು. ಹಣ್ಣು ಹಂಪಲುಗಳು ತನ್ನ ದೇಶದಲ್ಲಿ ಎಲ್ಲೆಡೆ ಇರುವುದು ಸಾಲದೆ ಅಕ್ಕಪಕ್ಕದ ದೇಶಗಳಿಂದಲೂ ಆಮದು ಮಾಡಿಕೊಂಡಿದ್ದರು. ಅಡಿಗೆ ಶಾಲೆಯ ವೈಖರಿಯಂತೂ ವರ್ಣಿಸಲಸಾಧ್ಯವೋ ಎಂಬಂತೆ - ಜಲ ಸಂಪರ್ಕ ಇರುವ ಸ್ಥಳದಲ್ಲೆಯೇ ಅಡಿಗೆ ಏರ್ಪಾಡು ಮಾಡಿಸಿದ್ದರು.

ಆ ಎಲ್ಲ ಚತುರಂಗ ಬಲ ಸೈನಿಕರು. ಆನೆ. ಮಾವುಟಿಗರು. ಕುದುರೆ ಸವಾರರು. ರಥಚಾಲಕರು. ಸೇನಾನಾಯಕರು. ಸೇನಾಧಿಪತಿಗಳು. ದಳಪತಿಗಳು ಸರದಾರರು. ಆದಿಯಾಗಿ ಒಂದೊಂದು ಪಂಕ್ತಿಯಲ್ಲೂ ಹತ್ತು ಹತ್ತು ಸಾವಿರ ಜನರು ರಾಜಭೋಜನ ಮಾಡಿ ಮುಗಿಸುತ್ತಿದ್ದರು. ಅದರಂತೆ ಎಲ್ಲ ಸಮಸ್ತರು ಭೋಜನ ಮಾಡಿ ನಿದ್ರಾಪರವಶರಾದರು.

ಇತ್ತ ಸ್ವತಹ ಮಹಾರಾಜ ವಿದ್ಯಾಧರನೇ ತನ್ನ ಅರಮನೆಯಿಂದ ರಾಜರಥವನ್ನು ತೆಗೆದುಕೊಂಡು. ಭೋಜರಾಜನು ಬಿಡಾರ ಮಾಡಿದ್ದ ರಾಜಾತಿಥಿಗೃಹಕ್ಕೆ ಬಂದನು. ಅಲ್ಲಿ ಏಕಾಂತದಲ್ಲಿದ್ದ ಭೋಜರಾಜನನ್ನು ವಿನಮ್ರ ಭಾವದಿಂದ ಭೋಜನಕ್ಕೆ ಬರಬೇಕೆಂದು ಆಹ್ವಾನಿಸಿದನು. ವಿದ್ಯಾಧರನ ಆಹ್ವಾನವನ್ನು ಪುರಸ್ಕರಿಸಿದ ಭೋಜನು ವಿದ್ಯಾಧರನ ಜೊತೆಗೂಡಿ ಬಂದು. ರಾಜರಥದಲ್ಲಿ ಕುಳಿತನು. ಆ ಇಬ್ಬರು ಮಹಾರಾಜರುಗಳನ್ನು ಹೊತ್ತ ರಾಜ ರಥವು ಅರಮನಗೆ ಸಾಗಿಬಂತು.

ವಿದ್ಯಾಧರನ ಅರಮನೆಯೂ ಸಹ ಬಹು ಸುಂದರವಾಗಿಯೂ ಭವ್ಯವೈಭವದಿಂದಲೂ ಪ್ರಕಾಶಿಸುತ್ತಿತ್ತು.

ವಿದ್ಯಾಧರನ ಏಕಾಂತ ಭೋಜನ ಗೃಹವೂ ಸಹ (ರಾಜ ದಂಪತಿಗಳಿಗೆ ಮಾತ್ರವಾದ) ರತ್ನ ಖಚಿತವಾದ ಪೀಠೋಪಕರಣಗಳಿಂದಲೂ ರಾಜಾರ್ಹವಾದ ಅಪೂರ್ವ ಅಲಂಕಾರ ವಸ್ತ್ರಗಳಿಂದಲೂ ನಯನ ಮನೋಹರವಾಗಿ ಶೋಭಿಸುತ್ತಿತ್ತು.

ಆ ಏಕಾಂತ ಭವನವು ರಾಜ ದಂಪತಿಗಳಿಬ್ಬರಿಲ್ಲದೆ ಹೊರದೇಶದಿಂದ ಬಂದ ಯಾರೇ ರಾಜಮಹಾರಾಜರಿಗೂ ಸಹ ಅವಕಾಶವಿರಲಿಲ್ಲ. ಆದರೆ ವಿದ್ಯಾಧರನು ಭೋಜರಾಜನನ್ನು ತನ್ನ ಸಹೋದರನ ರೀತಿಯಲ್ಲಿ ಉಪಚರಿಸಿ ಸತ್ಕರಿಸಿದ್ದನು. ಅಂತೆಯೇ ತನ್ನ ಏಕಾಂತಕ್ಕೆ ರಾಜಭೋಜನನ್ನು ಕರೆತಂದನು. ಆ ಇಬ್ಬರು ಮಹಾರಾಜರು ರತ್ನಖಚಿತ ಭೋಜನ ಪೀಠದಲ್ಲಿ ಕುಳಿತರು. ನಂತರ ಮಹಾರಾಜ ವಿದ್ಯಾಧರನ ಕರೆಯಮೇರೆಗೆ ಪಟ್ಟಮಹಿಷಿಯಾದ ವೇದವತಿದೇವಿಯೂ ಒಂದು ರೀತಿಯ ಸಂಕೋಚ ತುಂಬಿದ ನಾಚಿಕೆಯಿಂದಲೇ ಭೋಜನ ಶಾಲೆಗೆ ಬಂದಿದ್ದಳು.

ಭೋಜರಾಜನನ್ನು ಆ ಏಕಾಂತ ಭೋಜನ ಶಾಲೆಗೆ ಕರೆದುಕೊಂಡು ಬರುವ ವಿಷಯವನ್ನು ಆ ಮೊದಲೆ ತನ್ನ ಪಟ್ಟಮಹಿಷಿಯಾದ ವೇದವತಿ ಮಹಾರಾಣಿಗೆ ತಿಳಿಸಿದ್ದನು. ಆದ್ದರಿಂದ ಅಂದು ಅವಳು ಎಂದಿಗಿಂತ ವಿಶೇಷ ರೀತಿಯಲ್ಲಿ ಬರಿ ಚಿನ್ನದ

ದಾರದಿಂದಲೇ ತಯಾರಿಸಿದ ಪೀತಾಂಬರವನ್ನುಟ್ಟು ತೊಟ್ಟಿದ್ದಳು. ಆಭರಣ ಪ್ರಿಯಳಾದ ಆ ಪಟ್ಟಮಹಿಷಿಯು ವಜ್ರ ವೈಡೂರ್ಯಗಳಿಂದ ಶೋಭಿತವಾದ ರತ್ನ ಖಚಿತ ಬಂಗಾರದ ಒಡವೆಗಳನ್ನು ಯಥೇಚ್ಛವಾಗಿ ಧರಿಸಿಕೊಂಡಿದ್ದಳು.

ಸಾಕ್ಷಾತ್ ನಳಮಹರಾಜನ ಧರ್ಮಪತ್ನಿ ದಮಯಂತಿದೇವಿಯೇ ಎಂಬಂತೆ ವೇದವತಿಯು ಏಕಾಂತ ಭೋಜನ ಶಾಲೆಗೆ ಬಂದಳು.

ತನ್ನ ಇನಿಯನ ಜೊತೆಯಲ್ಲಿ ಬಹು ತೇಜಸ್ವಿಯಾದ ನವಯೌವನ ಭರಿತನಾದ ಭೋಜರಾಜನು ಸಹ ಅಲ್ಲಿರುವುದನ್ನು ಸೂಕ್ಷ್ಮದೃಷ್ಟಿಯಿಂದಲೇ ಗಮನಿಸಿದಳು.

ಪರಪುರುಷನೊಬ್ಬನು ತನ್ನ ಏಕಾಂತ ಭೋಜನ ಶಾಲೆಗೆ ಬಂದಿರುವುದು ಅದೇ ಪ್ರಥಮ ದಿನವಾಗಿತ್ತು. ಆಗ ವೇದವತಿಗೆ ಒಂದು ರೀತಿಯ ಸ್ತ್ರೀ ಸಹಜ ನಾಚಿಕೆ..... ಹೃದಯದಲ್ಲಿ ಅವ್ಯಕ್ತ ಕಂಪನ.... ನಾಚಿಕೆಯಿಂದಾಗಿ ಕೆಂಪೇರಿದ ಅವಳ ಮುಖ ಮತ್ತಷ್ಟು ಅಂದ ಚೆಂದವಾಗಿ ಕಾಣುತ್ತಿತ್ತು.

ಹದಿ ಹರೆಯದರ ಇಪ್ಪತ್ತರ ಸುರಸುಂದರಿ ಪುಟಕ್ಕೆ ಹಾಕಿದ ಚಿನ್ನದಂತೆ ಅವರ್ಣನೀಯವಾಗಿ ಶೋಭಿಸುತ್ತಿದ್ದಳು, ಆ ವೇದವತಿ.

ನಾಚಿಕೆ ಸ್ವಭಾವವುಳ್ಳವಳಾಗಿ ಮೆಲು ಹೆಜ್ಜೆಹಾಕುತ್ತ ಬರುತ್ತಿದ್ದ ವೇದವತಿಯನ್ನು ನೋಡಿದ ವಿದ್ಯಾಧರನು "ಬಾ ವೇದವತಿ, ನೀನೇನು ಸಂಕೋಚ ಪಡಬೇಡ, ನಿನಗೆ ಆಗಲೇ ಹೇಳಿದ್ದೆನಲ್ಲ... ಇಲ್ಲಿ ನನ್ನ ಪಕ್ಕದಲ್ಲಿ ಕುಳಿತಿರುವ ಮಹಾಪುರುಷರು ಮತ್ಯಾರೂ ಅಲ್ಲ.. ಭರತಖಂಡದ ಚಪ್ಪನ್ನಾರು ದೇಶಗಳಿಗೆ ಅಧಿಪತಿಯಾದ ರಾಜಾಧಿರಾಜರಾದ ಭೋಜಮಹಾರಾಜರು; ನಿನಗೆ ಅಣ್ಣನ ಸಮಾನವೆಂದೇ ತಿಳಿ..... ಬಾ ಕುಳಿತುಕೊ" ಎಂದರು. ಆದರ್ಶ ರಾಜಪರಂಪರೆಯ ಭೋಜರಾಜನ ವಿಷಯ ತಿಳಿದಿದ್ದಳು ಆ ವೇದವತಿ. 'ಅಣ್ಣಾ! ಎಂದಾಗ ಅವಳ ಹೃದಯದಲ್ಲಿ ಒಂದು ರೀತಿಯ ಅಮೃತಧಾರೆ ಎರೆದಂದಾಯಿತು. ಭರತಖಂಡವನ್ನಾಳುವ ರಾಜನೊಬ್ಬನು ತನ್ನ ಅಣ್ಣ ಎಂದಾಗ ಅದಕ್ಕಿಂತ ಮಿಗಿಲಾದ ಭಾಗ್ಯಬೇರೊಂದುಂಟೇ? ಧೈರ್ಯದಿಂದ ಭೋಜರಾಜರತ್ತ ಓರೆನೋಟ ಬೀರಿ ಬಹುವಿನಯದಿಂದ ಮಾತನಾಡುತ್ತ "ನಮಸ್ಕಾರ...." ಎಂದಷ್ಟೇ ಕೈಮುಗಿದುನುಡಿದಳು. ಬಹು ನಾಚಿಕೆಯ ಸ್ವಭಾವದವಳೇ ಆದ ವೇದವತಿ.

"ನಮಸ್ಕಾರ, ಬನ್ನಿ ಕುಳಿತುಕೊಳ್ಳಿ..... ನಿಮ್ಮವರು ಹೇಳಿದ ಹಾಗೆ ನನ್ನನ್ನು ನಿಮ್ಮ ಸಹೋದರನಂತೆಯೇ ತಿಳಿಯಿರಿ. ಅಕ್ಕತಂಗಿಯರಿಲ್ಲದ ನನಗೆ ನೀವು ನನಗೆ ತಂಗಿ ಸಮಾನರು" ಎಂದು ವಿನಯಾಭರಣಭೂಷಿತನಾಗಿ ನುಡಿದ ಭೋಜರಾಜ.

ಆಗ ವೇದವತಿಯಲ್ಲಿದ್ದ ನಾಚಿಕೆ ಮಾಯವಾಗಿತ್ತು. ಒಂದುರೀತಿಯ ಸಹೋದರ ಪ್ರೇಮ ಅವಳ ಹೃದಯದಲ್ಲಿ ಮನೆ ಮಾಡಿಕೊಂಡಿತ್ತು.

ತಾನೇ ತಾನಾಗಿ ಬಂದ ಧೈರ್ಯದಿಂದ ಭೋಜನನ್ನೊಮ್ಮೆ ಮಿಂಚಿನ ಭರದಲ್ಲಿ ಸಖಿಶಿಖಾಂತವಾಗಿ ನೋಡುತ್ತಾ ತನ್ನ ಮನದಲ್ಲಿಯೇ ನುಡಿದುಕೊಳ್ಳುತ್ತ "ಆಹಾ! ಎಂತಹ ಪುರುಷ ಸೌಂದರ್ಯ, ಎಂತಹ ಸ್ಫುರದ್ರೂಪಿ! ಈ ಭೋಜರಾಜರದ್ದು! ಪುರುಷ

ಸೌಂದರ್ಯದಲ್ಲಿ ಸಾಕ್ಷಾತ್ ನಳ ಚಕ್ರವರ್ತಿಯಂತೆಯೇ? ಕಾಣುತ್ತಿದ್ದಾರೆ. ಸ್ವಭಾವದಲ್ಲಿ - ಗುಣದಲ್ಲಿ ಸಾಕ್ಷಾತ್ ಶ್ರೀರಾಮ ಚಂದ್ರನಂತೆಯೇ ಶೋಭಿಸುತ್ತಿದ್ದಾರೆ" ಎಂದು ಭೋಜರಾಜನನ್ನು ತನ್ನ ಮನದಲ್ಲೇ ಗುಣಗಾನ ಮಾಡಿದ್ದಳು. ರಾಜ ಪರಂಪರೆಯ ಪದ್ಧತಿಯಂತೆ ಆ ಮೂವರು ಊಟಕ್ಕೆ ಮೊದಲು ದ್ರಾಕ್ಷಾರಸವನ್ನು ಸೇವಿಸಿದರು. ಅಷ್ಟುಹೊತ್ತಿಗೆ ಭಾಣಸಿಗನು (ಅಡಿಗೆ ಮಾಡುವವನು) ಆ ಮೂವರಿಗೂ ಬಂಗಾರದ ಊಟದ ತಟ್ಟೆ ಹಾಕಿ ವಿಶೇಷವಾಗಿ ತಯಾರಿಸಿದ್ದ ರಾಜಭೋಜನ, ರುಚಿಕರವಾದ ಷಡ್ರಸ ಪರಮಾನ್ನಾದಿಗಳಿಂದಲೂ ಬಗೆ ಬಗೆಯ ಖಾದ್ಯತಿಂಡಿಗಳಿಂದಲೂ, ಪರೋಟ ಮುಂತಾದುವುಗಳಿಂದಲೂ ಬಡಿಸಿದನು. ಆ ಮೂವರು ವಿನೋದವಾಗಿ ಮಾತನಾಡುತ್ತ ಊಟಮಾಡುತ್ತಿದ್ದರು.

ಆಗ ಭೋಜನು ಊಟದ ಮಧ್ಯೆ ವಿದ್ಯಾಧರನೊಂದಿಗೆ ಮಾತನಾಡುತ್ತಾ "ಅಂದ ಹಾಗೆ ವಿದ್ಯಾಧರರೆ, ನಿಮ್ಮ ಪಟ್ಟ ಮಹೀಷಿಯರು ಯಾವದೇಶದ ರಾಜಕುಮಾರಿ?"

"ಕುಂತಳ ದೇಶದ ರಾಜಕುಮಾರಿ"

"ನಿಮಗೆ ಮದುವೆಯಾಗಿ ಎಷ್ಟು ವರ್ಷವಾಯಿತು?

"ಎರಡು ವರ್ಷವಾಯಿತು"

ಆಗ ಭೋಜರಾಜ ನೊಡನೆ ನೇರವಾಗಿ ಮಾತನಾಡಲು ಧೈರ್ಯ ತಂದುಕೊಂಡು ಮಾತನಾಡಲು ಪ್ರಾರಂಭಿಸಿದ ವೇದವತಿ ಭೋಜರಾಜನನ್ನು ಕುರಿತು ಪ್ರಶ್ನಿಸುತ್ತಾ "ನಿಮಗೆ ಮದುವೆಯಾಗಿ ಎಷ್ಟು ವರ್ಷಗಳಾಯಿತು? ನಿಮ್ಮ ಹೆಂಡತಿ ಯಾವದೇಶದ ರಾಜಕುಮಾರಿ? ಈಗ ಅವರಿಗೆ ನಿಮ್ಮಂತೆಯೇ ಒಂದು ಸುಂದರವಾದ ಮಗು ಇರಬೇಕು ಅಂತ ಕಾಣುತ್ತೆ! ಆ ಮಗುವಿಗೆ ಏನು ಹೆಸರು ಇಟ್ಟಿದ್ದೀರಾ?" ಎಂದು ಒಮ್ಮೆಯೇ ಹಲವಾರು ಪ್ರಶ್ನೆಗಳ ಸುರಿಮಳೆಯನ್ನು ಸುರಿಸಿಬಿಟ್ಟಿದ್ದಳು ಮಾತುಗಾತಿಯಾದ ಮಹಾರಾಣಿ ವೇದವತಿ.

ಆಕೆಯ ಪ್ರಶ್ನೆಗೆ ಭೋಜರಾಜನ ಮುಖ ಬೆವತು ಹೋಗಿತ್ತು. ಆ ಸಂದಿಗ್ಧ ಪರಿಸ್ಥಿತಿಯಲ್ಲಿ ಹೇಗೆ ಯಾವರೀತಿ ಮಾತನಾಡಬೇಕೆಂಬುದೇ ಅರಿಯದಾದನು ಭೋಜರಾಜ.

ಅಣ್ಣ ತಂಗಿ ವಾದಯುದ್ಧದಲ್ಲಿ ನನಗೇನು ಕೆಲಸ ಎಂದು, ತಿಳಿದು ತಿಳಿಯದವನಂತೆ ಮೌನಿಯಾಗಿದ್ದ ಸಮಯ ಚತುರನಾದ ವಿಧ್ಯಾದರ ಮಹಾರಾಜ.

ಆಗ ಭೋಜರಾಜನು ವೇದವತಿಯ ಪ್ರಶ್ನೆಗಳಿಗೆಲ್ಲಾ ಒಂದೇ ಉತ್ತರ ಕೊಡುತ್ತಾ "ನಿಮ್ಮಂತಹ ಸಹೋದರಿಯರು ಪ್ರಯತ್ನ ಪಟ್ಟರೆ ತಾನೆ ನನಗೆ ಮದುವೆ ಆಗೋದು" ಎಂದಾಗ ವೇದವತಿಗೆ ಭೂಮಿಯೇ ಪಾತಾಳಕ್ಕೆ ಇಳಿಯುತ್ತಿದ್ದಂತೆ ಭಾಸವಾಯಿತು.

ಆಗ ತನ್ನಲ್ಲಿ ತಾನೆ ಪಶ್ಚಾತ್ತಾಪ ಪಡುತ್ತಾ "ಛೆ, ಛೆ, ನಾನೆಂತಹ ಅವಿವೇಕಿ..... ದುಡುಕಿ ಏನೇನೊ ಪ್ರಶ್ನೆ ಕೇಳಿಬಿಟ್ಟೆ, ಪಾಪ ನಮ್ಮಣ್ಣನಿಗೆ ಇನ್ನು ಮದುವೇನೆ ಆಗಿಲ್ಲ"

ಎಂದೆಂದುಕೊಂಡು ವಾಸ್ತವಲೋಕಕ್ಕೆ ಬಂದಳು. ಭೋಜರಾಜನನ್ನು ಕುರಿತು ಕ್ಷಮೆ ಕೇಳುತ್ತಾ "ದಯವಿಟ್ಟು ಏನು ತಿಳಿದುಕೊಳ್ಳಬೇಡಿ. ಆತುರಗಾತಿಯಾದ ನಾನು ಏನೇನೊ ಪ್ರಶ್ನೆಕೇಳಿಬಿಟ್ಟೆ, ತುಂಬ ದುಡುಕಿಬಿಟ್ಟೆ, ನನ್ನನ್ನು ಕ್ಷಮಿಸಿ ಅಣ್ಣಾ".

"ಅಣ್ಣಾ!" ಎಂದಾಗ ಭೋಜರಾಜನ ಹೃದಯಕ್ಕೆ ಅಮೃತಧಾರೆ ಎರೆದಂತಾಯಿತು.

"ಚಿಂತಿಸಬೇಡ ಸೋದರಿ, ನೀನು ವಿನೋದಪ್ರಿಯಳು.ಅದರಂತೆ ನಾನು ಸಹ ವಿನೋದಪ್ರಿಯನು" ಎಂದನು - ಆಗ ವಿದ್ಯಾಧರನು ಮಾತಿಗಾರಂಭಿಸಿ ಭೋಜರಾಜನನ್ನು ಕುರಿತು....

ಹಾಸ್ಯಬೆರತ ಮಾತಿನಿಂದ ಸಂಭಾಷಿಸುತ್ತಾ "ನನ್ನ ಹೆಂಡ್ತೀ ಅಂದ್ರೆ ಸಾಮಾನ್ಯಳು ಅಂತ ತಿಳಿದುಕೊಳ್ಳಬೇಡಿ..... ನೀವು 'ಹ್ಞೂಂ' ಅನ್ನಿ, ನಾಳೇನೇ ದೇಶದೇಶದ ರಾಜಕುಮರಿಯರನ್ನು ಸಾಲುಗಟ್ಟಿಸಿ ನಿಮ್ಮ ಎದುರಿನಲ್ಲಿ ತಂದು ನಿಲ್ಲಿಸಿ ಬಿಡುತ್ತಾಳೆ....." ಎಂದು ನಕ್ಕುನುಡಿದ ವಿದ್ಯಾಧರ ಮಹಾರಾಜ.

ಆ ಮಾತಿಗೆ ಭೋಜರಾಜ ಮತ್ತು ವೇದವತಿ ಇಬ್ಬರೂ ನಕ್ಕಿದ್ದರು.

"ಒಳ್ಳೇ ವಿನೋದದ ರಾಜದಂಪತಿಗಳಪ್ಪ ನೀವು" ಎಂದು ಪ್ರಶಂಶಿಸಿ ನುಡಿದ ಭೋಜರಾಜ.

ಭೋಜನದ ತರುವಾಯ ತಾಂಬೂಲ ಸೇವನೆಯೂ ಜರುಗಿತು.

ನಂತರ ಮಹಾರಾಜ ವಿದ್ಯಾಧರನೆ ಭೋಜರಾಜನನ್ನು ಅತಿಥಿಗೃಹಕ್ಕೆ ಬಿಟ್ಟುಬರಲು ಸಿದ್ಧನಾದನು.

"ಆಹಾ! ಈ ರಾಜದಂಪತಿಗಳು ಅದೆಷ್ಟು ಸೊಗಸಾಗಿದ್ದಾರೆ! ರೂಪಿಗೆ ತಕ್ಕ ಅನುರೂಪ..... ಸತಿ - ಪತಿಯರ ಜೋಡಿ ಅಂದ್ರೆ ಹೀಗಿರಬೇಕು!" ಎಂದೆಂದುಕೊಂಡಿದ್ದ ಭೋಜರಾಜ.

ಅರಮನೆಯ ಮುಂದೆ ರಾಜರಥ ಸಿದ್ಧವಾಗಿ ನಿಂತಿತು. ಆ ಇಬ್ಬರು ರಾಜರು ಜೊತೆಗೂಡಿ ಅರಮನೆಯ ಮಹಾದ್ವಾರಕ್ಕೆ ಬಂದರು "ಕುಳಿತುಕೊಳ್ಳಿ ಬೋಜರಾಜರೆ" ಎಂದು ವಿನಯ ಸೂಸಿ ನುಡಿದ ವಿದ್ಯಾಧರ.

"ರಥವನ್ನು ನಾನು ಓಡಿಸಲೆ?" ಪ್ರಶ್ನಿಸಿದ ಭೋಜರಾಜ.

"ಬೇಡ ಬೇಡ ಎಲ್ಲಿಯಾದರು ಉಂಟೆ, ಎಷ್ಟೇ ಆಗಲಿ ತಾವು. ಚಪ್ಪನ್ನಾರು ದೇಶಗಳ ಮಾರ್ಗದರ್ಶಕರು. ನೀವು ಕುಳಿತುಕೊಳ್ಳಿ" ಎಂದು ವಿನಯದಿಂದಲೇ ನುಡಿದ. ವಿದ್ಯಾಧರ.

"ಒಳ್ಳೇದು. ಹಾಗೆಯೇ ಮಾಡುತ್ತೇನೆ" ಎಂದು ರಥವನ್ನೇರಿ ಕುಳಿತ.

ರಥದ ಚಾಲಕನಾಗಿ ವಿದ್ಯಾಧರವೇ ಕಾರ್ಯೋನ್ಮುಖನಾದ. ರಾಜರಥವು ಅರಮನೆಯ ಅತಿಥಿ ಗೃಹದತ್ತ ಸಾಗಿತು.

ಅರಮನೆಯಿಂದ ಹೊರಟ ರಾಜರಥವು ಅತಿಥಿಗೃಹಕ್ಕೆ ಆಗಮಿಸಿತು.

ರಥದಿಂದಿಳಿದರು - ಆ ಅತಿಥಿ ಗೃಹದ ಮಲಗುವ ಕೋಣೆಯು ಎಲ್ಲಾರೀತಿಯಲ್ಲೂ ಅನುಕೂಲವಾಗಿತ್ತು. ಕುಡಿಯಲು ಹಾಲು ಸಿದ್ಧಪಡಿಸಿದ್ದರು.

ಸುಖನಿದ್ರೆ ಮಾಡುವಂತೆ ಉಪಚರಿಸಿ ಹೇಳಿ ರಾತ್ರಿವಂದನೆ ಹೇಳಿ ಆ ಮಲಗುವ ಕೋಣೆಯಿಂದ ನಿರ್ಗಮಿಸಿದ ವಿದ್ಯಾಧರನು ರಾಜ ರಥವನ್ನೇರಿ ಅರಮನೆಗೆ ಬಂದನು.

ಭೋಜರಾಜನಾದರೋ ಆ ಸುಂದರ ರಾಜ ದಂಪತಿಗಳನ್ನೇ ಮನದಲ್ಲಿ ಮೆಲುಕು ಹಾಕುತ್ತಾ "ಅಂತಹ ದಾಂಪತ್ಯಯೋಗ ನನಗೆ ಯಾವಾಗ.....?" ಎಂದು ತನ್ನನ್ನು ತಾನೇ ಪ್ರಶ್ನಿಸಿಕೊಳ್ಳುತ್ತಾ ಆ ಹಂಸತೂಲಿಕಾತಲ್ಪದಲ್ಲಿ ಪವಡಿಸಿದನು.

ಅತಿಯಾದ ಆಯಾಸದಿಂದಲೂ ದ್ರಾಕ್ಷಾರಸಾದಿ ಪುಷ್ಕಳ ರಾಜಭೋಜನದಿಂದಾಗಿ ನಿದ್ರಾದೇವಿಯು ಚೆನ್ನಾಗಿ ಒಲಿದಿದ್ದಳು ಭೋಜರಾಜನಿಗೆ.

ಮಾರನೆ ದಿನವಾದ ಆ ದಿನ ವಿದ್ಯಾಧರಮಹಾರಾಜ ಸ್ವರ್ಣಭೂಷಿತವಾದ ಮುತ್ತುರತ್ನ ಮುಂತಾದುವುಗಳಿಂದಲೂ ತನ್ನ ಅರಮನೆಯ ಭವ್ಯಾಲಂಕೃತವಾದ ಒಡ್ಡೋಲಗದಲ್ಲಿ ಭೋಜರಾಜನಿಗೆ ಬೀಳ್ಕೊಡಿಗೆ ಸಮಾರಂಭವನ್ನೇರ್ಪಡಿಸಿದ್ದನು. ಅದರ ಅಂಗವಾಗಿ ಆ ದೇಶದ ಅತಿ ಸುಂದರಳಾದ ರಾಜನರ್ತಕಿಯಿಂದ ಅಮೋಘ ನೃತ್ಯ ಒಂದನ್ನು ಏರ್ಪಡಿಸಿದ್ದನು.

ವೇಳೆಗೆ ಸರಿಯಾಗಿ ಆ ರಾಜ ಒಡ್ಡೋಲಗವು ಅನೇಕ ಜನ ಮಂತ್ರಿ ಉಪಮಂತ್ರಿಗಳಿಂದಲೂ ಋಷಿಮುನಿಗಳಿಂದಲೂ ರಾಜ್ಯಾಡಳಿತ ಸಲಹೆಗಾರರಿಂದಲೂ ಅನೇಕ ಜನ ಪಂಡಿತರಿಂದಲೂ ವಿದ್ವಾಂಸರಿಂದಲೂ, ಋತ್ವಿಕ ಬ್ರಾಹ್ಮಣೋತ್ತಮರಿಂದಲೂ ಪಟ್ಟಣದ ಪ್ರಮುಖ ಪಟ್ಟಣಿಗರಿಂದಲೂ ತುಂಬಿ ನೆರೆದಿದ್ದರು.

ವಿಶೇಷ ವಸ್ತ್ರಾಭರಣ ಭೂಷಿತನಾಗಿ ಭೋಜರಾಜನು ಮಹಾರಾಜ ವಿದ್ಯಾಧರನ ಜೊತೆಯಾಗಿ ಬಂದು ಒಡ್ಡೋಲಗವನ್ನು ಪ್ರವೇಶ ಮಾಡಿದರು. ವಂದಿಮಾಗಧರು ರಾಜ ಪರಾಕುಹೇಳುತ್ತ ಆಹ್ವಾನಿಸಿದರು.

ಆ ಇಬ್ಬರು ರಾಜಸಭೆಯನ್ನು ಪ್ರವೇಶಿಸುತ್ತಿದ್ದಂತೆ ಮಹಾರಾಜರ ಗೌರವಾರ್ಥವಾಗಿ ಸಭೆಯಲ್ಲಿದ್ದ ಎಲ್ಲರೂ ಎದ್ದುನಿಂತರು.

ಒಡ್ಡೋಲಗದ ಮಹಾದ್ವಾರದಿಂದ ರತ್ನಖಚಿತ ಸಿಂಹಾಸನದವರೆಗೂ ಮೆತ್ತನೆಯ ಚಿತ್ರ ಚಿತ್ರವಾದ ಗಿಣಿಹಸಿರು ರತ್ನಗಂಬಳಿ ಹಾಸಿದ್ದರು. ಆ ರಾಜ ಮಾರ್ಗದಲ್ಲಿ ಗಾಂಭೀರ್ಯ ಹೆಜ್ಜೆಯನ್ನು ಹಾಕುತ್ತ ಜೊತೆಗೂಡಿ ಬರುತ್ತಿದ್ದರು. ಆಗ ಅವರಿಬ್ಬರೂ ರಾಜ ಪರಂಪರೆಯ ಅಪೂರ್ವ ಸಹೋದರರಂತೆ ಅದ್ವಿತೀಯ

ತೇಜಸ್ಸಿನಿಂದ ಕಾಣುತ್ತಿದ್ದರು. ಒಡ್ಡೋಲಗದುದ್ದಕ್ಕೂ ಮಾರ್ಗದ ಇಕ್ಕೆಡೆಯಲ್ಲೂ ಬಂಗಾರದ ತಟ್ಟೆಯಲ್ಲಿ ಸುಗಂಧ ಪುಷ್ಪಗಳನ್ನು ಹಿಡಿದುನಿಂತಿದ್ದ ಹರಿಣಿಯರು ಆ ಸಿಂಹಾಸನದತ್ತ ಆಗಮಿಸುತ್ತಿದ್ದ ಆ ಇಬ್ಬರು ರಾಜರುಗಳಿಗೂ ಬೊಗಸೆ ಬೊಗಸೆಯಾಗಿ ಪುಷ್ಪವೃಷ್ಟಿಗೆರೆಯುತ್ತಿದ್ದರು. ಸುಗಂಧಪರಿಮಳದ ಕಂಪು ಎಲ್ಲೆಡೆಯಲ್ಲೂ ಪಸರಿಸಿತ್ತು.

ಇಬ್ಬರೂ ಸಿಂಹಾಸನವನ್ನಲಂಕರಿಸಿದ್ದರು. ಪೂರ್ವ ಯೋಜಿತವಾಗಿ ಗೊತ್ತು ಪಡಿಸಿದ್ದಂತೆ ಸರ್ವಾಂಗ ಸುಂದರಳಾದ ರಾಜನರ್ತಕಿಯಿಂದ ಅಮೋಘ ನೃತ್ಯಜರುಗಿತ್ತು.

ಆಗ ಆ ಸಮಯದಲ್ಲಿ ಭೋಜರಾಜನಿಗೆ ಆಶ್ಚರ್ಯ ಒಂದು ಕಾದಿತ್ತು.

ರಾಜಸೇವಕನೊಬ್ಬನು ಮಹಾರಾಜ ವಿದ್ಯಾಧರನ ಮುಂದೆ ಹಾಜರಾಗಿ ನುಡಿಯುತ್ತಾ "ಮಹಾರಾಜರಿಗೆ ಜಯವಾಗಲಿ. ಧಾರಾನಗರದಿಂದ ನಾಲ್ಕು ಜನ ವಾರ್ತಾವಾಹಿ ರಾಜಧೂತರು ಬಂದಿದ್ದಾರೆ. ಮಹಾ ಪ್ರಭುಗಳಾದ ಭೋಜರಾಜರಿಗೆ ಸುದ್ದಿಯೊಂದನ್ನು ಹೊತ್ತು ತಂದಿದ್ದಾರೆ. ಅಪ್ಪಣೆಯಾಗಬೇಕು" ಎಂದು ವಿನಯದಿಂದ ವಂದಿಸಿ ಹೇಳಿ ಅಪ್ಪಣೆಗಾಗಿ ಕಾದುನಿಂತರು.

ಆಗ ವಿದ್ಯಾಧರನು ತನ್ನ ಪಕ್ಕದಲ್ಲಿಯೆ ಕುಳಿತಿದ್ದ ಭೋಜರಾಜನನ್ನೊಮ್ಮೆ ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿದನು. ಭೋಜರಾಜನು ಕಣ್ಸನ್ನೆಯಲ್ಲೆ ಬರಹೇಳುವಂತೆ ಸೂಚಿಸಿ ನುಡಿದನು.

"ಸರಿ ಧಾರಾನಗರದಿಂದ ಬಂದಿರುವ ವಾರ್ತಾವಾಹಿಗಳನ್ನು ಬರಬಹುದು ಎಂದು ತಿಳಿಸು" ಎಂದು ಅಪ್ಪಣೆ ಕೊಟ್ಟನು.

ಅಂತೆಯೇ ಅಪ್ಪಣೆಯನ್ನು ಹೊತ್ತು ನಿರ್ಗಮಿಸಿದನು.

ಕೆಲವು ಕ್ಷಣಗಳು ಕಳೆದಂತೆ ಧಾರಾನಗರದಿಂದ ಬಂದಿದ್ದ ನಾಲ್ವರು ವಾರ್ತಾವಾಹಿಗಳು ಆ ಇಬ್ಬರು ರಾಜರುಗಳ ಮುಂದೆ ಹಾಜರಾಗಿ ಬಹುವಿನಯವುಳ್ಳವರಾಗಿ ರಾಜರುಗಳೊಂದಿಗೆ ಬಿನ್ನವಿಸುತ್ತಾ "ವಿದರ್ಭದೇಶದ ಮಹಾ ರಾಜರಿಗೆ ಜಯವಾಗಲಿ. ಧಾರಾನಗರದ ರಾಜಾದಿರಾಜ ಭೋಜರಾಜರಿಗೆ ಜಯವಾಗಲಿ" ಎಂದು ಜಯಕಾರ ನುಡಿದರು.

ಆಗ ಭೋಜರಾಜನು ತನ್ನ ಅರಮನೆಯ ವಾರ್ತಾವಾಹಿಗಳು ತಾನಿರುವಲ್ಲಿಗೆ ಬಂದಿರುವುದನ್ನು ಆಶ್ಚರ್ಯಗೊಂಡವನಾಗಿ ಪ್ರಶ್ನಿಸುತ್ತಾ "ಎಲೈ ವಾರ್ತಾವಾಹಿಗಳೇ, ಏತಕ್ಕಾಗಿ ಬಂದಿರುವಿರಿ. ನಮ್ಮ ಧಾರನಗರದಲ್ಲಿ ಪ್ರಜೆಗಳೆಲ್ಲರೂ ಕ್ಷೇಮದಿಂದ ಇದ್ದಾರೆಯೆ? ಅರಮನೆಯಲ್ಲಿ ಎಲ್ಲರೂ ಕ್ಷೇಮವೆ? ಈಗ ನೀವುಗಳು ಇಲ್ಲಿಗೆ ಬಂದಿರುವ ಸಮಾಚಾರವೇನು?" ಎಂದು ಪ್ರಶ್ನಿಸಿದರು.

ಆಗ ವಾರ್ತಾವಾಹಿಗಳು ಬಿನ್ನವಿಸಿಹೇಳುತ್ತಾ "ಪ್ರಭುಗಳಾದ ಭೋಜರಾಜರಿಗೆ ಜಯವಾಗಲಿ. ಈಗ ನಾವು ತಂದಿರುವ ವಿಶೇಷ ವಾರ್ತೆ ಏನಂದರೆ ಬರಲಿರುವ ರವಿವಾರದಂದು ಆವಂತಿದೇಶದ ರಾಜರು ತಮ್ಮ ಏಕೈಕ ಪುತ್ರಿಯಾದ ಅತಿಸುಂದರಳಾದ

ಲೀಲಾವತಿ ದೇವಿಯವರ ಸ್ವಯಂವರ ಏರ್ಪಡಿಸಿದ್ದಾರೆ. ಅದರ ಅಂಗವಾಗಿ ಒಂದು ಅಮೋಘ ಸ್ಪರ್ಧೆಯನ್ನು ಏರ್ಪಡಿಸಿದ್ದಾರೆ. ಮಹಾರಾಜ"

"ಏನು ! ಅಮೋಘ ಸ್ಪರ್ಧೆಯ ವಿಚಾರವೇನು?" ಪ್ರಶ್ನಿಸಿದ ಭೋಜರಾಜ

"ಅದೇನೆಂದರೆ..... ಅವಂತಿ ಮಹಾರಾಜರ ಆಸ್ಥಾನದಲ್ಲಿ ಹಲವಾರು ಜಗಜಟ್ಟಿಗಳಲ್ಲಿ ಅತಿಬಲಾಢ್ಯವಾದ ಜಗಜಟ್ಟಿಯೊಬ್ಬನಿದ್ದಾನೆ. ಆತನು ಮಲ್ಲಯುದ್ಧ - ದ್ವಂದ್ವಯುದ್ಧದಲ್ಲಿ ಮಹಾ ಪ್ರವೀಣ. ಆತನನ್ನು ಮಲ್ಲಯುದ್ಧ ದ್ವಂದ್ವಯುದ್ಧಗಳಿಂದ ಯಾರೊಬ್ಬರು ಇದುವರೆವಿಗೂ ಗೆದ್ದಿಲ್ಲ. ಮುಂದೆ ಗೆಲ್ಲಲೂ ಆಗದು. ಅವನನ್ನು ಯಾವ ರಾಜನು ದ್ವಂದ್ವಯುದ್ಧದಲ್ಲಿ ಜಯಿಸುತ್ತಾನೋ ಅಂತಹ ರಾಜ ಕುಮಾರನಿಗೆ ತನ್ನ ಅರ್ಧರಾಜ್ಯವನ್ನು ಕೊಟ್ಟು ಮಗಳನ್ನು ಕೊಟ್ಟು ವಿವಾಹ ಮಾಡುವುದಾಗಿ ತಿಳಿಸಿ ತಮ್ಮನ್ನು ಆಹ್ವಾನಿಸಿದ್ದಾರೆ. ಅಷ್ಟು ಮಾತ್ರವಲ್ಲದೆ ಆ ಸ್ವಯಂವರ ಸ್ಪರ್ಧೆಗೆ ತಮ್ಮನ್ನೇ ಅಧ್ಯಕ್ಷರನ್ನಾಗಿಯೂ, ತೀರ್ಪುಗಾರರನ್ನಾಗಿಯೂ ಸಲಹೆ ಮಾಡಿ ತಮ್ಮನ್ನು ಕೋರಿರುತ್ತಾರೆ". ಎಂದು ನುಡಿದರು.

ಆಗ ಭೋಜರಾಜನು ಪುನಹ ಮತ್ತೊಂದು ಪ್ರಶ್ನೆಯನ್ನು ಕೇಳುತ್ತ "ನಾವುಗಳು ಇಲ್ಲಿ ಈ ದೇಶದಲ್ಲಿ ಇರುವುದು ನಿಮಗೆ ಯಾರು ಹೇಳಿದರು.

"ಅರಮನೆಯ ಗೂಡಚರ್ಯರಿಂದ ತಿಳಿಯಿತು."

"ಒಳ್ಳೇದು. ನೀವು ಹೋಗಬಹುದು" ಎಂದನು ಭೋಜರಾಜ.

ಆಗ ಆ ವಾರ್ತಾವಾಹಿಗಳು ಆ ಸ್ಥಳದಿಂದ ನಿರ್ಗಮಿಸಿದರು. ಸಭೆಮುಕ್ತಾಯವಾಯಿತು.

ಅನಂತರ ಭೋಜರಾಜನು, ಮಹಾರಾಜ ವಿದ್ಯಾಧರರೊಂದಿಗೆ ಏಕಾಂತ ಮಂದಿರದಲ್ಲಿ ಸಂಧಿಸಿ ಮಾತನಾಡುತ್ತಾ "ಎಲೈ ವಿದ್ಯಾಧರನೆ. ಈಗ ನಾನು ಅವಂತಿ ದೇಶಕ್ಕೆ ಹೋಗಬೇಕಾಗಿದೆ. ಅದಕ್ಕೆ ನಿಮ್ಮ ಸಲಹೆ ಏನು?" ಎಂದು ಪ್ರಶ್ನಿಸಿದನು.

ವಿಷಯವನ್ನು ಬಲ್ಲವನೇ ಆದ ವಿದ್ಯಾಧರನು ಭೋಜರಾಜನೊಡನೆ ಮಾತನಾಡುತ್ತ "ಹೇ ಭೋಜರಾಜ ಮಹಾಪ್ರಭು. ಈ ವಿಷಯವಾಗಿ ನಾನೊಂದು ಸಲಹೆ ಹೇಳುತ್ತೇನೆ. ತಾವು ಯೋಚಿಸಬೇಕು"

"ಹೇಳಿ"

"ನಮ್ಮ ರಾಜ್ಯಕ್ಕೆ ಬಂದಿರುವ ನಿಮ್ಮ ಚತುರಂಗಬಲ ಸೇನಾ ಪಡೆಯು ಇಲ್ಲಿಯೇ ನಮ್ಮ ರಾಜಾತಿಥ್ಯಲ್ಲಿಯೇ ಇರಲಿ. ನಾವಿಬ್ಬರು ಅವಂತಿ ದೇಶಕ್ಕೆ

ಹೋಗೋಣ. ಅವಂತಿ ದೇಶದ ರಾಜನಾದ ಪ್ರತಾಪಸಿಂಹ ಮಹಾರಾಜರು ನನಗೂ ಸಹ ತಿಳಿದವರೆ ಆಗಿದ್ದಾರೆ" ಎಂದನು.

"ನಿಮಗೆ ತಿಳಿದವರೇ ಆಗಿದ್ದ ಪಕ್ಷದಲ್ಲಿ ನಿಮಗೇಕೆ ಆಮಂತ್ರಣ ಕಳುಹಿಸಿ ಕೊಟ್ಟಿಲ್ಲ?" ಪ್ರಶ್ನಿಸಿದರು.

ಆಗ ವಿದ್ಯಾಧರನು ಹುಸಿನಕ್ಕು ಮಾತನಾಡುತ್ತಾ "ಭೋಜರಾಜರೆ...... ನನಗೆ ಈಗಾಗಲೇ ಮದುವೆ ಯಾಗಿದೆ...... ಆ ಪ್ರತಾಪಸಿಂಹರು ಮದುವೆಯಾಗದ ಸುಂದರ ರಾಜಕುಮಾರರನ್ನು ಮಾತ್ರ ಆಹ್ವಾನಿಸಿರುತ್ತಾರೆ. ಆ ಪೈಕಿ ನೀವು ಒಬ್ಬರು. ಅಷ್ಟು ಅಲ್ಲದೆ ತಮಗೆ ಪ್ರತಾಪಸಿಂಹರು ಒಂದು ವಿಶೇಷ ಗೌರವ ಕೊಟ್ಟಿದ್ದಾರೆ. ನೀವೀಗ ಕನ್ಯಾಪೇಕ್ಷಿತರು ಮಾತ್ರವೇ ಅಲ್ಲ, ಆ ದಿನ ಆವಂತಿ ನಗರದ ಅರಮನೆಯ ಆವರಣದಲ್ಲಿ ನಡೆಯಲಿರುವ "ಸ್ವಯಂವರ" ಮಹೋತ್ಸವದ ಅಧ್ಯಕ್ಷರು. ಹಾಗೂ ನಿಮಗೆ ತೀರ್ಪುಗಾರರ ಸ್ಥಾನ ಕೊಟ್ಟಿರುತ್ತಾರೆ. ಆ ಪ್ರತಾಪಸಿಂಹರು" ಎಂದು ಶ್ಲಾಘಿಸಿ ನುಡಿದ ವಿದ್ಯಾಧರ.

ಆಗ ಭೋಜರನು ಆ ವಿಚಾರವಾಗಿ ಮನದಲ್ಲೇ ಮಲುಕು ಹಾಕಿ ಮಾತನಾಡುತ್ತಾ "ವಿದ್ಯಾಧರರೇ. ಈಗ ನನ್ನದೊಂದು ಪ್ರಶ್ನೆಕಾಡುತ್ತಿದೆ. ನನಗೆ ಕನ್ನಾಪೇಕ್ಷೆಗಿಂತಲೂ ಅತಿಶಯವಾಗಿ. ಆ ಜಗಜಟ್ಟಿ ಯಾರು? ಆತನನ್ನು ಇದುವರೆವಿಗೂ ಯಾರೊಬ್ಬ ರಾಜರು ಗೆದ್ದಿಲ್ಲ ಎಂದ ಮೇಲೆ ಆತನು ಅಂತಹ ಬಲಶಾಲಿಯೇ? ವಿದ್ಯಾದರರೆ?"

"ಆದರ ಚಿಂತೆ ಏಕೆ ಈಗ? ಆ ದಿನ ಸ್ಪರ್ಧೆಯಲ್ಲಿ ನೀವು ಸಹ ಭಾಗವಹಿಸುತ್ತೀರಲ್ಲ. ನಿಮ್ಮ ಬಲದ ಮುಂದೆ ಆತನ ಬಲ..... ಏನೇನೂ ಸಲ್ಲದು. ಎಂಬುದು ನನ್ನ ಪೂರ್ಣ ನಂಬಿಕೆ" ಎಂದು ಭೋಜರಾಜನನ್ನು ಹುರಿದುಂಬಿಸಿ ನುಡಿದ ವಿದ್ಯಾಧರ ಮಹಾರಾಜ.

# ಅಪೂರ್ವಲೋಕದಲ್ಲಿ ಭೋಜರಾಜ!

ಭೋಜರಾಜನಿಗೆ ಪ್ರತಿನಿತ್ಯ ವಾಯು ವಿಹಾರವೆಂದರೆ ಬಲು ಇಷ್ಟ. ಅದೊಂದು ಅವನ ಪ್ರತಿನಿತ್ಯದ ಅಭ್ಯಾಸ ಬಲವು ಆಗಿತ್ತು.

ಭೋಜನು ತನ್ನ ಚಿಕ್ಕಂದಿನಿಂದಲೂ ಎರಡು ಗುಣಗಳನ್ನು ಅವ್ಯಾಹತವಾಗಿ ಅಭ್ಯಾಸ ಮಾಡಿಕೊಂಡು ಬಂದಿದ್ದನು. ಮೊದಲನೆಯದು ವಿದ್ಯೆ, ಎರಡನೆಯದು ವಾಯುವಿಹಾರ. ಈ ಎರಡು ಗುಣಗಳು ಅವನಲ್ಲಿ ಹಾಸುಹೊಕ್ಕಾಗಿ ಮನೆಮಾಡಿಕೊಂಡಿತ್ತು.

ಆ ದಿನ... ಉತ್ಸಾಹಿಯಾದ ಭೋಜರಾಜನು ಸಶಸ್ತ್ರಧಾರಿಯಾಗಿ ಚಿನ್ನದ ರಥದಲ್ಲಿ ವಾಯುವಿಹಾರ ಮಾಡುತ್ತಾ ರಮ್ಯ ಮನೋಹರ ಪ್ರಕೃತಿ ಸೌಂದರ್ಯ ಸಿರಿಯಿಂದ ಕೂಡಿದ ರಮಣೀಯ ವನಸಿರಿಯರನ್ನು ವೀಕ್ಷಿಸುತ್ತಾ ಉನ್ಮಾದ, ಸಂತೋಷದಿಂದ ಸಾಗುತ್ತಿರುವಾಗ ಸಾಯಂಕಾಲದ ವೇಳೆಯಾಯಿತು.

ಸಂಜೆವೇಳೆಯಲ್ಲಿ ಆಕಾಶದ ವೈಖರಿಯನ್ನು ನೋಡಲು ಬಲು ಅಂದ - ಬಲುಚೆಂದ; ಎಂಬಂತೆ ರಮ್ಯ ಮನೋಹರವಾದ ಆ ಸುಂದರ ಸಂಜೆ ಸುವರ್ಣಮಯ ಕೆಂಪು ಸಂಜೆಯಾಗಿತ್ತು. ನಿರ್ಮಲನೀಲ ಗಗನದಲ್ಲಿ ಯಾರಹಂಗೂ ಇಲ್ಲದೆ ಚಿತ್ರ ಚಿತ್ರಿತವಾಗಿ ಪುಟ್ಟ ಪುಟ್ಟ ಬೆಟ್ಟದೋಪಾದಿಯಲ್ಲಿ ರಾಶಿರಾಶಿಯಾಗಿ ಗುಂಪುಗೂಡಿಕೊಂಡು ಸ್ವೇಚ್ಛೆಯಾಗಿ ಅದೆತ್ತಲೊ ಸಾಗುತ್ತಿದ್ದ ಬೆಳ್ಳಿಮೋಡಗಳ ಸ್ವಚ್ಛಂದ ನೋಟವು ಎಂದಿಲ್ಲದ ಉಲ್ಲಾಸ ಆಹ್ಲಾದಕರ ಸಂತೋಷವನ್ನುಂಟು ಮಾಡುತ್ತಿತ್ತು ಭೋಜರಾಜನಿಗೆ.

ಸಂಜೆ ಸೂರ್ಯನು ತನ್ನ ಪ್ರಭಾವದಿಂದ ಮೆಲ್ಲಮೆಲ್ಲನೆ ಚಲಿಸುತ್ತಿದ್ದ ಬೆಳ್ಳಮೋಡಗಳಿಗೆ ಕೆಂಪು ಓಕುಳಿ ಎರಚಿದಂತೆ ಬಿಳುಪು - ಕೆಂಪು ಮಿಶ್ರಬಣ್ಣಚೆಲ್ಲಿ, ತನ್ನ ಅಸಾಧಾರಣ ಬುದ್ಧಿಶಕ್ತಿಯಿಂದ ನೂತನ - ವಿನೂತನವಾಗಿ ರಚಿಸಿದ ಮನೋಹರವಾದ ಪ್ರಕೃತಿಯ ಚಿತ್ರವು ಭಾಸ್ಕರನು ಪ್ರತಿನಿತ್ಯ ಜಗತ್ತಿನ ಮಾನವರಿಗೆ ಕೊಡುವ ಅಪೂರ್ವ ಬಳುವಳಿಯೋ ಎಂಬಂತೆ ಭಾಸವಾಗುತ್ತಿತ್ತು ಆ ರಂಗುರಂಗಿನ ಆಹ್ಲಾದಕರ ನೋಟ.

ದೈನಂದಿನ ಉದರ ಪೋಷಣೆಯಿಂದ ತೃಪ್ತಿಹೊಂದಿದ ಬೆಳ್ಳಿ ಪಕ್ಷಿಗಳು ಹರ್ಷಚಿತ್ತದಿಂದ ಆ ಬಣ್ಣ ಬಣ್ಣದ ಸ್ವಚ್ಛಂದ ನೀಲಾಕಾಶದಲ್ಲಿ ಸ್ವೇಚ್ಛೆಯಾಗಿ ಹಾರಾಡುತ್ತ ಗುಂಪು ಗೂಡಿಕೊಂಡು ತಮ್ಮ ತಮ್ಮ ಗೂಡನ್ನು ಸೇರುವ ತವಕದಲ್ಲಿ ಸಾಗುತ್ತಿದ್ದವು.

ಪಶ್ಚಿಮ ಕ್ಷಿತಿಜದಲ್ಲಿ ಸಂಜೆಸೂರ್ಯನ ಆ ಅದ್ಭುತ ಸಂಧ್ಯಾಸಮಯವನ್ನು ವಿನಾಕಾರಣವ್ಯರ್ಥಮಾಡಬಾರದೆಂದು, ಭಾವ ಪೂರ್ಣಪರವಶನಾಗಿ ತದೇಕ ದೃಷ್ಟಿಯಿಂದ ಅಸ್ತಂಗತನಾಗುತ್ತಿದ್ದ ಕೆಂಪು ಸೂರ್ಯನನ್ನೇ ರೆಪ್ಪೆ ಬಡಿಯದ ಕಣ್ಣುಗಳಿಂದ ನೋಡುತ್ತಿದ್ದಾನೆ ಆ ರಸ ಜೀವಿಯಾದ ಭೋಜರಾಜ.

ಮೊದಲೆ ಸುಂದರ ತೇಜಸ್ಸಿನಿಂದ ಕೂಡಿದ್ದ ಆ ತರುಣ! ರಾಜನು ಸಂಜೆಸೂರ್ಯನ ಪ್ರಭಾವಕ್ಕೆ ಮತ್ತಷ್ಟು ಆಕರ್ಷಿತನಾಗಿ, ಸೂರ್ಯನ ಸುವರ್ಣಕಾಂತಿ ಎರಡು ಕಾಂತಿಗಳು ಸಂಗಮವಾಗಿ ಬಿಟ್ಟಿದೆಯೋ ಎಂಬಂತೆ ಭಾಸವಾಗುತ್ತಿತ್ತು ಆ ತರುಣ ರಾಜನ ಸ್ವಚ್ಛಂದನೋಟ. ಅಂದಿನ ಭೋಜರಾಜನ ಅದೃಷ್ಟ... ಅಷ್ಟಕ್ಕೇ ಮುಗಿಯಲಿಲ್ಲ, ರಾಶಿವಿದ್ಯೆಯ ಬಲ್ಲ ಭೋಜನ ಹೃದಯ ಆತನೊಬ್ಬ ರಸ ಕವಿಯೂ ಹೌದು...... ಆತನಿಗೆ ಮತ್ತೊಂದು ಆಶ್ಚರ್ಯ ಕಾದಿತ್ತು. ತನಗರಿವಿಲ್ಲದೆ ತನ್ನ ದೃಷ್ಟಿ ಅಲ್ಲಿಯೇ ಇದ್ದ ಒಂದು ರಮಣೀಯ ಸರೋವರದತ್ತ ಹರಿಯಿತು. ಮಹದಾಶ್ಚರ್ಯ ಭರಿತನಾದ ತನ್ನನ್ನು ತಾನೆ ನಂಬಲಾಗದಷ್ಟು ಚಿತ್ತ ಚಂಚಲನಾದ. ಹಾಗೆಯೇ ನೋಡುತ್ತಾ ನೋಡುತ್ತಾ ಭಾವ ಪರವಶನಾಗುಬಿಟ್ಟ, ಆ ವಾಯುವಿಹಾರಿ ಭೋಜರಾಜ.

ಹಾಗೆ ವಿಸ್ಮಯಭೂತನಾಗಿ ಭೋಜರಾಜನು ಅವನ ಹೃದಯ ಗರ್ಭದಿಂದ ಸಣ್ಣನೆಯ ಮಧುರವಾದ ನುಡಿಯೊಂದು ಶೃತಿಯಾಗಿತ್ತು.

"ಯಾರಿವಳು!?"

"ಒಂದು ಹೆಣ್ಣು!"

"ಇಲ್ಲ, ಈಕೆ ಸಾಮಾನ್ಯವಾದ ಹೆಣ್ಣಲ್ಲ!"

ಹದಿಹರೆಯರ ಈ ಸುರಸುಂದರಿ.... ಇವಳೇನು ಮಾನವಳೋ ಅಥವಾ ದೇವಲೋಕದ ಅಪ್ಸರೆಯರಲ್ಲಿ ಮಹಾ ಅಪ್ಸರೆಯೋ! ಅಥವಾ ವಾಗ್ದೇವಿ ವಿದ್ಯಾ ಅಧಿದೇವತೆ ಸರಸ್ವತಿಯೋ. ಇಲ್ಲ ಇಲ್ಲ ಈಕೆ ವಾಗ್ದೇವೀ ಅಲ್ಲ ಕೈಯಲ್ಲಿ ವೀಣೆ ಇಲ್ಲ!"

ರಾಜಕನ್ನೆಯೋ ಅಥವಾ ದೇವಕನ್ನೆಯೋ ಎಂಬುದನ್ನು ಅರಿಯದಾದ.

ಆಗ ಭೋಜರಾಜನ ಹೃದಯ ಸಂಪೂರ್ಣ ಕವಿ ಹೃದಯವಾಗಿ ಮಾರ್ಪಟ್ಟಿತ್ತು. ಆ ಸವಿಸಾಗರದಲ್ಲಿ ವಿಹರಿಸುತ್ತಿದ್ದ ಭೋಜರಾಜನು ವಿಶ್ವವನ್ನೇ ಮರೆತ. ತನ್ನ ಅಖಂಡ ಸಾಮ್ರಾಜ್ಯವನ್ನೂ ಮರೆತ. ಕಡೆಗೆ ತನ್ನನ್ನೂ ಮರೆತ.

"ಈ ತಾರುಣ್ಯವತಿಯ ಅಪೂರ್ವ ಸೌಂದರ್ಯ ಸಾಮ್ರಾಜ್ಯದ ಮುಂದೆ ನನ್ನ ಅಖಂಡ ಸಾಮ್ರಾಜ್ಯ ಏನೇನೂ ಇಲ್ಲ" ಎಂದು ಭ್ರಾಂತಿಪೀಡಿತವಾದ.

ಹೆಣ್ಣಾಗಿ ಕಾಡಿತ್ತು ಮಾಯೆ ಎಂಬಂತೆ ಭೋಜರಾಜನು ಎಂದಿಲ್ಲದ ವಿಸ್ಮಯ ಲೋಕದಲ್ಲಿ ತಲ್ಲೀನನಾಗಿದ್ದ ಆ ಅಲೌಕಿಕ ಸುಂದರಿಯನ್ನೇ ನೋಡುತ್ತ.

"ಈಕೆಯಂತೂ ಖಂಡಿತ ಭೂಲೋಕದ ಹೆಣ್ಣಲ್ಲ, ಬಹುಶಹ ಈಕೆ ದೇವಲೋಕದ ದೇವಕನ್ಯೆ..... ಅಥವಾ ಗಂಧರ್ವ ಲೋಕದ ಗಂಧರ್ವ ಕನ್ಯೆಯೇ ಆಗಿರಬೇಕು! ಹಾಗೂ ಒಂದು ವೇಳೆ ಹೀಗೂ ಇರಬಹುದು..... ಈ ದೇವ ಸುಂದರಿಯು ಇಂದ್ರದೇವನ ಆಸ್ಥಾನದಲ್ಲಿ ರಾಜನರ್ತಕಿಯಾಗಿದ್ದೂ, ಇಂದ್ರ ಸಭೆಯಲ್ಲಿ ಅದ್ಭುತವಾಗಿ ನರ್ತನ ಮಾಡು ವೇಳೆಯಲ್ಲಿ ಕನ್ನೆಯು ಯಾವದೋ ಅಚಾತುರ್ಯದಿಂದಾಗಿ ಈಕೆಯು ಮಾಡಿದ ಒಂದು ಸಣ್ಣ ತಪ್ಪಿಗಾಗಿ ಕುಪಿತನಾದ ಇಂದ್ರ ದೇವನು ಈಕೆಗೆ ಶಾಪವಿತ್ತು, "ನೀನು ಮಾಡಿದ ತಪ್ಪಿನ ಪ್ರಾಯಶ್ಚಿತ್ತದ ಫಲವಾಗಿ, ನೀನು ಈ ಕೂಡಲೆ ಭೂಲೋಕಕ್ಕೆ

ಹೋಗು. ಅಲ್ಲಿ ಕೊಂಚ ಕಾಲ ಇದ್ದು ಮತ್ತೆ ನನ್ನಿಂದ ಅಜ್ಞೆ ಬಂದಾಗ ದೇವಲೋಕಕ್ಕೆ ಮರಳಿ ಬಾ" ಎಂದು ಇಂದ್ರನಿಂದ ಶಾಪ ಪಡೆದು ಶಾಪಗ್ರಸ್ಥಳಾದ ದೇವ ಸುಂದರಿಯೇ ಇರಬೇಕು ಈ ಹೆಣ್ಣು!

ಚೆಲುವಿನರಸಿ ಆ ತರುಣಿಯನ್ನೇ ನೋಡುತ್ತ ನೋಡುತ್ತ ರಸಕವಿಯಾದ ಭೋಜನು ವಿಕಟ ಕವಿಯೂ ಆಗಿಬಿಟ್ಟ.

ರವಿ ಕಾಣದ್ದನ್ನು ಕವಿ ಕಂಡ. ಎಂಬಂತೆ ಆ ರಾಜ ಕವಿಗೆ ಮಹಾ ಸುಂದರ ರೂಪಿಣಿಯಾದ ಆ ತರುಣಿ ಭೋಜರಾಜನ ಪಾಲಿಗೆ ಬಯಸಿ ಬಂದ ನಾರಿಯಾದಳು.

ಸಮಯ ಚತುರೆಯಾದ ಆ ಸುಂದರಿ ಒಮ್ಮೆ ಓರೆನೋಟಬೀರಿ. ಅರ್ಥಗರ್ಭಿತವಾಗಿ ಮೋಹಕ ನಗು ಒಂದನ್ನು ಚೆಲ್ಲಿದ್ದಳು. - ಆ ತೇಜಸ್ವೀ ತರುಣ ಕವಿಯ ಕಡೆಗೆ. ಭೋಜರಾಜನ ಭಾಗ್ಯದ ಭಾಗಿಲು ತೆರೆಯಿತು.

ಬಳಕುವ ವೈಯಾರದ ಹೆಜ್ಜೆಯನ್ನು ಹಾಕುತ್ತ, ತಾನೇ ತಾನಾಗಿ ಭೋಜರಾಜನ ಬಳಿಗೆ ಸಾಗಿ ಬಂದಳು. ಹಾಗೆ ಬರುತ್ತಿದ್ದಾಗ ಅವಳ ಹಂಸ ನಡಿಗೆಯ ಕಾಲಿನ ಗೆಜ್ಜೆಯ ಇಂಚರ ಧ್ವನಿಗೆ ಅವನ ಮಧುರ ಹೃದಯ ಭಾವೋನ್ಮತ್ತವಾಗಿ. ದುಶ್ಯಂತನ ಬಳಿಗೆ ಶಾಕುಂತಲೆಯು ಪ್ರೇಮವನ್ನರಸಿ ಬಂದಂತೆ ಸಾಕ್ಷಾತ್ ಪ್ರೇಮದ ಅದಿದೇವತೆಯೇ ಪುರುಷ ಪ್ರೇಮವನ್ನರಿಸಿ ತನ್ನತ್ತ ಬರುತ್ತಿರುವುದನ್ನು ಕಂಡು ಎಂದಿಲ್ಲದ ಹಿಗ್ಗಿನಿಂದ ಪುಳಕಿತನಾದ.

ಸ್ವರ್ಣಲತೆಯಂತೆ. ಸರ್ವಾಂಗ ಸುಂದರಳಾದ ಆ ಕಡುಚೆಲುವೆ ತನ್ನ ಪ್ರೇಮ ಪೂರ್ಣ ನಯನಗಳಿಂದ ತೇಜೋವಂತನಾದ ಮಹಾ ಪುರುಷ ಸೌಂದರ್ಯದಿಂದ ಕೂಡಿದ ಭೋಜರಾಜನನ್ನೇ ನೋಡುತ್ತ. ಮತ್ತೊಮ್ಮೆ ಮಂದಹಾಸದ ಕಿರುನಗೆ ಬೀರಿ ಅವನನ್ನೇ ಆಶ್ರಯಿಸಿ ಮತ್ತಷ್ಟು ಸನಿಹಕೆ ಬಂದಳು.

ಆ ಅಸಾಧಾರಣ ಕಾಂತಿಯುಕ್ತ ನೋಟಕ್ಕೆ ಭೋಜರಾಜನು ಸಂಪೂರ್ಣವಾಗಿ ಮಾರುಹೋಗಿದ್ದನು. ಅಂದು ತನ್ನ ಆಸ್ಥಾನದಲ್ಲಿ ರಸಕವಿಗಳು ಹೆಣ್ಣಿನ ಸೌಂದರ್ಯದ ಬಗ್ಗೆ ಬಣ್ಣಿಸಿ ಪ್ರಸಂಶಿಸಿದ ರಸಸಮಯ ಇನ್ನೂ ಅವನ ಹೃದಯ ಮಂದಿರದಲ್ಲಿ ಓಕುಳಿಯಾಡುತ್ತಿತ್ತು.

ತೀರ ಸಮೀಪಕ್ಕೆ ಬಂದಂತೆ ಅವಳ ಕಾಂತಿಯುಕ್ಕ ನೋಟಕ್ಕೆ ಭೋಜರಾಜನು ಸಂಪೂರ್ಣ ಮಾರುಹೋಗಿದ್ದ. ವನ್ಯ ಮೃಗಗಳ ಬೇಟೆಗಾಗಿ ಬಂದಿದ್ದ ಅವನ ಮನಸ್ಸು ಹೆಣ್ಣಿನ ಬೇಟೆಯಾಡಲು ಸಹ ಹಿಂಜರಿಯಲಿಲ್ಲ. ಅದರಲ್ಲೂ ಒಂಟಿ ಹೆಣ್ಣು! ಸುತ್ತ ಮುತ್ತ ಯಾರೂ ಇಲ್ಲ.

ಆ ಸಮಯ.....

ಇಬ್ಬರೂ ಸಮವಯಸ್ಸಿನ ಜೋಡಿಗಳ. ಕಣ್ಣು ಕಣ್ಣು ಒಂದಾಯಿತು! ಅದ್ಯಾವುದೋ ಅವ್ಯಕ್ತ ಪ್ರೇಮ ಪೂರ್ಣ ಪ್ರಣಯ ಕಥೆಯನ್ನು ಬರೆಯುತ್ತಿತ್ತು ಭೋಜನ ಹೃದಯ.

ಕ್ಷಣಾರ್ಧದಲ್ಲಿ ನೂರಾರು ಮಧುರ ಕವಿತೆಗಳು ಸೃಷ್ಟಿಯಾಗಿತ್ತು ಅವನ ಹೃದಯ ಮಂದಿರದಲ್ಲಿ.

ರವಿ ಕಾಣದ್ದನ್ನು ಕವಿ ಕಂಡ ಎಂಬಂತೆ ತಾನು ನಿಂತ ಸ್ಥಳವೇ ಒಂದು ಹೊಸ ಅಪೂರ್ವ ಲೋಕದ ಸೃಷ್ಟಿಯಾಗಿ ಬಿಟ್ಟಿತ್ತು.

ಆ ಸುರಸುಂದರಿಯನ್ನು ಮಾತನಾಡಿಸುವ ತವಕ. ಆದರೆ ಹೇಗೆ ಯಾವ ರೀತಿ ಮಾತನಾಡಬೇಕೆಂಬುದೇ ಮನಸ್ಸಿನ ತೊಳಲಾಟ.....?

ಹೆಣ್ಣು - ಗಂಡುಗಳ ಪ್ರಥಮ ಪರೀಕ್ಷೆ ಎಂದರೆ ಮೂರು ಪರೀಕ್ಷೆಯಲ್ಲಿ ಗೆಲ್ಲಬೇಕು. ಆಗ ಮಾತ್ರ ಫಲ..... ಮೊದಲನೆಯದು ಪ್ರಥಮ ನೋಟದಲ್ಲಿ ಗೆಲ್ಲಬೇಕು. ಎರಡನೇಯದು ಪ್ರಥಮ ಮಧುರ ಮಾತಿನಲ್ಲಿ ಗೆಲ್ಲಬೇಕು. ಮೂರನೆಯದಾಗಿ ಪ್ರಥಮ ಚುಂಬನದಲ್ಲಿ ಗೆಲ್ಲಬೇಕು. ಆದರೆ ಈ ಪರೀಕ್ಷೆಯಲ್ಲಿ ಗೆಲ್ಲುತ್ತೇನೋ ಅಥವಾ ಸೋಲುತ್ತೇನೋ ಎಂಬ ಡೋಲಾಯಮಾನ ಮನಸ್ಸು. ಗೆದ್ದರೆ ಸ್ವರ್ಗ ಸಂತೋಷ. ಸೋತರೆ ನಿರಂತರ ತಾಪ ಪರಿತಾಪ.

ಹೀಗಾಗಿತ್ತು ಆಗಿನ ಭೋಜನ ಅವಸ್ಥೆ.... ಆದರೆ ಆ ಸುರಸುಂದರಿ ಭೋಜರಾಜನನ್ನು ಯಾವ ಪರೀಕ್ಷೆಗೂ ಒಳಗಾಗದಂತೆ ತಾನೇ ಆ ಭೋಜರಾಜನ ಹೃದಯವನನ್ನು ಗೆದ್ದಿದ್ದಳು.

"ಬನ್ನಿ ಭೋಜರಾಜೇಂದ್ರ! ಎಂದಳು ಆಗ ಮತ್ತಷ್ಟು ಚಕಿತನಾದ. 'ನನ್ನ ಹೆಸರು ಈಕೆಗೆ ಹೇಗೆ ಗೊತ್ತಾಯಿತು!' ಎಂದು. ಆಗ ಭೋಜರಾಜನ ಸಂಕೋಚ ದೂರ ಸರಿದು. ತನ್ನ ಮಧುರ ನುಡಿಗಳಿಂದ ಮಾತನಾಡುತ್ತ 'ಸುಂದರಿ ನೀನು ಯಾರು? ಈ ಅರಣ್ಯದಲ್ಲಿ ಒಂಟಿಯಾಗಿ ಇಲ್ಲಿಗೆ ಬರಲು ಕಾರಣವೇನು?" ಎಂದು ಹಲವಾರು ಪ್ರಶ್ನೆಯನ್ನು ಹಾಕಿದ. "ನಾನು ದೇವಲೋಕದ ದೇವಕನ್ಯೆ. ಇಂದ್ರ ದೇವನು ನಿನ್ನನ್ನು ಕರೆತರಲು ಹೇಳಿ ನನ್ನನ್ನು ಇಲ್ಲಿಗೆ ಕಳುಹಿಸಿಕೊಟ್ಟಿರುತ್ತಾನೆ. ಬಾ ಹೋಗೋಣ."

"ಹಾಹಾ! ಇಂದ್ರ ಲೋಕಕ್ಕೆ ಹೇಗೆ ಹೋಗುವುದು?"

"ಚಿಂತಿಸಬೇಡ ಅದೋನೋಡು....." ಎನ್ನುತ್ತಿದ್ದಂತೆ ದೂರ ಗಗನದಲ್ಲಿ - ಮಂದಾರ ಪುಷ್ಪಗಳಿಂದ ಅಲಂಕೃತವಾದ ಭವ್ಯವಾದ ಪುಷ್ಪಕ ವಿಮಾನ ಇದ್ದದ್ದು ಅವರು ನಿಂತಿದ್ದ ಬಳಿಯೇ ಬಂದುನಿಂತಿತು.

ವಿಸ್ಮಯಭೂತನಾದ - ಎಲ್ಲವೂ ಆಶ್ಚರ್ಯ ಸೋಜಿಗ. ಎಲ್ಲವೂ ಹೊಸ ಅನುಭವ. ಭವ್ಯಾಲಂಕೃತವಾದ ಆ ಪುಷ್ಪಕ ವಿಮಾನವಾದರೋ ಭೂಮಿಗೆ ಸ್ಪರ್ಶವಾಗದ ಹಾಗೆ ಯಾವುದೇ ಆಧಾರವಿಲ್ಲದೆ ಭೂಮಿಗೆ ಅರ್ಧ ಅಡಿ ಅಂತರದಲ್ಲಿ ನಿಂತಿದ್ದು ಇನ್ನೂ ಪರಮಾಶ್ಚರ್ಯವಾಯಿತು ಭೋಜರಾಜನಿಗೆ.

ದೇವ ವಿಮಾನ ಬಂದ ಕ್ಷಣದಲ್ಲಿಯೇ ಆ ಸುರಸುಂದರಿ ಮಿಂಚಿನ ಭರದಲ್ಲಿ ಅವನ ಬಳಿಗೆ ಬಂದು ಕೈಹಿಡಿದಳು......

ಮಂತ್ರಮುಗ್ಧನಾಗಿ ಆ ಸುಂದರಿಯ ಕಣ್ಣುಗಳನ್ನೇ ನೋಡುತ್ತ ಕಲ್ಪನಾ ಸಾಮ್ರಾಜ್ಯದಲ್ಲಿ ತೇಲಿಹೋಗಿದ್ದ.

ಆ ದೇವ ಕನ್ಯೆಯ ಸ್ಪರ್ಷ ಮಾತ್ರದಿಂದಲೆ ತಾನು ಸಹ ಭೂಮಿಯ ಆಧಾರದಿಂದ ತಪ್ಪಿ ಪುಷ್ಪಕ ವಿಮಾನ ಮಟ್ಟಕ್ಕೇರಿದ. ಭೂಲೋಕವನ್ನೆ ದೂಡಿ ಗಗನ ಮಂಡಲವನ್ನು ಆಶ್ರಯಿಸಿ ಸಾಗುತ್ತಿತ್ತು, ಆ ಪುಷ್ಪಕ ವಿಮಾನ.

ಭೋಜರಾಜನ ಪಾಲಿಗೆ ಎಲ್ಲವೂ ಆಶ್ಚರ್ಯ - ಮಹಾದಾಷ್ಚರ್ಯವಾಗಿತ್ತು. ಆಗ ಆಕೆಯನ್ನು ಪ್ರಶ್ನಿಸುತ್ತಾ.....

"ಈಗ ನಾವು ಭೂಲೋಕದಿಂದ ಎಷ್ಟು ದೂರದಲ್ಲಿದ್ದೇವೆ. ಈಗ ಎಲ್ಲಿಗೆ ಹೋಗುತ್ತಿದ್ದೇವೆ!?" ಎಂದು ಆ ದೇವತಾ ಸ್ತ್ರೀಯ ಚೆಲುವಿನ ಮುಖವನ್ನೇ ನೋಡುತ್ತ ತುಂಬಾ ಆಷ್ಚರ್ಯದ ದನಿಯಲ್ಲಿ ಪ್ರಶ್ನಿಸಿದ ಬೋಜರಾಜ.

"ದಶಸಹಸ್ರಕೋಟಿ ಯೋಜನ ದೂರದಲ್ಲಿದ್ದೇವೆ" ಯೌವನಭರಿತ ತುಂಟಚೇಷ್ಟೆಯ ಭಾವದಲ್ಲಿ ಕಿಲಕಿಲನೆ ನಗುತ್ತ ಭೋಜನ ಮುದ್ದು ಗಲ್ಲವನ್ನು ತನ್ನ ಕೋಮಲ ಕರಗಳಿಂದ ಸ್ಪರ್ಶಿಸಿ ನುಡಿದಳು ಆ ಲಲಿತಾಂಗಿ.

- ಆಗ ಭೋಜರಾಜನು ಸ್ವರ್ಗಕ್ಕಿಂತಲೂ ಮಿಗಿಲಾದ ಸ್ವರ್ಗ ಸುಖ ಅನುಭವಿಸಿದ್ದ.

"ಈಗ ನೀವು ನನ್ನನ್ನು ಕರೆದುಕೊಂಡು ಹೋಗುತ್ತಿರುವುದು ಯಾವ ಲೋಕಕ್ಕೆ" ಪ್ರಶ್ನಿಸಿದ.

"ಉಹುಂ. ನಾನು ಈಗ ಹೇಳುವುದಿಲ್ಲ. ಸದಾ ಕಲ್ಪನಾ ಸಾಮ್ರಾಜ್ಯ ಜಗತ್ತಿನಲ್ಲಿ ವಿಹರಿಸುವ ನಿಮಗೆ..... ಇನ್ನು ಕೊಂಚ ಹೊತ್ತಿನಲ್ಲಿ ನಿಮ್ಮ ಪ್ರಶ್ನೆಗೆ ನೀವೇ ಉತ್ತರ ಕಂಡುಕೊಳ್ಳುತ್ತೀರಿ" ಚಮತ್ಕಾರದ ಮಾತಿನಲ್ಲಿ ನುಡಿದಳು.

"ಹೋಗಲಿ. ಆ ಹೊಸಲೋಕವನ್ನು ನಾವು ತಲುಪಲು ಇನ್ನೂ ಎಷ್ಟು ಕಾಲ ಬೇಕು?"

ಅವಳ ಸೌಂದರ್ಯ ಮುಖದತ್ತ ತನ್ನ ತೇಜಃ ಪುಂಜ ಮುಖಾರವಿಂದದಿಂದ ಮೃದುವಾದ ವಾಣಿಯಿಂದಲೆ ಪ್ರಶ್ನಿಸಿದ.

"ಕೇವಲ ಇನ್ನೆರಡು ಘಳಿಗೆ ಮಾತ್ರ. ಈಗ ನಾವಿಬ್ಬರೂ ಆ ಹೊಸಲೋಕದ ಸಮೀಪದಲ್ಲಿಯೇ ಇದ್ದೇವೆ".

"ನನ್ನ ಕಣ್ಣಿಗೆ ಏನು ಕಾಣಿಸುತ್ತಿಲ್ಲವಲ್ಲ. ಎಲ್ಲ ಶೂನ್ಯವಾಗಿಯೇ ಇದೆಯಲ್ಲ."

"ಹೌದು! ..... ದಡ ಕಾಣುವವರೆವಿಗೂ ಭೂ ಲೋಕದ ಸಾಗರವು ಸಹ ಶೂನ್ಯವಾಗಿಯೇ ಕಾಣುವುದು. ಅದರಂತೆ ಇಲ್ಲಿಯೂ ಸಹ."

"ಅಲ್ಲಿ ಸಮುದ್ರವನ್ನಾದರೂ ನೋಡ ಬಹುದು. ಇಲ್ಲಿ ಏನೇನೂ ಇಲ್ಲವಲ್ಲ" ಎಂದು ವಿನೋದವಾಗಿಯೇ ಪ್ರಶ್ನಿಸಿದ ಭೋಜರಾಜ.

"ಇಲ್ಲಿಯ ವಾತಾವರಣವೇ ಹೀಗೆ"

ಹಾಗೆ ಇಬ್ಬರೂ ಮಾತನಾಡುತ್ತಿರುವಂತೆ..... ಆಕೆ ಹೇಳಿದಂತೆ ಕೃತಿಯಲ್ಲಿ ವರ್ಣಿಸಲಸಾಧ್ಯವಾದ ಮಾಯಾಲೋಕವೋ ಎಂಬಂತೆ ಅತ್ಯಂತ ರಮಣೀಯವಾದ ಸುಂದರವಾದ ದಿವ್ಯಲೋಕವನ್ನು ಪ್ರವೇಶಿಸಿತು ಆ ಪುಷ್ಪಕ ವಿಮಾನ. ಆ ಹೊಸಲೋಕವನ್ನು ನೋಡು ನೋಡುತ್ತಿದ್ದಂತೆ ಮಹದಾಶ್ಚರ್ಯಭರಿತನಾಗಿ ಆನಂದ ಪುಳಕಿತನಾದ, ಭೋಜರಾಜ.

ಎಲ್ಲವೂ ತನ್ನ ಕಲ್ಪನಾ ಶಕ್ತಿಗಿಂತಲೂ ಮೀರಿದ ಸೌಂದರ್ಯ..... ರಮಣೀಯವಾದ ಲೋಕ..... ಈ ಲೋಕ ಮತ್ಯಾವಲೋಕವೂ ಅಲ್ಲ. ಇದೆ ದೇವಲೋಕ! ಎಂದರಿತ ಭೋಜರಾಜ.

ವಿಮಾನ ನಿಂತಂತೆ..... ಅಲ್ಲಿಗೆ ಅನೇಕ ದೇವತಾಸ್ತ್ರೀಯರು ಕಿಲಕಿಲನೆ ನಗುತ್ತ ತಮ್ಮ ವೈಯಾರ ಬೆಡಗು ಬಿನ್ನಾಣಗಳಿಂದ ತನ್ನನ್ನು ಸುತ್ತುವರಿದು ನೀಳನಳಿನತೋಳ್ಗಳಿಂದ ಅವನನ್ನು ಹಿಡಿದೆಬ್ಬಿಸಿದರು ಆ ಸುರಸುಂದರಿಯರು. ಅಸಮಾನ ಸುಪ್ರಕಾಶದಿಂದ ಕೂಡಿದ್ದ ಆ ದೇವಲೋಕದ ದೇವರಾಜನ ಉಧ್ಯಾನ ವನಕ್ಕೆ ಕರೆತಂದರು ಆ ಶುಭಾಂಗಿಯರು.

ದೇವಲೋಕದ ಮಲ್ಲಿಗೆ ಮಂದರ ಪಾರಿಜಾತ, ತಾವರೆ, ಗುಲಾಬಿ ಹೂವು..... ಇವುಗಳ ಪರಿಮಳ ಸೌಗಂಧದ ಕಂಪು..... ಭೋಜನ ಕವಿಯ ಹೃದಯದಲ್ಲಿ ಚಿಮ್ಮುವ ಬುಗ್ಗೆಯಂತೆ ಅವನ ಆನಂದಕ್ಕೆ ಪಾರವೇ ಇಲ್ಲದಂತಾಯಿತು.

ಮಹಾರಮಣೀಯ ದೇವೋಧ್ಯಾನ ವನದ ಮೂಲಕ ಕಂಗೊಳಿಸುವ ತಿಳಿನೀಲಿ ಪಚ್ಚೆ ಕಲ್ಲಿನಿಂದಲೇ ಅಖಂಡ ವೈಭವದಿಂದ ನಿರ್ಮಾಣಗೊಂಡಿದ್ದು ಅಪೂರ್ವವೈಖರಿಯಿಂದ ನಕ್ಷತ್ರಾಕಾರದಲ್ಲಿ ರಚಿಸಿದ್ದ ಮಿಣಮಿಣ ಹೊಳೆದ ನವರತ್ನಖಚಿತ ಹಾಸುಮೆಟ್ಟಿಲುಗಳಿಂದ ಕೂಡಿದ್ದ ವರ್ಣಿಸಲಸಾಧ್ಯವಾದ ಸೌಗಂಧಮಯ ಪನ್ನೀರ ಕೊಳದ ಬಳಿಗೆ ಬಂದರು.

ಜಲಕನ್ಯೆಯರು ಎಲ್ಲರೂ ಕೂಡಿ ಮಂದಹಾಸದ ನಗೆಚೆಲ್ಲುತ್ತ ಪನ್ನೀರು ತುಂಬಿದ ಕೊಳದ ಬಳಿ ಕರೆತಂದು, ಭೋಜನನ್ನು ನೂಕಿದರು.

ಈಜು ಬಲ್ಲವನೇ ಆದ ಭೋಜರಾಜನಿಗೆ ಕೊಳದಲ್ಲಿ ಧುಮಿಕಿದಂತೆ ಮಹದಾನದಿಂದ ಈಜಾಡಿದ.

ಸುಖೋಷ್ಣವಾದ ಪನ್ನೀರ ಜಲದಲ್ಲಿ ಮಿಂದು ಮಡಿಯುಟ್ಟು ಭೋಜರಾಜನಿಗೆ ಮತ್ತಿಬ್ಬರು ಚಂದ್ರಲೇಖೆಯರು - ಚಿನ್ನದ ಹರಿವಾಣದಲ್ಲಿ ದೇವಯೋಗ್ಯವಾದ, ದೇವರಾಜನ ಅರಮನೆಯಿಂದ ಅವನಿಗಾಗಿಯೇ ತಂದಿದ್ದ ವಜ್ರಖಚಿತ ಕಿರೀಟ,

ಅಪೂರ್ವವಸ್ತ್ರಾಭರಣವನ್ನು ಶೃಂಗರಿಸಿಕೊಳ್ಳಲು ಬಂಗಾರದ ಹರಿವಾಣದಲ್ಲಿ ಎಲ್ಲವೂ ಸಿದ್ಧವಾದವು.

ಎಲ್ಲವನ್ನು ತನ್ನನ್ನು ಭೂಲೋಕದಿಂದ ಕರೆತಂದ ಅಪ್ಸರೆಯಲ್ಲಿ ಮಹಾ ಅಪ್ಸರೆಯಾದ ಆ ದೇವಸುಂದರಿಯೇ ಉಡಿಸಿ ತೊಡಿಸಿ ಶೃಂಗರಿಸಿದ್ದಳು. ಆ ಪುಣ್ಯಪುರುಷನಿಗೆ.

ಅದೇನಾಶ್ಚರ್ಯ..... ಕಣ್ಣ ರೆಪ್ಪೆ ಮುಚ್ಚಿ ತೆಗೆಯುವಷ್ಟರಲ್ಲಿ ತಾನಿದ್ದ ಸ್ಥಳ ಪನ್ನೀರ ಕೊಳಮಾಯವಾಗಿ ಆ ಸ್ಥಳದಲ್ಲಿ ಮಹಾ ವೈಭವದಿಂದ ಕೂಡಿದ ದೇವರಾಜ ಇಂದ್ರನ ಬಂಗಾರದ ಅರಮನೆಯನ್ನು ಕಂಡು ವಿಸ್ಮಯ ಭೂತನಾದ.....

ಭೂಲೋಕದಲ್ಲಿರುವ ರಾಜ ಮಹಾರಾಜರ ಭವ್ಯವಾದ ಅರಮನೆಗಳನ್ನು ವರ್ಣಿಸುವುದೇ ಮಹಾ ಕಷ್ಟ. ಹೀಗಿರುವಾಗ ದೇವಲೋಕದ ಸಾಕ್ಷಾತ್ ಇಂದ್ರನ ಬಂಗಾರದ ಅರಮನೆಯನ್ನು ಮನತಣೀಯೆ ಕಂಡಾಗ, ಇಂಥ ಅರಮನೆಯನ್ನು ಕೃತಿಯಲ್ಲಿ ವರ್ಣಿಸಬೇಕಾದರೆ ಆ ವಾಗ್ದೇವಿಯನ್ನು ಸಾವಿರ ವರ್ಷ ತಪಸ್ಸು ಮಾಡಿ ಫಲಸಿದ್ಧಿಸಿಕೊಂಡು ಬರಬೇಕು ಎಂದು ಕೊಂಡ. ಇಂದ್ರದೇವನ ಅರಮನೆ ತನ್ನ ಅರಮನೆಗಿಂತಲೂ ಅತಿಶಯವಾಗಿತ್ತು. ಆ ದೇವರಾಜನ ಅರಮನೆಯ ಒಡ್ಡೋಲಗದ ಅಲಂಕೃತ ವೈಭವವನ್ನು ನೋಡಲು ಎರಡು ಕಣ್ಣೇ ಸಾಲದು. ಸಹಸ್ರ ಕಣ್ಣುಗಳು ಬೇಕು. ಸಹಸ್ರ ನಾಲಿಗೆ ಬೇಕು. ಎಂಬುವಂತೆ ಮಹಾ ವೈಭವದಿಂದ ಕಂಗೊಳಿಸುತ್ತಿತ್ತು ಆ ಇಂದ್ರನ ಅರಮನೆ.

ಮಹದಾನಂದದಿಂದ ಪುಳಕಿತನಾದನು ಭೋಜರಾಜ. ಅದೇನಾಶ್ಚರ್ಯ? ಒಮ್ಮೆ ತಾನು ನೋಡಿದಾಗ ಒಡ್ಡೋಲಗದ ಎಲ್ಲ ಸಿಂಹಾಸನಗಳ ಖಾಲಿ ಇದ್ದುದು ಇದ್ದಕ್ಕಿದ್ದಂತೆ ಬ್ರಹ್ಮ - ವಿಷ್ಣು - ಮಹೇಶ್ವರಾದಿಯಾಗಿ ಸಕಲ ದೇವಾನು ದೇವತೆಗಳು ಪೀಠವನ್ನಲಂಕರಿಸಿ ಬಿಟ್ಟಿದ್ದರು. ಅದೇ ಪೀಠದಲ್ಲಿ ನವಮನ್ಮಥರೂಪಿಯಾದ ಇಂದ್ರನು ಭವ್ಯವಾದ ರತ್ನಖಚಿತ ಬಂಗಾರದ ಸಿಂಹಾನದಲ್ಲಿ ಆಸೀಲನಾಗಿದ್ದುದ್ದು ಕಂಡು ಮತ್ತಷ್ಟು ವಿಸ್ಮಯ ಭೂತನಾದ.

ದೇವರಾಜನ ಅರಮನೆಯ ಮಹಾದ್ವಾರದ ಮೂಲಕ ಒಳಪ್ರವೇಶಿಸುತ್ತಿದ್ದಂತೆ ಉಪ್ಪರಿಗೆಯ ಮೇಲೆ ಅಸಂಖ್ಯಾತವಾಗಿ ನೆರೆದಿದ್ದ ಸುಮಕೋಮಲೆಯರಾದ ದೇವಕನ್ಯೆಯರು..... ಬಂಗಾರದ ತಟ್ಟೆಯಲ್ಲಿ ತುಂಬಿರಿಸಿದ್ದ - ಮಲ್ಲಿಗೆ ಪಾರಿಜಾತ - ಮಂದಾರ ಮುಂತಾದ ಸುಗಂಧಿತ ಪುಷ್ಪಗಳನ್ನು ಪುಷ್ಪವೃಷ್ಟಿ ಸುರಿಸಿದರು. ಪನ್ನೀರ ಮಳೆಗರೆದರು. ಸಾವಿರಾರು ಸುಂದರ ತರುಣಿಯರೊಡಗೂಡಿ ದೇವರಾಜನ ಭವ್ಯವಾದ ಒಡ್ಡೋಲಗಕ್ಕೆ ಆಗಮಿಸಿದ ಭೋಜರಾಜ.

ಆಗ ಇಂದ್ರದೇವನೇ ಸಿಂಹಾಸನದಿಂದೆದ್ದು ಬಂದು ಭೋಜರಾಜನನ್ನು ತನ್ನ ದೇವ ಸಿಂಹಾಸನದಲ್ಲಿ ಕುಳ್ಳರಿಸಿ. ಆ ತನ್ನನ್ನು ಕರೆತಂದ ಅಪೂರ್ವ ದೇವಸುಂದರಿಯನ್ನು

ಸಹ ಶಚಿದೇವಿಯ ಸ್ಥಾನದಲ್ಲಿ ಕುಳ್ಳರಿಸಿ...... ಇಬ್ಬರಿಗೂ! ಮಂದಾರ ಪುಷ್ಪಹಾರ ಹಾಕಿಸಿದ. ಇನ್ನುಮುಂದೆ ನೀವಿಬ್ಬರು ನನ್ನ ಸ್ಥಾನದಲ್ಲಿದ್ದುಕೊಂಡು ಈ ದೇವ ಲೋಕವನ್ನಾಳಿ ಎಂದನು ಆ ಇಂದ್ರ. 

ಆಗ ಬ್ರಹ್ಮ ವಿಷ್ಣು ಮಹೇಶ್ವರರು ತ್ರಿಲೋಕ ಮಾತೆಯರಾದ ಲಕ್ಷ್ಮೀ ಸರಸ್ವತಿ ಪಾರ್ವತಿ ಆದಿಯಾಗಿ ರತ್ನ ಖಚಿತ ದೇವ ಸಿಂಹಾಸನದಲ್ಲಿ ಪತ್ನೀ ಸಮೇತನಾಗಿ ಕುಳಿತಿದ್ದ ಭೋಜರಾಜನಿಗೆ ಪುಷ್ಪವೃಷ್ಟಿಗೆರೆದು ಹರಸಿ ಆ ಇಬ್ಬರನ್ನೇ ಅರಮನೆಯಲ್ಲಿ ಬಿಟ್ಟು ಎಲ್ಲರೂ ಮಾಯವಾಗಿ ಬಿಟ್ಟರು.

ಆಗ ಆ ಇಂದ್ರಭವನದಲ್ಲಿ ಭೋಜರಾಜ ಮತ್ತು ದೇವಸುಂದರಿ ಮಾತ್ರ ಉಳಿದರು.

"ದೇವಿ..... ಈಗ ನಾವಿಬ್ಬರೆ ಏನು ಮಾಡುವುದು?" ಪ್ರಶ್ನಿಸಿದ.

"ಇನ್ನೇನು?. ಅದೂ ಹೇಳಿಕೊಡಬೇಕೆ ನಿಮಗೆ" ಎಂದು ಭೋಜರಾಜನನ್ನು ಅಪ್ಪಿ. ಬಿಗಿದಪ್ಪಿ ಒಮ್ಮೆಯೇ ಸಹಸ್ರ ಮುತ್ತನ್ನುತ್ತಳು ಸಮಯ ಚತುರೆಯಾದ ದೇವಕನ್ಯೆ.....

ಆದರೆ ಕ್ಷಣಾರ್ಧದಲ್ಲಿ ಭೋಜರಾಜನ ಪಾಲಿಗೆ ಅವೆಲ್ಲವೂ ಮಾಯೆಯಾಗಿ ಬಿಟ್ಟಿತು.

ಯಾವುದು ಆ ಮಾಯಲೋಕ?

ಅದೇ ಎಲ್ಲರಿಗೂ ಆಗಾಗ್ಗೆ ಕಾಡಿಸುವ ಪೀಡಿಸುವ ಕನಸಿನ ಲೋಕ.

ವಿದರ್ಭದೇಶದ ರಾಜನ ಅತಿಥಿಗೃಹದಲ್ಲಿ ಹಂಸತೂಲಿಕಾತಲ್ಪದಲ್ಲಿ ಹಾಯಾಗಿ ಮಲಗಿದ್ದ ಭೋಜರಾಜನು ಆ ರೀತಿಯಾದ ಒಂದು ಅಪೂರ್ವ ಕನಸನ್ನು ಕಂಡಿದ್ದ.

ಎಚ್ಚತ್ತಂತೆ ಆ ಕನಸಿನಲ್ಲಿ ನೋಡಿದ್ದನ್ನು ನೆನಪಿಗೆ ತಂದುಕೊಳ್ಳುತ್ತ ವಿಸ್ಮಿತನಾಗಿ ನಕ್ಕ ಅಷ್ಟೇ ಅಲ್ಲ ಒಂದು ರೀತಿಯ ನಾಚಿಕೆ ಆಗಿತ್ತು ಅವನಿಗೆ.

ಭೋಜರಾಜನ ಯೌವನದ ಹೊಸ್ತಿಲಿನ ಆ ದಿನಗಳಲ್ಲಿ ಅದೊಂದು ಪ್ರಥಮ ಮಧುರ ಸ್ವಪ್ನವಾಗಿತ್ತು.

# ಅವಂತಿ ರಾಜಕುಮಾರಿಯ ಸ್ವಯಂವರ ಭೋಜರಾಜನ ದ್ವಂದ್ವ ಯುದ್ಧ

ಅವಂತಿ ದೇಶದ ಮಹಾರಾಜ ಪ್ರತಾಪಸಿಂಹನ ಏಕೈಕ ಪುತ್ರಿಯಾದ, ಜಗದೇಕ ಸುಂದರಿಯೆಂದೇ ಮನೆಮಾತಾಗಿದ್ದ ಲೀಲಾವತಿಯ 'ಸ್ವಯಂವರ' ದ ಅಂಗವಾಗಿ ಅಂದು ಆ ಅವಂತಿ ಪಟ್ಟಣದ ಭವ್ಯ ಅರಮನೆಯಿಂದ ಮಹಾದ್ವಾರದವರೆವಿಗೂ, ರಾಜರಸ್ತೆಯುದ್ದಕ್ಕೂ ಹಸಿರು ಚಪ್ಪರ ತಳಿರು ತೋರಣಗಳಿಂದಲೂ ಬಣ್ಣಬಣ್ಣದ ಸಾಲು ಬಾವುಟಗಳಿಂದಲೂ ಅಲಂಕರಿಸಿದ್ದರು.

ಆ ದಿನ ಪಟ್ಟಣಿಗರ ಆನಂದ - ಮಹಾದಾನಂದಕ್ಕೆ ಮಿತಿಯೇ ಇಲ್ಲವಾಗಿತ್ತು.

ಬಹುವಿಶಾಲವಾದ (ಯೋಜನ ಉದ್ದಗಲವುಳ್ಳದ್ದು) ಸಾಗರದೋಪಾದಿಯಂತೆ ಸಮನೆಲವುಳ್ಳ ಮೈದಾನದಲ್ಲಿ ಸ್ವಯಂವರ ಮಂಟಪವನ್ನು ನಿರ್ಮಿಸಿದ್ದರು.

ಆ ಸ್ವಯಂವರ ಮಂಟಪದಲ್ಲಿ ಹತ್ತು ಲಕ್ಷ ಜನರು ಕುಳಿತು ವೀಕ್ಷಿಸಬಹುದಾದ ರೀತಿಯಲ್ಲಿ ವರ್ಣನಾತೀತವಾಗಿ ಸಜ್ಜುಗೊಳಿಸಲಾಗಿತ್ತು.

ಸ್ವಯಂವರ ಮಂಟಪದ ಚತುರ್ದಿಕ್ಕಿಗೂ ವಿಶಾಲವಾದ ಮಹಾದ್ವಾರದಿಂದ ಕೂಡಿದ ಬಾಗಿಲುಗಳಿದ್ದವು. ಆ ನಾಲ್ಕು ಮಹಾದ್ವಾರಗಳನ್ನು ಸಹ ಹಸಿರು ಚಪ್ಪರ ಗೊನೆ ಬಾಳೆ ತಳಿರು ತೋರಣಗಳಿಂದಲೂ ಬಗೆ ಬಗೆಯ ಸುಗಂಧಿತ ಪುಷ್ಪಗುಚ್ಛಗಳಿಂದಲೂ ಭವ್ಯವಾಗಿ ಅಲಂಕರಿಸಲ್ಪಟ್ಟಿತ್ತು.

ಆ ಭವ್ಯಾಲಂಕೃತವಾದ ಸ್ವಯಂವರ ಮಂಟಪದ ಮಧ್ಯಕ್ಕೆ ಸರಿಯಾಗಿ ಸುತ್ತಲೂ ಕುಳಿತು ಜಗ ಜಟ್ಟಿಗಳ ದ್ವಂದ್ವ ಯುದ್ಧವನ್ನು ವೀಕ್ಷಿಸಬಹುದಾದ ರೀತಿಯ ವಿನ್ಯಾಸವನ್ನೊಳಗೊಂಡಂತೆ "ಜಟ್ಟಿ ಕಾಳಗದ ಅಖಾಡ"ವನ್ನು ಸಾಕಷ್ಟು ವಿಸ್ತರವಾಗಿಯೇ ನಿರ್ಮಿಸಲಾಗಿತ್ತು.

ಆಹ್ವಾನಿತ ಮಹಾರಾಜರುಗಳಿಗೆ, ಸಾಮಂತರಿಗೆ ಪಾಳೇಗಾರರಿಗೆ, ಅರಮನೆಯ ಅಧಿಕಾರಿಗಳಿಗೆ ಪುರಪ್ರಮುಖರಿಗೆ ಎಲ್ಲರಿಗೂ ಸ್ವಯಂವರ ಮಂಟಪದ ಸುತ್ತಲೂ ಯಥೋಚಿತವಾದ ರಾಜಪೀಠವನ್ನು ಸಾಲುಸಾಲಾಗಿ ಸುತ್ತಲು ವ್ಯವಸ್ಥಿತಗೊಳಿಸಿದ್ದರು.

ಸ್ವಯಂವರ ಮಂಟಪದ ಹೊರ್ರಭಾಗ ಮಾತ್ರವಲ್ಲದೆ ಒಳಭಾಗದ ಸುತ್ತಲೂ ಸಹ ಕಣ್ಣಿಗೆ ಹಬ್ಬವನ್ನುಂಟು ಮಾಡುವ ಹಾಗೆ ಆಕರ್ಷಿತ ಬಣ್ಣಬಣ್ಣದ ಬಟ್ಟೆಗಳಿಂದ ತೋರಣಗಳಿಂದ ಅಲಂಕರಿಸಿದ್ದರು. ಸುಗಂಧದ ಕಂಪು ಎಲ್ಲೆಡೆಯಲ್ಲೂ ಹೊರಸೂಸುವ ಹಾಗೆ ಬಗೆ ಬಗೆಯ ಸುಗಂಧ ಪುಷ್ಪಗುಚ್ಛ - ಪುಷ್ಪಹಾರಗಳಿಂದ ಮತ್ತಷ್ಟು ವೈಭವದಿಂದ ಕಾಣುವ ಹಾಗೆ ನಯನಮನೋಹರವಾಗಿ ಶೃಂಗರಿಸಿದ್ದರು.

ಅಷ್ಟು ಸಾಲದು ಮತ್ತಷ್ಟು ಬೇಕು ಎಂಬಂತೆ ಸುಗಂಧ ಪುಷ್ಪಗಳ ಜೊತೆಗೆ ಶುದ್ಧವಾದ ಚಂದನ, ಅಗರು, ಸಾಂಬ್ರಾಣಿ ಮುಂತಾದ ಸುಗಂಧ ದ್ರವ್ಯಗಳ ಪರಿಮಳ ಸುವಾಸನೆಯೂ ಎಲ್ಲೆಲ್ಲೂ ಪಸರಿಸಿತ್ತು.

ಜಟ್ಟಿಕಾಳಗ (ದ್ವಂದ್ವ ಯುದ್ಧ)ದಲ್ಲಿ ಭಾಗವಹಿಸುವ ಅಸಮಾನ. ಶೂರ ಪರಾಕ್ರಮಿಗಳಿಗಾಗಿಯೇ ಸ್ವಯಂವರ ಮಂಟಪದ ಸಮೀಪದಲ್ಲಿಯೇ ಅನರುಗಳು ಇಳಿದು ಕೊಳ್ಳಲು ಅತಿ ವೈಭವದಿಂದ ಕೂಡಿದ ರಾಜಬಿಡಾರಗಳನ್ನು ನಿರ್ಮಾಣ ಮಾಡಿಸಿದ್ದರು. ಆ ಒಂದೊಂದು ರಾಜ ಬಿಡಾರಗಳಲ್ಲೂ ರಾಜಾರ್ಹತೆಗೆ ತಕ್ಕಂತೆ ಎಲ್ಲ ರೀತಿಯಲ್ಲೂ ಸುವ್ಯವಸ್ಥೆಗೊಳಿಸಲಾಗಿತ್ತು.

ತನ್ನ ಆಹ್ವಾನವನ್ನು ಮನ್ನಿಸಿ ಭೋಜರಾಜರು ವಿದರ್ಭ ದೇಶದ ರಾಜರೊಡನೆ ಬರುತ್ತಿದ್ದಾರೆ ಎಂದು ತಿಳಿದ ಪ್ರತಾಪಸಿಂಹನು ಭೋಜರಾಜನನ್ನ ಎದುರುಗೊಳ್ಳಲು ಅರಮನೆಯ ಮಹಾದ್ವಾರದ ಮುಂದೆ ಸಕಲ ಸಿದ್ಧತೆಗಳನ್ನು ಮಾಡಿದ್ದನು. ಭೋಜರಾಜನ ಬರುವಿಕೆಯನ್ನು ಎದುರು ನೋಡುತ್ತಿದ್ದನು.

ಪಟ್ಟಣದ ಪ್ರಜೆಗಳು ಸಹ ಅಸಂಖ್ಯವಾಗಿ ಪ್ರವಾಹದೋಪಾದಿಯಲ್ಲಿ ತುಂಬಿ ನೆರೆದಿದ್ದರು. ಸಕಾಲಕ್ಕೆ ಸರಿಯಾಗಿ ತನ್ನ ಮಿತ್ರರಾಜನೆ ಆದ ವಿದರ್ಭ ದೇಶದ ರಾಜನಾದ ವಿದ್ಯಾಧರ ಮಹಾರಾಜರೊಡನೆ ಚಿನ್ನದ ರಾಜರಥದಲ್ಲಿ ಆಗಮಿಸುತ್ತಿದ್ದುದು ಗೋಚರಿಸಿದಂತೆ ಮಹಾದಾನಂದಭರಿತನಾದನು.

ಅರಮನೆಯ ಮಹಾದ್ವಾರದ ಮುಂದೆ ಬಹು ವೈಭವ ರೀತಿಯಲ್ಲಿ ವಿಶಾಲವಾದ ಹಸಿರು ಚಪ್ಪರ ತಳಿರು ತೋರಣ ಪುಷ್ಪಹಾರ ಪುಷ್ಪಗುಚ್ಛಗಳಿಂದ ಅಲಂಕರಿಸಿದ್ದರು.

ಮಂಗಳ ವಾದ್ಯಗಳು ಮೊಳಗುತ್ತಿದ್ದವು. ಜಗದ್ ವಿಖ್ಯಾತನಾದ ಸೂರ್ಯ ತೇಜಸ್ಸುವುಳ್ಳವನೇ ಆದ ಭೋಜರಾಜನು ರಾಜರಥದಿಂದ ಇಳಿಯುತ್ತಿದ್ದಂತೆ ಮಂಗಳ ವಾದ್ಯಗಳ ಜೊತೆಗೆ ಅರಮನೆಯ ಇತರೆ ಸಾಂಪ್ರಾದಾಯಕ ವಾದ್ಯಗಳು ಮೊಳಗಿದ್ದವು.

ಭೋಜರಾಜನನ್ನ ಕಂಡ ಪ್ರತಾಪಸಿಂಹರಿಗೆ ಸಾಕ್ಷಾತ್ ವಿಷ್ಣುದೇವರೇ ತನ್ನ ಅರಮನೆಗೆ ಬಂದಂತೆ ಮಹಾದಾನಂದಭರಿತನಾದನು.

ಆ ಧಾರಾನಾಗರಾಧೀಶನನ್ನು ಅತ್ಯಂತವಾದ ರಾಜಗೌರವದಿಂದ ಆಹ್ವಾನಿಸಿದ್ದನು. ಅಲ್ಲಿ ನೆರೆದಿದ್ದ ವೇದಸ್ವರೂಪರಾದ ನೂರಾರು ವಿಪ್ರರಿಂದ ವೇದಘೋಷವಾಯಿತು. ಅದು ಕರ್ಣಾನಂದಮಯವಾಗಿತ್ತು. ಪ್ರತಾಪಸಿಂಹನು ಬೆಲೆಕಟ್ಟಲಾಗದ ವಜ್ರಖಚಿತವಾದ ಮುತ್ತಿನ ಹಾರವನ್ನು ಸುಗಂಧ ಪುಷ್ಪಹಾರವನ್ನು ಭೋಜನ ಕೊರಳಿಗೆ ಹಾಕಿದನು. ನಂತರ ಆತ್ಮೀಯ ಮಿತ್ರರಾಜನೇ ಆದ ವಿದ್ಯಾಧರನಿಗೂ ಸಹ ರತ್ನಖಚಿತ ಹಾರವನ್ನು ಪುಷ್ಪಹಾರವನ್ನು ಹಾಕಿ ಸತ್ಕರಿಸಿದನು.

ವಿಪ್ರೋತ್ತಮರು ಭೋಜರಾಜನನ್ನು ಯಥಾವಿಧಿಯಾಗಿ ಪೂರ್ಣ ಕುಂಭದಿಂದಲೂ ಯಥೋಚಿತವಾದ ಅರ್ಘ್ಯ ಪಾದ್ಯಾದಿಗಳಿಂದಲೂ ಆತ್ಮೀಯವಾಗಿ ಸತ್ಕರಿಸಿ ಅರಮನೆಯೊಳಗೆ ಬರಮಾಡಿಕೊಂಡರು.

ಅರಮನೆ ಮಹಾದ್ವಾರದ ಮುಂದೆ ಸಮುದ್ರದೋಪಾದಿಯಲ್ಲಿ ಕಿಕ್ಕಿರಿದು ನೆರೆದಿದ್ದ ಅಸಂಖ್ಯ ಪ್ರಜೆಗಳು ಭೋಜರಾಜನ ದರ್ಶನ[illegible] ಆನಂದ

ಪುಳಕಿತರಾದರು. ಎಲ್ಲರು ಒಕ್ಕೊರಳಿನಿಂದ ಜಯಕಾರ ಹಾಕುತ್ತ "ಭೋಜರಾಜನಿಗೆ ಜಯವಾಗಲಿ" ಎಂದು ಮುಗಿಲು ಮುಟ್ಟುವಂತೆ ಹರ್ಷಧ್ವನಿ ಮೊಳಗಿಸಿದರು.

ಸಾಕ್ಷಾತ್ ಶ್ರೀ ಕೃಷ್ಣ ಪರಮಾತ್ಮನೆ ತಮ್ಮ ದೇಶಕ್ಕೆ (ಅವಂತಿ) ಬಂದಿದ್ದಾನೆ ಎಂದು ಎಲ್ಲರೂ ಉತ್ಸಾಹಭರಿತರಾಗಿದ್ದರು.

ಸರ್ವಾಂಗ ಸುಂದರಿಯರಾದ, ಕಡು ಚೆಲುವೆಯರಾದ, ಹಾಗೂ ವಿಶೇಷ ಆಕರ್ಷಕ ವಸ್ತ್ರಾಭರಣಗಳಿಂದಲಂಕೃತವಾದ ನೂರಾರು ಅವಂತಿ ಸುಂದರಿಯರು (ಕನ್ಯೆಯರು) ಭೋಜರಾಜನಿಗೆ ಆರತಿ ಬೆಳಗಿದರು.

ಪ್ರತಾಪಸಿಂಹನು ಭೋಜರಾಜನನ್ನು ಅಂತಃಕರಣ ತುಂಬಿದ ಆದರದಿಂದಲೂ ರಾಜಗೌರವದಿಂದಲೂ ಆಹ್ವಾನಿಸಿ ಅರಮನೆಯೊಳಗೆ ಕರೆದೊಯ್ದನು. ರಂಗವಲ್ಲಿಯಿಂದ ಚಿತ್ರವಿಚಿತ್ರವಾಗಿ ಹಸೆಗರೆದು ಆ ಮಧ್ಯೆ ಹೋಮ ಕುಂಡವನ್ನು ಸ್ಥಾಪಿಸಿದ್ದರು.

ಹೋಮಾದಿ ಶುಭ ಕಾರ್ಯಕ್ಕೆ ಬೇಕಾಗುವ ಸಮಸ್ತ ಪೂಜಾ ಸಾಮಗ್ರಿಗಳನ್ನು ಬಂಗಾರದ ತಟ್ಟೆಗಳಲ್ಲಿ ಅಣಿಗೊಳಿಸಿದ್ದರು.

ಸಕಾಲಕ್ಕೆ ಸರಿಯಾಗಿ ಪ್ರತಾಪಸಿಂಹನು ಪಟ್ಟಮಹಿಷಿ ಚಂದ್ರಕಾಂತಾದೇವಿ ಹಾಗೂ ರಾಜಕುಮಾರಿ ಲೀಲಾವತಿ ದೇವಿಯೊಡನೆ ದೇವಮಂದಿರಕ್ಕೆ ಆಗಮಿಸಿದರು.

ಹೋಮವೇದಿಕೆಯ ಮುಂದೆ ಹಾಕಲಾಗಿದ್ದ ರಾಜಪೀಠದಲ್ಲಿ ರಾಜದಂಪತಿಗಳು ಹಾಗೂ ರಾಜಕುಮಾರಿ ಉಪಸ್ಥಿತರಾದರು.

ಐದು ಜನ ಋತ್ವಿಕ ಬ್ರಾಹ್ಮಣರೊಡನೆ ಯಥಾವಿಧಿಯಾಗಿ ಯಜ್ಞಕುಂಡವನ್ನು ಪ್ರತಿಷ್ಠಾಪಿಸಿ ಆಜ್ಯಾಹುತಿಗಳನ್ನು ಮಾಡಿ ಪೂರ್ಣಾಹುತಿ ಕೊಟ್ಟು, ಮಂಗಳಾರತಿಯೊಂದಿಗೆ ಹೋಮ ಕಾರ್ಯ ಸಂಪೂರ್ಣಗೊಳಿಸಿದರು. ಋತ್ವಿಕ ಬ್ರಾಹ್ಮಣರನ್ನು ಯಥೇಚ್ಛವಾದ ದಾನ ಸುವರ್ಣದಾನಗಳಿಂದ ತೃಪ್ತಿ ಪಡಿಸಿದರು.

ಆ ಪ್ರಕಾರ ಅರಮನೆಯಲ್ಲಿ ಸಾಂಪ್ರದಾಯಿಕವಾಗಿ ನಡೆಯಬೇಕಾದ ಎಲ್ಲ ಶುಭ ಕಾರ್ಯಕ್ರಮಗಳನ್ನು ಸಾಂಗವಾಗಿ ನೆರವೇರಿಸಿದರು. ರಾಜ ಪುರೋಹಿತರು ನಂತರ ರಾಜದಂಪತಿಗಳಿಗೂ ರಾಜಕುಮಾರಿಗೂ ಆಶೀರ್ವಚನಗಳಿಂದ ಹಾರೈಸಿದರು.

ಇತ್ತ ಸ್ವಯಂವರ ಮಂಟಪದಲ್ಲಿ ಸಾಗರದೋಪಾದಿಯಲ್ಲಿ ಜನರು ಕಿಕ್ಕಿರಿದು ನೆರೆದಿದ್ದರು.

ರಾಜಕುಮಾರಿಯ ಸ್ವಯಂವರಕ್ಕಿಂತ ಮಿಗಿಲಾಗಿ ಜಟ್ಟಿ ಕಾಳಗ - ದ್ವಂದ್ವ ಯುದ್ಧ ನೋಡಬೇಕು. ಆ ಬಲಿಷ್ಠ ಶಕ್ತಿ ಪ್ರಯೋಗದಲ್ಲಿ ಯಾವ ರಾಜನು ಗೆಲ್ಲುತ್ತಾನೆ. ರಾಜಕುಮಾರಿ ಯಾವ ರಾಜನ ಕೈ ಹಿಡಿಯುತ್ತಾಳೆ ಎಂಬ ಕುತೂಹಲ ಎಲ್ಲರಲ್ಲೂ.

ಮಂಗಳವಾದ್ಯ ಮೊಳಗುತ್ತಿತ್ತು.

ವೇಳೆಗೆ ಸರಿಯಾಗಿ ಸಾಲು ಸಾಲಾಗಿ ಚಿನ್ನದ ರಥದಲ್ಲಿ ಆಗಮಿಸಿದ ದೇಶದೇಶಗಳಿಂದ ಆಗಮಿಸಿದ ರಾಜಕುಮಾರರು ಭವ್ಯಾಲಂಕೃತವಾಗಿದ್ದ 'ಸ್ವಯಂವರ' ಮಂಟಪವನ್ನು ಪ್ರವೇಶಿಸಿ ಮುಂಚೆಯೇ ಸಜ್ಜುಗೊಳಿಸಲಾಗಿದ್ದ ಯಥೋಚಿತವಾದ, (ರಾಜಾರ್ಹವಾದ) ರಾಜಪೀಠದಲ್ಲಿ ಸಾಲಾಗಿ ಕುಳಿತರು. ಅಲೌಕಿಕ ಸುಂದರಿಯಾದ, ಸರ್ವಾಲಂಕಾರ ಭೂಷಿತಳಾದ ರಾಜಕುಮಾರಿ ಲೀಲಾವತಿಯು ತನ್ನ ತಂದೆಯಾದ ಪ್ರತಾಪಸಿಂಹನೊಡನೆ ಮಂದಗಮನೆಯಾಗಿ ಸ್ವಯಂವರ ಮಂಟಪಕ್ಕೆ ಆಗಮಿಸಿದಳು.

ಆಗ ಪ್ರತಾಪಸಿಂಹರು ......... ಅಲ್ಲಿ ಒಂದೆಡೆ ಜಗಜಟ್ಟಿಯೊಡನೆ ಸ್ಪರ್ಧಿಸಲು ಸಾಲಾಗಿ ಉಪಸ್ಥಿತರಾಗಿದ್ದ ರಾಜಕುಮಾರರನ್ನು ಒಬ್ಬೊಬ್ಬರಾಗಿ ಪರಿಚಯ ಮಾಡಿಕೊಟ್ಟನು. ಅನಂತರ ವೇದಿಕೆಯನ್ನಲಂಕರಿಸಿ ಅಧ್ಯಕ್ಷಸ್ಥಾನದಲ್ಲಿ ಕುಳಿತಿದ್ದ ಮನ್ಮಥಸ್ವರೂಪನೆ ಆದ ಭೋಜರಾಜನನ್ನು ಸಹ ಪರಿಚಯ ಮಾಡಿಸಿಕೊಟ್ಟನು.

ಆಗ ಭೋಜರಾಜನ ಮಹಾತೇಜಸ್ಸನ್ನು ಕಂಡು ವಿಸ್ಮಿತಳಾಗಿ ಬಿಟ್ಟಳು. "ಆಹಾ! ಅದೆಂತಹ ಪುರುಷ ಸೌಂದರ್ಯ" ಎಂದು ಭೋಜರಾಜನ ರೂಪಕ್ಕೆ ಮನಸೋತು ನುಡಿದಿದ್ದಳು ಲೀಲಾವತಿಯು.

ರಾಜಕುಮಾರಿ ಲೀಲಾವತಿಯನ್ನು ನೋಡಿದ ಭೋಜರಾಜನಿಗೆ ಪರಮಾಶ್ಚರ್ಯವಾಯಿತು.

ಎಲ್ಲ ರಾಜಕುಮಾರರನ್ನು ವೀಕ್ಷಿಸಿ ಬಂದ ರಾಜಕುಮಾರಿ ಲೀಲಾವತಿದೇವಿಯು ತಾನು ಹಿಡಿದಿದ್ದ ವಿಜಯಮಾಲೆ ಯೊಂದಿಗೆ ಅರಮನೆ ಉಪ್ಪರಿಗೆಗೆ ಹೋಗಿ ಅಲ್ಲಿ ತನ್ನ ತಾಯಿಯ ಪಕ್ಕದಲ್ಲಿಯೇ ಕುಳಿತಳು.

ಜಗಜಟ್ಟಿ ದ್ವಂದ್ವ ಯುದ್ಧದಲ್ಲಿ ಯಾರು ಗೆಲ್ಲುತ್ತಾರೊ ಎಂಬ ಯಕ್ಷ ಪ್ರಶ್ನೆ ರಾಜಕುಮಾರಿ ಲೀಲಾವತಿಯ ಮನದಲ್ಲೂ ಕಾಡುತ್ತಿತ್ತು. ಅಷ್ಟು ರಾಜಕುಮಾರರಲ್ಲಿ ಅವಳಿಗೆ ಹಿಡಿಸಿದ್ದು ಭೋಜರಾಜನ ಪುರುಷ ಸೌಂದರ್ಯ. ಅದು ಭವಿಷ್ಯದ ಕೈಯಲ್ಲಿ ಅಡಗಿದೆಯೊ ಅಥವಾ ರಾಜಕುಮಾರರ ಶಕ್ತಿ ಪರೀಕ್ಷೆಯ ಜಾಣತನದಲ್ಲಿ ಅಡಗಿದೆಯೊ ಎಂಬ ಪ್ರಶ್ನೆ ಲೀಲಾವತಿಯನ್ನ ಕಾಡುತ್ತಿತ್ತು.

ಆಗ ಮಹಾರಾಜ ಪ್ರತಾಪಸಿಂಹನ ಆಪ್ತ ಮಂತ್ರಿಯು ಸ್ಪರ್ಧಿಗಳಾದ ರಾಜಕುಮಾರರನ್ನು ಉದ್ದೇಶಿಸಿ ಮಾತನಾಡುತ್ತ ಹಾಗೂ ಆ ಸ್ವಯಂವರ ಮಂಟಪದಲ್ಲಿ ತುಂಬಿ ನೆರೆದಿದ್ದ ಎಲ್ಲರಿಗೂ ಕೇಳುವಂತೆ ಹೇಳುತ್ತ "ಇಲ್ಲಿ ನೆರೆದಿರುವ ಮಹಾಜನಗಳೇ ಕೇಳಿರಿ..... ಜಗಜಟ್ಟಿಯೊಡನೆ ದ್ವಂದ್ವಯುದ್ಧದಲ್ಲಿ ಜಯಭೇರಿ ಸಾಧಿಸಲು ಬಂದಿರುವ ರಾಜಕುಮಾರರೆ ಪರಾಂಬರಿಸಿರಿ ಪರಾಂಬರಿಸಿರಿ...... ಈಗ ಈ ಸ್ವಯಂವರ ಮಂಟಪದಲ್ಲಿ ಅದೊ ಅಲ್ಲಿ ನಿರ್ಮಿಸಿರುವ ಜಟ್ಟಿ ಕಾಳಗ ವೇದಿಕೆಯಲ್ಲಿ ಜಗಜಟ್ಟಿಯಾದ ಜಗದ್ ವಿಖ್ಯಾತನಾದ ಈ ತನಕ ಸೋಲನ್ನೆ ಅರಿಯದ ರಾಣಾಸಿಂಗ ಬರುತ್ತಾನೆ. ಆ ಜಗಜಟ್ಟಿಯನ್ನು ಸೋಲಿಸಿದವರಿಗೆ ನಮ್ಮ ದೇಶದ ರಾಜಕುಮಾರಿಯಾದ, ಮಹಾರಾಜ ಪ್ರತಾಪಸಿಂಹರ ಏಕೈಕ ಪುತ್ರಿಯಾದ ತ್ರಿಲೋಕ ಸುಂದರಿಯಾದ ಲೀಲಾವತಿಯನ್ನು

ಕೊಟ್ಟು ವಿವಾಹ ಮಾಡಿಕೊಡುವುದು ಮಾತ್ರವೇ ಅಲ್ಲದೆ, ಈ ರಾಜ್ಯದಲ್ಲಿ ಅರ್ಧ ರಾಜ್ಯವನ್ನು ಸಹ ಕೊಡಲಾಗುವುದು" ಎಂದು ಘೋಷಿಸಿದನು.

ದ್ವಂದ್ವ ಯುದ್ಧದಲ್ಲಿ ಸ್ಪರ್ಧಿಸಲು ಬಂದಿದ್ದ ಎಲ್ಲ ರೂಪವಂತ ರಾಜಕುಮಾರರು ಜಗಜಟ್ಟಿ'ರಾಣಸಿಂಗ್' ನ ಬರುವಿಕೆಯನ್ನು ನಿರೀಕ್ಷಿಸುತ್ತಿದ್ದರು.

ವೇಳೆಗೆ ಸರಿಯಾಗಿ ಬೋನಿನಿಂದ ಬಿಟ್ಟ ಸಿಂಹದೋಪಾದಿಯಲ್ಲಿ ಸುಮಾರು ಎಂಟೂವರೆ ಅಡಿ ಎತ್ತರದ (ಆಗಿನ ಕಾಲದ ಬೆಳವಣಿಗೆಯಂತೆ) ಧೈತ್ಯಾಕಾರದ ಶರೀರವುಳ್ಳ ಅಜಾನುಬಾಹು ಜಗಜಟ್ಟಿಯಾದ ರಾಣಾಸಿಂಗ ಸುತ್ತಲು ಕಿಕ್ಕಿರಿದು ನೆರೆದಿದ್ದ ಜನಸಾಗರದ ಮಧ್ಯೆ ಕಾಣಿಸಿಕೊಂಡಾಗ ಎಲ್ಲರಿಗೂ ಎದೆ ಝಲ್ ಎಂದಿತ್ತು. ಎಷ್ಟೋ ಹುಡುಗರು ಆ ಧೈತ್ಯಾಕೃತಿಯನ್ನು ಕಂಡು ಬೆಚ್ಚಿ ಬಿದ್ದರು. ಇನ್ನೂ ಚಿಕ್ಕ ಪುಟ್ಟ ಮಕ್ಕಳು ಕಿಟಾರನೆ ಕಿರುಚುತ್ತಿದ್ದರು. ಮತ್ತೆ ಕೆಲವು ಪುಟ್ಟ ಹುಡುಗರು ಆ ಜಗಜಟ್ಟಿಯ ಕೆಂಪಾದ ಭಯಂಕರ ಕಣ್ಣುಗಳನ್ನು ನೋಡು ನೋಡುತ್ತಿದ್ದಂತೆ ಚಡ್ಡಿಗಳು ಒದ್ದೆಯಾಗಿದ್ದವು.

ಈ ರೀತಿಯಾದ ಭಯಂಕರ ಸ್ವರೂಪನಾದ ಜಗಜಟ್ಟಿಯನ್ನು ದ್ವಂದ್ವ ಯುದ್ಧದಲ್ಲಿ ಗೆಲ್ಲುವುದೆಂದರೆ ಅದು ತೀರ ಶೋಚನೀಯ ಎಂಬಂತಾಗಿತ್ತು. ಆ ಧೈತ್ಯಾಕಾರಿಯಾದ ಜಗಜಟ್ಟಿಯನ್ನು ಕಂಡು ಸ್ಪರ್ಧಿಗಳಾದ ರಾಜಕುಮಾರರು ಯಾರೊಬ್ಬರು ಮುಂದೆ ಬರದಾದರು.

"ಈ ಮಹಾಬಲಶಾಲಿಯಾದ ಜಗಜಟ್ಟಿಯೊಡನೆ ದ್ವಂದ್ವ ಯುದ್ಧ ಮಾಡಿ ಸೋಲನ್ನಪ್ಪಿ ಅಪಹಾಸ್ಯಕ್ಕೀಡಾಗುವುದಕ್ಕಿಂತ ಹಾಗೆಯೇ ಇರುವುದು ಲೇಸು. ಅವನೊಡನೆ ದ್ವಂದ್ವ ಯುದ್ಧ ಮಾಡುವುದು ಬೇಡ, ರಾಜಕುಮಾರಿಯನ್ನು ಮದುವೆಯಾಗುವುದು ಬೇಡ" ಎಂದು ನಿರ್ಧರಿಸಿಬಿಟ್ಟರು ಆ ರಾಜಕುಮಾರರು.

ರಾವಣ ಸೋದರನಾದ ಕುಂಭಕರ್ಣನಂತೆ ಅಗಾಧ ದೈತ್ಯ ಶರೀರ ಉಳ್ಳವನೇ ಆದ ಅತಿ ಭಯಂಕರ ಸ್ವರೂಪನೂ ಮಹಾ ಬಲಾಢ್ಯನೂ ಆದ ಜಗಜಟ್ಟಿ ಎಂದೇ ಲೋಕ ವಿಖ್ಯಾತನಾಗಿದ್ದ ಆ ರಾಣಾ ಸಿಂಗನೊಡನೆ ದ್ವಂದ್ವ ಯುದ್ಧ ಮಾಡಲು ಯಾರೊಬ್ಬ ರಾಜಕುಮಾರನು ಮುಂದೆ ಬರಲಿಲ್ಲ. ಅವನೊಡನೆ ದ್ವಂದ್ವಯುದ್ಧ ಮಾಡುವುದು ಹಾಗಿರಲಿ. ಅವನ ನೆರಳನ್ನು ಕಂಡರೆ ಭಯವಾದೀತು ಎಂಬ ಶಂಕೆ ಅಲ್ಲಿ ನೆರೆದಿದ್ದ ಎಲ್ಲರಲ್ಲೂ ಅವ್ಯಕ್ತ ಭೀತಿಗೆ ಎಡೆ ಮಾಡಿಕೊಟ್ಟಿತ್ತು. ಇದರಿಂದ ಆ ಅವಂತಿ ದೇಶದ ಮಹಾರಾಜ ಪ್ರತಾಪಸಿಂಹನಿಗೂ ಸಹ ಎಂದಿಲ್ಲದ ಕಳವಳವನ್ನುಂಟು ಮಾಡಿತ್ತು. "ಈ ಜಗಜಟ್ಟಿಯನ್ನು ಯಾರೊಬ್ಬರೂ ಗೆಲ್ಲದಿದ್ದರೆ ನನ್ನ ಏಕೈಕ ಪುತ್ರಿಯಾದ ಲೀಲಾವತಿಗೆ ಈ ವರ್ಷವೂ ಸಹ ವಿವಾಹ ಭಾಗ್ಯ ಇಲ್ಲವಾದಂತೆ" ಎಂದು ಮನದಲ್ಲೆ ಮಮ್ಮಲ ಮರುಗಿದನು.

ಸ್ವಯಂವರ ಮಂಟಪದಲ್ಲಿ ಸುತ್ತಲೂ ತುಂಬಿ ನೆರೆದಿದ್ದ ಎಲ್ಲ ಪ್ರಜೆಗಳು ವೀಕ್ಷಕರು ಸಹ ನಿರುತ್ಸಾಹಿಗಳಾದರು.

ಅದರಂತೆ ಸ್ವಯಂವರ ಮಂಟಪದ ಉಪ್ಪರಿಗೆಯಲ್ಲಿ ಜಾಲಾಂದರದ ಮೂಲಕ ವೀಕ್ಷಿಸುತ್ತಿದ್ದ ಲೀಲಾವತಿಯೂ ಸಹ ತೀರ ಕಂಗಾಲಾದಳು.

"ಹೇ ದೇವ ಈಶ್ವರ...... ಇಲ್ಲಿ ಕುಳಿತಿರುವ ದೇಶವನ್ನಾಳುವ ಒಬ್ಬರಾಜರಲ್ಲೂ ಸಹ ಆ ಜಗಜಟ್ಟಿಯನ್ನು ಸೋಲಿಸಲು ಯಾರೊಬ್ಬರಿಂದಲೂ ಸಾಧ್ಯವಾಗಲಿಲ್ಲವೆ?" ಎಂದು ಪ್ರಲಾಪಿಸಿ ದೇವರನ್ನು ಪ್ರಾರ್ಥಿಸಿದಳು ಲೀಲಾವತಿ.

ಉರಿಯುತ್ತಿರುವ ಬೆಂಕಿಗೆ ಮತ್ತಷ್ಟು ಆಜ್ಯ ಸುರಿದಂತೆ....... ಆ ಜಗಜಟ್ಟಿ ರಾಣಾಸಿಂಗನು ಸ್ವಯಂವರ ಮಂಟಪದ ಮಧ್ಯೆ ದ್ವಂದ್ವ ಯುದ್ಧ ಅಖಾಡದಲ್ಲಿ ತಾನೊಬ್ಬನೇ ಬರಿ ಕಾಚಧಾರಿಯಾಗಿ ತನ್ನ ಅಗಾಧವಾದ ದೈತ್ಯ ಶರೀರವನ್ನು ಪ್ರದರ್ಶಿಸುತ್ತ, ಒಮ್ಮೊಮ್ಮೆ ರಟ್ಟೆ ತಟ್ಟುತ್ತ, ಒಮ್ಮೊಮ್ಮೆ ತೊಡೆ ತಟ್ಟುತ್ತಾ, ಮತ್ತೊಮ್ಮೆ ತನ್ನ ಮೈಯನ್ನು ತಾನೆ ಹಿಸುಕಿಕೊಳ್ಳುತ್ತ ಎಲ್ಲರಿಗೂ ಕೇಳುವ ಹಾಗೆ ಭಯಂಕರವಾಗಿ ಕೂಗಿ ಅಟ್ಟಹಾಸದಿಂದ ಕೂಗಿ ಹೇಳುತ್ತ "ಮಹಾಜನಗಳೆ..... ಈ ಸ್ವಯಂವರ ಮಂಟಪದಲ್ಲಿ ಯಾರೊಬ್ಬರೂ ಸಹ ನನ್ನನ್ನು ಗೆಲ್ಲಲಾರರು....... ಈ ಸ್ವಯಂವರ ಮಂಟಪದಲ್ಲಿ ಮಾತ್ರವೇ ಅಲ್ಲ...... ಈ ಆರ್ಯಾವರ್ತದ ಚಪ್ಪನ್ನಾರು ದೇಶಗಳಲ್ಲೂ ಸಹ ನನ್ನನ್ನು ಜಯಿಸ ತಕ್ಕಂತ ಒಂದು ಗಂಡು ಇನ್ನೂ ಹುಟ್ಟಿಲ್ಲ - ಮುಂದೆಯೂ ಸಹ ಹುಟ್ಟುವುದಿಲ್ಲ" ಎಂದು ಅಟ್ಟಹಾಸದಿಂದ ಗಹಗಹಿಸಿ ನಗುತ್ತಾ ನುಡಿದ.

"ಹಾಗಾದರೆ ನನ್ನ ಗತಿ...... ಈ ಜಟ್ಟಿಯನ್ನು ಸೋಲಿಸದಿದ್ದರೆ ನನಗೂ ಸಹ ಈ ಜನ್ಮದಲ್ಲಿ ಮದುವೆ ಅನ್ನೋದು ಇಲ್ಲವೇ ಇಲ್ಲ" ಎಂದು ಮತ್ತಷ್ಟು ದುಃಖಿಯಾದಳು ರಾಜಕುಮಾರಿಯಾದ ಲೀಲಾವತಿ.

ಈ ಎಲ್ಲ ಸನ್ನಿವೇಶವನ್ನೇ ಎದುರು ನೋಡುತ್ತಿದ್ದ ಮಹಾಪರಾಕ್ರಮಿಯಾದ ಭೋಜರಾಜನು ಒಮ್ಮೆಲೇ ಹೂಂಕಾರ ಮಾಡುತ್ತ ಆ ಜಗಜಟ್ಟಿಯತ್ತ ಧಾವಿಸಿ ಬಂದನು. ಆಗ ಅಲ್ಲಿ ಸುತ್ತಲು ತುಂಬಿ ನೆರೆದಿದ್ದ ಎಲ್ಲರಲ್ಲೂ ಉಡುಗಿ ಹೋಗಿದ್ದ ಚೈತನ್ಯ ಮತ್ತೆ ಮೈಗೂಡಿಸಿಕೊಂಡಂತಾಗಿತ್ತು. ಎಲ್ಲರೂ ಹರ್ಷಚಿತ್ತರಾಗಿ ಭೋಜರಾಜನತ್ತ ದೃಷ್ಟಿಬೀರಿದ್ದರು. ಆ ರಾಣಾನ ಹತ್ತಿರ ಬಂದ ಭೋಜರಾಜನು ಅವನನ್ನು ಕುರಿತು ಹೇಳುತ್ತ "ಎಲೈ ಜಗಜಟ್ಟಿ..... ರಾಣಾ ಸಿಂಗನೇ, ದ್ವಂದ್ವ ಯುದ್ಧದಿಂದ ನಿನ್ನನ್ನು ಸೋಲಿಸಲು ಯಾರಿಂದಲೂ ಸಾಧ್ಯವಿಲ್ಲ ಎಂದು ಹೇಳಬೇಡಿ. ಈಗ ನಿಮ್ಮನ್ನು ಯಾವುದೇ ವಿದ್ಯೆಯಲ್ಲೂ ಸೋಲಿಸಲು ನಾನಿದ್ದೇನೆ" ಎಂದನು.

"ನನ್ನನ್ನು ಸೋಲಿಸಲು ನಿಮ್ಮಿಂದ ಖಂಡಿತ ಸಾಧ್ಯವಿಲ್ಲ ಭೋಜರಾಜ ಮಹಾರಾಜರೆ" ಎಂದು ಗರ್ವದಿಂದಲೇ ನುಡಿದ.

"ಸೋಲು ಗೆಲವು ಮುಂದಿನ ಪ್ರಶ್ನೆ. ಈಗ ನಾನು ದ್ವಂದ್ವ ಯುದ್ಧಕ್ಕೆ ಸಿದ್ಧನಾಗಿದ್ದೇನೆ" ಎಂದು ಭುಜ ತಟ್ಟುತ್ತ ನುಡಿದ ಭೋಜರಾಜ.

"ಸರಿ ನಿಮ್ಮ ದುರಾದೃಷ್ಟ"

"ದುರಾದೃಷ್ಟವೊ, ಅದೃಷ್ಟವೋ ಅದು ಯುದ್ಧ ಕಣವೇ ನಿರ್ಧರಿಸುತ್ತದೆ. ಸಿದ್ಧರಾಗಿ ರಾಣಸಿಂಗರೆ" ಎನ್ನುತ್ತ ತಾನು ಸಹ ತನ್ನ ವಸ್ತ್ರಗಳನ್ನು ಕಳಚಿ ಜಗಜಟ್ಟಿ ನಿಂತಿದ್ದ ದ್ವಂದ್ವಯುದ್ಧ ಅಖಾಡಕ್ಕೆ ಧುಮುಕಿಯೇ ಬಿಟ್ಟ.

ಆಗ ಭೋಜರಾಜನು ಯುದ್ಧ ಸಂಪ್ರದಾಯದಂತೆ ಒಮ್ಮೆ ನೆಲ ಮುಟ್ಟಿ ನಮಸ್ಕರಿಸಿದ. ನಂತರ ತನ್ನ ಆರಾಧ್ಯದೇವರೇ ಆದ ಶಿವನನ್ನು ವಿಷ್ಣುವನ್ನು ಮನದಲ್ಲಿ ನೆನೆದು ಭಕ್ತಿಯಿಂದ ಪ್ರಾರ್ಥಿಸಿದ.

"ನಾನು ಸಿದ್ಧ" ಎಂದ ಭೋಜರಾಜ.

"ನಾನೂ ಸಿದ್ಧ" ಎಂದ ರಾಣಾ.

ಆಗ ಆ ಇಬ್ಬರೂ ಆನೆಯಂತೆ ಮುನ್ನುಗ್ಗಿ ಬಂದರು.

ಆಗ ಅವರಿಬ್ಬರು ಯುದ್ಧ ಸಂಪ್ರದಾಯಗಂತೆ ಮಾತನಾಡಿಕೊಳ್ಳುತ್ತ ಇಬ್ಬರೂ ತಮ್ಮ ತಮ್ಮ ಕೈಗಳನ್ನು ಪರಸ್ಪರ ಹಿಡಿದುಕೊಂಡು "ಈಗ ನಮ್ಮಿಬ್ಬರಲ್ಲಿ ಯಾವ ದ್ವೇಷ ಅಸೂಯೆಯೂ ಇಲ್ಲ. ದ್ವಂದ್ವ ಯುದ್ಧವೆಂದರೆ ಶಕ್ತಿ ಪರೀಕ್ಷೆ ಮಾತ್ರ" ಎಂದು ಇಬ್ಬರೂ ಹೇಳಿಕೊಂಡರು.

ಆಗ ಭೋಜರಾಜನು "ರಾಣಾರೆ ಮೊದಲು ನಿಮ್ಮದೆ ಶಕ್ತಿ ಪರೀಕ್ಷೆಯಾಗಲಿ" ಎಂದ.

ಆಗ ರಾಣಾರು ಭೋಜರಾಜನ ಬಲ ಹಸ್ತವನ್ನು ಹಿಡಿದು ತನ್ನ ಹಸ್ತದಿಂದ ಬಲ ಪ್ರಯೋಗ ಮಾಡಿ ಅದುಮಿದ..... ಎಷ್ಟೇ ಶಕ್ತಿ ಪ್ರಯೋಗಿಸಿದರೂ ಸಹ ಭೋಜರಾಜನ ಹಸ್ತದ ಒಂದು ಬೆರಳನ್ನು ಬಗ್ಗಿಸಲಾಗಲಿಲ್ಲ. ಅದಕ್ಕೆ ಬದಲಾಗಿ ಭೋಜರಾಜನ ಹಸ್ತವನ್ನು ಅದುಮಲು ಹೋಗಿ ಕೈ ಸೋತು ನೀರಾಗಿತ್ತು. ಮೊದಲನೆ ಪರೀಕ್ಷೆಯಲ್ಲೇ ಜಗಜಟ್ಟಿಗೆ ಮುಖಭಂಗವಾಗಿತ್ತು.

ಈಗ ಭೋಜರಾಜನ ಸರದಿ ಬಂತು. ಭೋಜನು ಜಗಜಟ್ಟಿಯ ಹಸ್ತವನ್ನು ಹಿಡಿದು ಬಲ ಪ್ರಯೋಗಿಸಿದ.... ಆ ಬಲ ಪ್ರಯೋಗಕ್ಕೆ ಜಗಜಟ್ಟಿಯ ಹಸ್ತ ದೊಡ್ಡ ಬಂಡೆಯ ಅಡಿಯಲ್ಲಿ ಸಿಕ್ಕಿಕೊಂಡ ಕಿರುಪ್ರಾಣಿಯಂತೆ "ಅಯ್ಯೋ ಅಯ್ಯೊ ನನ್ನ ಕೈಯಲ್ಲಿ ತಡೆಯೋದಿಕ್ಕೆ ಆಗ್ತ ಇಲ್ಲ ಬಿಡಿ. ನಿಮ್ಮ ಬಲಪ್ರಯೋಗ ಸಾಕುಮಾಡಿ" ಎಂದು ಚೀರಿ ನುಡಿದ.

ಆಗ ಭೋಜರಾಜನು ತನ್ನ ಹಸ್ತಬಲವನ್ನು ಹಗುರಗೊಳಿಸಿದ.

ಕೇವಲ ಹಸ್ತದ ಬಲ ಪರೀಕ್ಷೆಯಲ್ಲಿಯೇ ಅರ್ಧ ಶಕ್ತಿ ಉಡುಗಿ ಹೋಗಿತ್ತು ಆ ಜಗಜಟ್ಟಿಗೆ. ಮತ್ತೆ ಚೇತರಿಸಿಕೊಂಡ ಆ ಜಗಜಟ್ಟಿ.....

"ಸರಿ, ಈಗ ನನ್ನ ಪ್ರಯೋಗ ತೋಳಿನ ಪರೀಕ್ಷೆ" ಎಂದ

"ನಡೆಯಲಿ" ಎಂದ ಭೋಜರಾಜ.

ಆ ಜಟ್ಟಿಯಾದರೋ ತನ್ನ ತೋಳಿನಿಂದ ಭೋಜರಾಜನ ತೋಳನ್ನು ಸಿಕ್ಕಿಸಿಕೊಂಡು ತಿರುಚಲು ಪ್ರಯತ್ನ ಪಟ್ಟ - ಆದರೆ ಕಬ್ಬಿಣವನ್ನಾದರೂ ಬಗ್ಗಿಸಬಹುದು. ಆದರೆ ಭೋಜನ ತೋಳು ಮಾತ್ರ ಕಿಂಚಿತ್ ಅದುಮಿದ ಗುರುತಾಗಲಿ, ಇರುವೆ ಕಡಿದಷ್ಟು ನೋವಾಗಲಿ ಇಲ್ಲವಾಗಿತ್ತು.

ಈಗ ಭೋಜರಾಜನ ಸರದಿ. ತನ್ನ ಬಲಿಷ್ಠ ತೋಳಿನಿಂದ ಅವನ ತೋಳನ್ನು ಸಿಕ್ಕಿಸಿಕೊಂಡು ಒಂದಾವರ್ತಿ ತಿರುಚಿದ ಆ ತಿರುಚಿದ ರಭಸಕ್ಕೆ ಜಟ್ಟಿಮೂರು ಪ್ರದಕ್ಷಿಣೆ ಹಾಕಿಬಿಟ್ಟಿದ್ದ.

ಆಗ ಜಟ್ಟಿ ತಿಳಿದುಕೊಂಡ 'ಓ ಈ ಜಗತ್ತಿನಲ್ಲಿ ನಾನೊಬ್ಬನೆ ಬಲಶಾಲಿ, ನನ್ನನ್ನು ಬಿಟ್ಟರೆ ಯಾರೂ ಇಲ್ಲ ಎಂದು ತಿಳಿದಿದ್ದೆ. ಆ ಮಹಾನುಭಾವ ಭೋಜನ ಮುಂದೆ ನಾನೊಂದು ಕಿರು ಮೀನಿನಂತೆ " ಎಂದು ತನ್ನಲ್ಲಿ ತಾನೇ ಮಾತನಾಡಿಕೊಂಡ ಆ ಜಗಜಟ್ಟಿ.

ನಂತರ ಮೂರನೆ ಪರೀಕ್ಷೆ - ಒಬ್ಬರಿಗೊಬ್ಬರು ತಲೆ - ತಲೆಯನ್ನು ಹಿಡಿದು ಒಬ್ಬರಿಗೊಬ್ಬರು ಚಚ್ಚಿಕೊಳ್ಳುವ ಶಕ್ತಿ ಪರೀಕ್ಷೆ.

ಮೊದಲ ಪರೀಕ್ಷೆಯನ್ನ ಜಗಜಟ್ಟಿಗೆ ಬಿಟ್ಟು ಬಿಟ್ಟಿದ್ದ ಭೋಜರಾಜ.

ಆಗ ಜಗಜಟ್ಟಿಯು ತನ್ನಲ್ಲಿ ಮಾತನಾಡಿಕೊಳ್ಳುತ್ತಾ "ಈಗ ಈ ಪರೀಕ್ಷೆಯಲ್ಲಿ ಈ ಭೋಜರಾಜರ ತಲೆಯನ್ನು ಅಪ್ಪಚ್ಚಿ ಮಾಡಿಯೇ ಬಿಡಬೇಕು" ಎಂದು ಕ್ರೋಧದಿಂದ ನುಡಿದುಕೊಂಡು ತನ್ನ ಬಲವಾದ ಕೈಗಳಿಂದ ಭೋಜರಾಜನ ರುಂಡವನ್ನ ಹಿಡಿದು ತನ್ನ ತಲೆಯಿಂದ ತಲೆ - ತಲೆಗೂ ಹಣೆ - ಹಣೆಗೂ ಅಪ್ಪಳಿಸಿ ಹೊಡೆಯುವ ಶಕ್ತಿ ಪರೀಕ್ಷೆ. ಅದರಂತೆ ಭೋಜರಾಜನ ಕಪೋಲಕ್ಕೆ ಕೈ ಹಾಕಿ ತನ್ನ ತಲೆಯಿಂದ ಡಿಕ್ಕಿ ಹೊಡೆಸಲು ಪ್ರಯತ್ನ ಪಟ್ಟ. ಆದರೆ ಭೋಜರಾಜನೆ ತನ್ನ ತಲೆಯಿಂದ ಅವನಿಗೆ ಬಲವಾಗಿ ಡಿಕ್ಕಿ ಹೊಡಿಸಿದ - ಇದರಿಂದ ಒಂದೇ ಹೊಡೆತಕ್ಕೆ ಜಟ್ಟಿಯ ತಲೆ ತತ್ತರಿಸಿ ಬಿಟ್ಟಿತ್ತು. ಮತ್ತೊಂದು ಹೊಡೆತಕ್ಕೆ ಮಿದುಳೇ ಕಳಚಿ ಬಿದ್ದಂತಾಯಿತು. "ಅಯ್ಯೊ... ' ಎಂದು ಅರಚಿದನು.

"ಏಕೆ ಜಗಜಟ್ಟಿಗಳೇ, ನೀವೇ ಹೇಳಿದಿರಲ್ಲ, ಈ ಜಗತ್ತಿನಲ್ಲಿ ನನ್ನನ್ನು ಗೆಲ್ಲಲು ಯಾರಿಂದಲೂ ಸಾಧ್ಯವಿಲ್ಲ ಎಂದು" ಎಂದು ಭೋಜ ಮೂದಲಿಸಿದ.

"ಅಯ್ಯೊ, ನನ್ನನ್ನು ಹೀಯಾಳಿಸಬೇಡಿ. ಇನ್ನು ನಿಮ್ಮ ಒಂದೇ ಒಂದು ಹೊಡೆತಕ್ಕೆ ನನ್ನ ತಲೆಯ ಮೆದುಳು ಪೂರ್ತಿ ಹೊರಕ್ಕೆ ಬಂದು ಬಿಡುತ್ತದೆ. ನಿಮ್ಮ ಶಕ್ತಿಯ ಮುಂದೆ ನನ್ನ ಶಕ್ತಿ ಏನೇನು ಸಾಲದು. ನಾನು ಸೋತೆ, ನಾನು ಸೋತೆ, ನನ್ನನ್ನು ಬಿಟ್ಟು ಬಿಡಿ" ಎಂದು ಅಂಗಲಾಚಿ ಬೇಡಿದ.

"ಬೇಡ ಜಗಜಟ್ಟೀ..... ನಿಮಗೆ ಕೊಂಚ ವಿರಾಮ ಕೊಡುತ್ತೇನೆ. ನೀವು ನನ್ನನ್ನು ಗೆಲ್ಲುವ ಹಾಗಿದ್ದರೆ ಗೆಲ್ಲಿರಿ" ಎಂದ ಭೋಜರಾಜ.

"ಇಲ್ಲ, ಮಹಾರಾಜರೇ. ಖಂಡಿತ ನಿಮ್ಮನ್ನು ಗೆಲ್ಲಲು ನನಗೆ ಸಾಧ್ಯವೇ ಇಲ್ಲ. ನನ್ನ ಎಲ್ಲ ಬಿರುದುಗಳನ್ನು ನಿಮ್ಮ ಪಾದದಡಿಯಲ್ಲಿ ಅರ್ಪಿಸಿ ಬಿಡುತ್ತೇನೆ. ನಾನು ತಮ್ಮಲ್ಲಿ ಆಶ್ರಯ ಬೇಡುತ್ತೇನೆ. ಪ್ರಾಣ ಬಿಕ್ಷೆ ಬೇಡುತ್ತೇನೆ" ಎಂದು ಮಮ್ಮಲ ಮರುಗಿದ.

ಆಗ ಭೋಜರಾಜನಿಗೆ ಮರುಕ ಹುಟ್ಟಿ "ಸರಿ ಈ ಸ್ವಯಂವರ ಮಂಟಪದಲ್ಲಿ ಎಲ್ಲರಿಗೂ ಕೇಳುವ ಹಾಗೆ ಗಟ್ಟಿಯಾಗಿ ಹೇಳಬೇಕು. "ನಾನು ಭೋಜರಾಜರಿಗೆ ಸೋತಿರುತ್ತೇನೆ ಎಂದು" ಎಂದ.

ಆಗ ಜಗಜಟ್ಟಿಯು ಎಲ್ಲ ಪ್ರೇಕ್ಷಕರಿಗೂ ಕೇಳುವ ಹಾಗೆ ಕೂಗಿ ಹೇಳುತ್ತಾ,

"ನಾನು ಈ ಮಹಾನುಭಾವನಾದ ಭೋಜರಾಜರಿಗೆ ಸಂಪೂರ್ಣ ಸೋತಿದ್ದೇನೆ. ಇನ್ನು ಮುಂದೆ ಜಗಜಟ್ಟಿ ನಾನಲ್ಲ.... ಜಗಜಟ್ಟಿ ಎಂದರೆ ಇನ್ನು ಮುಂದೆ ಭೋಜರಾಜರು" ಎಂದು ಎಲ್ಲರಿಗೂ ಕೇಳುವ ಹಾಗೆ ನುಡಿದ.

ಅಷ್ಟಕ್ಕೆ ಜಟ್ಟಿ - ಭೋಜರ ದ್ವಂದ್ವ ಯುದ್ಧ ಮುಕ್ತಾಯವಾಗಿಬಿಟ್ಟಿತು. ಇದರಿಂದ ಲೀಲಾವತಿಗೂ ಹಾಗೂ ರಾಣಾ ಪ್ರತಾಪರಿಗೂ ಮಹದಾನಂದವಾಯಿತು.

ಆಗ ತನ್ನ ತಂದೆಯೊಡನೆ ಆಗಮಿಸಿ ಬಂದ ರಾಜಕುಮಾರಿ ಲೀಲಾವತಿಯು ಭೋಜರಾಜನ ಕೊರಳಿಗೆ ವಿಜಯಮಾಲೆಯನ್ನು ಹಾಕಿದಳು.

# ಭೋಜರಾಜನ ವಿವಾಹ

ಅವಂತಿ ದೇಶದ ಮಹಾರಾಜ ಪ್ರತಾಪಸಿಂಹನಿಗೆ ಭೋಜರಾಜನಂತಹ ಕೀರ್ತಿವಂತ ರಾಜನನ್ನು ಅಳಿಯನನ್ನಾಗಿ ಪಡೆದದ್ದು..... ಜನಕ ಮಹಾರಾಜನಿಗೆ ಶ್ರೀರಾಮಚಂದ್ರ ದೇವನು ಸಿಕ್ಕಿದಷ್ಟು ಪರಮಾನಂದವಾಯಿತು.

ಅದರಂತೆ ಅಲೌಕಿಕ ಸುರಸುಂದರಿಯಾದ ರಾಜಪುತ್ರಿ ಲೀಲಾವತಿಯು ಭೋಜರಾಜನು ಪತಿಯಾಗಿ ದೊರಕಿದ್ದುದು ಸಾವಿರ ಜನ್ಮಗಳ ತಪಸ್ಸಿನ ಪುಣ್ಯಫಲ ಎಂದು ಸಂತೋಷ ಚಿತ್ತಳಾದಳು.

ಬಹುಧರ್ಮಿಷ್ಟನಾದ ಪ್ರಜೇಶನಾದ ಪ್ರತಾಪಸಿಂಹನು..... ಇಡಿ ಭರತಖಂಡದಲ್ಲಿಯೇ ಬೇರಾವ ರಾಜ-ಮಹಾರಾಜರುಗಳು ಸಹ ಮಾಡಿರದ ರೀತಿಯಲ್ಲಿ ಅಪೂರ್ವ ವೈಭವದಿಂದ ಭೋಜರಾಜ ಲೀಲಾವತಿಯರ ವಿವಾಹ ಮಹೋತ್ಸವವನ್ನು ನೆರವೇರಿಸಬೇಕೆಂದು ಸಂಕಲ್ಪಿಸಿದನು.

ಅದರಂತೆ ಅಂದು....., ಬಹು ಸುಂದರವಾದ ರಾಜೋಧ್ಯಾನವನ್ನು - ಸುಗಂದ ಪುಷ್ಪಗಳಿಂದಲೂ ರಮಣೀಯವಾದ ಪುಷ್ಕರಣಿಗಳಿಂದಲೂ, ರಮ್ಯ ಮನೋಹರವಾದ ಸರೋವರಗಳಿಂದಲೂ, ಅಪೂರ್ವ ಕಲಾತ್ಮಕ ವಿನ್ಯಾಸಗಳಿಂದ ಕೂಡಿದ ದೊಡ್ಡ ದೊಡ್ಡ ಉಪ್ಪರಿಗೆ ಮಹಲ್ಲು - ಮನೆಗಳಿಂದಲೂ ಶೃಂಗರಿಸಿದ್ದನು. ವಿಶಾಲವಾದ ರಸ್ತೆಗಳಿಂದಲೂ, ಶ್ರೀ ಕೃಷ್ಣನ ದ್ವಾರಕಾ ನಗರಿಯಂತೆ ಕಂಗೊಳಿಸುತ್ತಿದ್ದ ಆ ಅವಂತಿ ಪಟ್ಟಣದ ಎಲ್ಲಾ ಬೀದಿ - ರಾಜ ಬೀದಿಗಳಲ್ಲೂ ಅಲ್ಲಲ್ಲೆ ಹಸಿರು ಚಪ್ಪರ ಗೊನೆಬಾಳೆ ತಳಿರುತೋರಣ, ಬಗೆ ಬಗೆಯ ಬಣ್ಣ ಬಣ್ಣದ ಸಾಲು ಬಾವುಟಗಳಿಂದಲೂ ಸುಗಂಧ ಪುಷ್ಪಗುಚ್ಚ - ಪುಷ್ಪಗಳಿಂದಲೂ ಭವ್ಯವಾಗಿ ಅಲಂಕರಿಸಿದ್ದರು.

ರಾಜಪುತ್ರಿ ೀಲಾವತಿಯ ವಿವಾಹದ ಅಂಗವಾಗಿ ಪಟ್ಟಣಿಗರ ಆನಂದಕ್ಕಂತೂ ಪಾರವೇ ಇಲ್ಲದ [illegible]ತ್ತು.

ತಮ್ಮ ತಮ್ಮ ಅಂತಸ್ತಿಗೆ ತಕ್ಕಂತೆ ಉತ್ತಮರೀತಿಯ ದಿವ್ಯ ವಸ್ತ್ರಾಭರಣಗಳನ್ನು ಧರಿಸಿಕೊಂಡು ಅತಿಶಯವಾದ ಸಂತೋಷದಿಂದ ಕೂಡಿದವರಾಗಿ ಸಮುದ್ರದೋಪಾದಿಯಲ್ಲಿ ಅರಮನೆಗೆ ಬರುತ್ತಿದ್ದರು.

ಅರಮನೆಯ ಆ ಕಲ್ಯಾಣ ಮಂಟಪವು ಸಹ ಅತ್ಯಂತ ವೈಭವದಿಂದ ಕೂಡಿತ್ತು. ಬಹು ಆಕರ್ಷಣೀಯವಾದ ಹಸಿರು ಚಪ್ಪರವನ್ನು ಹಾಕಿಸಿ ಅದರ ಎಂಟು ಕಂಬಗಳಿಗೂ ಎತ್ತರವಾಗಿ ಕಾಣುವಹಾಗೆ ಗೊನೆಬಾಳೆ ಕಂಬಗಳನ್ನು ಕಟ್ಟಿಸಿ, ತಳಿರುತೋರಣಗಳಿಂದ ಅಲಂಕರಿಸಿದ್ದರು. ಅಷ್ಟೇ ಅಲ್ಲದೆ ಬಗೆಬಗೆಯ ಬಣ್ಣಬಣ್ಣದ ಸಾಲು ಬಾವುಟಗಳಿಂದಲೂ, ಸುಗಂಧಿಕ ಪುಷ್ಪಹಾರ- ಪುಷ್ಪಗುಚ್ಛಗಳಿಂದ ಶೃಂಗರಿಸಿದ್ದರು.

ಕಲ್ಯಾಣ ಮಂದಿರದ ಒಳಭಾಗದ ಸುತ್ತಲೂ ವಜ್ರವೈಢೂರ್ಯಗಳಿಂದ ಕೂಡಿದ ಮುತ್ತಿನ ಹಾರಗಳನ್ನು ಪುಷ್ಪಗುಚ್ಛದೋಪಾದಿಯಲ್ಲಿ ಕಟ್ಟಿಸಿದ್ದರು. ಅವುಗಳಾದರೋ

ಗಗನಮಂಡಲದಲ್ಲಿ ಥಳಥಳನೆ ಹೊಳೆವ ನಕ್ಷತ್ರಗಳಂತೆ ಕಾಂತಿಯುಕ್ತವಾಗಿ ಶೋಭಿಸುತ್ತಿದ್ದವು. ಚಂದನ, ಅಗರು, ಸಾಂಬ್ರಾಣಿ, ಮಿಶ್ರಿತವಾದ ಪರಿಮಳ ಸುಗಂಧವು ಕಲ್ಯಾಣ ಮಂದಿರ ಸುತ್ತಲು ಹೊರಸೂಸುತ್ತಾ ಆಹ್ಲಾದಕರ ಸಂತೋಷವನ್ನುಂಟು ಮಾಡುತ್ತಿತ್ತು.

ಕಲ್ಯಾಣ ಮಂಟಪಕ್ಕೆ ಆಹ್ವಾನಿತರು ಸಾಗರದೋಪಾದಿಯಲ್ಲಿ ಧಾವಿಸಿಬರುತ್ತಿದ್ದರು. ಸಾವಿರಾರು ಸೇವಕ - ಸೇವಕಿಯರು ಬರುತ್ತಿದ್ದ ಜನಸ್ತೋಮವನ್ನು ಬಹು ಗೌರವದಿಂದ ಆಹ್ವಾನಿಸುತ್ತಾ ಉಚಿತಾಸನಗಳಲ್ಲಿ ಕುಳಿತುಕೊಳ್ಳುವಂತೆ ಸೂಚಿಸಿ ಹೇಳುತ್ತಿದ್ದರು.

ನಾನಾ ದೇಶದ ರಾಜಮಹಾರಾಜರುಗಳು ಸಹ ಸಕಾಲಕ್ಕೆ ಸರಿಯಾಗಿ ಆಗಮಿಸಿದ್ದರು. ಅವರೆಲ್ಲರೂ ರಾಜ ವೈಭಕ್ಕೆತಕ್ಕಂತೆ ದಿವ್ಯ ವಸ್ತ್ರಾಭರಣಗಳಿಂದ ಶೋಭಿತರಾಗಿ ಗಂಧರ್ವ ಪುರುಷರಂತೆ ಕಾಣುತ್ತಿದ್ದರು. ಎಲ್ಲರೂ ಯಥೋಚಿತವಾದ ರಾಜ ಪೀಠಗಳಲ್ಲಿ ಉಪಸ್ಥಿತರಾಗಿದ್ದರು.

ಜನಸಾಗರವು ದೊಂಬಿಯಾಗದಂತೆ ಸಮವಸ್ತ್ರಧಾರಿ ರಾಜ ಭಟರುಗಳು ಅಲ್ಲಲ್ಲೆ ನಿಂತು ಶಾಂತಿಶಿಸ್ತನ್ನು ಕಾಯ್ದಿರಿಸುವುದರಲ್ಲಿ ಸಫಲರಾಗಿದ್ದರು. ಎಲ್ಲೆಲ್ಲೂ ಸಂತೋಷ - ಸಂಭ್ರಮ ಸಡಗರ ಹೇಳತೀರದಷ್ಟು ಅವರ್ಣನೀಯವಾಗಿತ್ತು. ಮಂಗಳವಾದ್ಯಗಳು ಕಲ್ಯಾಣ ಮಂದಿರದ ಸುತ್ತಲೂ ಮೊಳಗುತ್ತಿದ್ದವು.

ವೇದವೇದಾಂಗ ಪಾರಂಗತರಾದ ರಾಜಪುರೋಹಿತರು ನೂರಾರು ಋತ್ವಿಕ್ ಬ್ರಾಹ್ಮಣರ ವೇದಘೋಷದೊಂದಿಗೆ ವಿಧಿಪೂರ್ವಕವಾಗಿ ಅಗ್ನಿಯನ್ನು ಆಹ್ವಾನಿಸಿ ಅಗ್ನಿಕುಂಡದಲ್ಲಿ ಪ್ರತಿಷ್ಠಾಪಿಸಿದ್ದರು.

ಆ ಮೊದಲೆ ಭೋಜರಾಜನು ಮದುಮಗನಾಗಿ ದಿವ್ಯ ವಸ್ತ್ರಾಭರಣಗಳಿಂದ ವಿಶೇಷವಾಗಿ ಅಲಂಕಾರ ಮಾಡಿಕೊಂಡು ಕಲ್ಯಾಣ ಮಂಟಪದ ವೇದಿಕೆಯಲ್ಲಿ ಉಪಸ್ಥಿತನಾಗಿದ್ದನು. ಆಗ ಸಾಕ್ಷಾತ್ ಸೂರ್ಯದೇವನಂತೆಯೇ ಅತಿಶಯವಾಗಿ ಶೋಭಿಸುತ್ತಿದ್ದನು.

ಯಥಾವಿಧಿಯಂತೆ ರಾಜಪುರೋಹಿತರು ಭೋಜನಿಗೆ ಮಂತ್ರ ಪುರಸ್ಕಾರಗಳನ್ನು ಹೇಳುತ್ತಿದ್ದರು. ಭೋಜರಾಜರೂ ಪುರೋಹಿತರು ಹೇಳಿಕೊಡುತ್ತಿದ್ದ ಸುಶಾಸ್ತ್ರೀಯವಾದ ಮಂತ್ರವನ್ನು ಸ್ವಚ್ಛವಾಗಿ ಉಚ್ಚರಿಸಿ ಹೇಳುತ್ತಿದ್ದನು.

ಮುಹೂರ್ತದ ವೇಳೆ ಸಮೀಪಿಸುತ್ತಿದ್ದಂತೆ ಸರ್ವಾಲಂಕಾರ ಭೂಷಿತಳಾದ, ಜಗದೇಕ ಸುಂದರಿಯೋ ಎಂಬಂತೆ ಅತಿಶಯವಾಗಿ ಕಾಣುತ್ತಿದ್ದ ಶುಭಾಂಗಿಯಾಗಿ ಶೋಭಿಸುತ್ತಿದ್ದ ಮದುಮಗಳಾದ ರಾಜಪುತ್ರಿ ಲೀಲಾವತಿಯನ್ನು ಮದುವೆಮಂಟಪಕ್ಕೆ ಕರೆತಂದರು.

ತನ್ನ ರೂಪಕ್ಕೆ ಒಪ್ಪುವ ರೀತಿಯಲ್ಲಿ ಚಿನ್ನದ ದಾರದಿಂದಲೇ ತಯಾರಿಸಲಾಗಿದ್ದ ದಿವ್ಯ ಪೀತಾಂಬರವನ್ನು ತೊಟ್ಟು, ಸರ್ವಾಭರಣ ಭೂಷಿತಳಾಗಿ ಕೈಯಲ್ಲಿ ಸುವರ್ಣಮಯವಾದ ಪುಷ್ಪ ಮಾಲೆಯನ್ನು ಹಿಡಿದು, ಸೋದರ ಮಾವನೊಂದಿಗೆ

ಬರುತ್ತಿದ್ದ ರಾಜಕುಮಾರಿ ಲೀಲಾವತಿಯೂ ಆಗ ಸಾಕ್ಷಾತ್ ಮಹಾಲಕ್ಷ್ಮೀದೇವಿಯಂತೆ ಅತಿಶಯ ಕಾಂತಿಯಿಂದ ಶೋಭಿಸುತ್ತಿದ್ದಳು.

ಭೋಜರಾಜನಿಗೆ ತಕ್ಕ ಅನುರೂಪಳು ಇವಳು ಎಂದು ಅಲ್ಲಿ ನೆರೆದಿದ್ದ ಎಲ್ಲರೂ ಮುಕ್ತಕಂಠದಿಂದ ಗುಣಗಾನ ಮಾಡುತ್ತಿದ್ದರು.

ಪುರೋಹಿತರ ಆದೇಶದಂತೆ ಭೋಜರಾಜನ ಎದುರಾಗಿ 'ಅಂತರ ಪಟ' ಹಿಡಿದ್ದರು. ಮಂಗಳವಾದ್ಯ ಮೊಳಗುತ್ತಿದ್ದವು.

ನೂರೊಂದು ವಿಪ್ರರಿಂದ ವೇದಘೋಷವು ಏಕಕಂಠದಿಂದ ಧ್ವನಿಗೂಡಿ ಮೊಳಗುತ್ತಿದ್ದವು.

ಮುಹೂರ್ತದವೇಳೆ ಸಮೀಪಿಸುತ್ತಿದ್ದಂತೆ.

"ಸುಲಗ್ನೋಸಾವಧಾನ ಸುಮುಹೊರ್ತಾ ಸಾವುಧಾನ"

"ಲಕ್ಷ್ಮೀನಾರಾಯಣ ಸ್ವಾವಧಾನ"

-ಎಂದು ಪುರೋಹಿತರು ಬ್ರಾಹ್ಮಣರೂ ಕೂಡಿ ಶಾಂತಿ ವಚನ ಮಾಡುತ್ತಿರಲು ಕಲ್ಯಾಣ ಮಂಟಪದ ಉಪ್ಪರಿಗೆ ಮೇಲಿಂದ ಸಹಸ್ರಾರು ರಾಜಮಹಿಳೆಯರು, ರಾಜಪರಿವಾರದವರು ಪ್ರಜೆಗಳು ಎಲ್ಲರಾದಿಯಾಗಿ ಹೂಮಳೆಗರೆದರು.

ಢಮ ಢಮ ಢಮ ಢಮ ಢಮ ಢಮ ಢಮ ಮಧುರನಾದದ ಮಂಗಳವಾದ್ಯ ಏಕಕಾಲದಲ್ಲಿಯೇ ಧ್ವನಿಮಾಡಿದವು. ನೂರಾರು ವಿಪ್ರರು ಸುಶ್ರಾವ್ಯವಾಗಿ ಪಠಿಸುತ್ತಿದ್ದ ವೇದ ಘೋಷ ಮಂತ್ರ. ಅಲ್ಲಿ ನೆರೆದಿದ್ದ ಎಲ್ಲರಿಗೂ ಕರ್ಣಾನಂದವನ್ನುಂಟು ಮಾಡುತ್ತಿತ್ತು. ನವದಂಪತಿಗಳಾಗಿರುವ ಭೋಜರಾಜ - ಲೀಲಾವತಿಯರಿಗೆ ಜೀರಿಗೆ ಬೆಲ್ಲ ಹಾಕಿದರು. ಲೀಲಾವತಿಯೋ ಮೊದಲು ಹಾಕಿದ್ದಳು. ಮಧುಮಗ - ಮಧುಮಗಳ ಮಧ್ಯೆ (ಒಬ್ಬರಿಗೊಬ್ಬರು ಕಾಣದರೀತಿಯಲ್ಲಿ ಹಿಡಿದಿದ್ದ) ಇದ್ದ 'ಅಂತರಪಟ' ಅತ್ತ ಸರಿಯಿತು.

ಆಗ ಪುರೋಹಿತರ ಆದೇಶದಂತೆ ರಾಜಕುಮಾರಿ ಲೀಲಾವತಿಯು ಭೋಜರಾಜನ ಕೊರಳಿಗೆ ದಿವ್ಯವಾದ ಸುಗಂಧಮಯವಾದ ಪುಷ್ಪ ಮಾಲೆ ಹಾಕಿದಳು. ಅದೇ ರೀತಿ ಭೋಜರಾಜನು ಸಹ ಲೀಲಾವತಿಯ ಕೊರಳಿಗೆ ಪುಷ್ಪಮಾಲೆ ಹಾಕಿದನು. ಆಗ ಪುನಃ ಎಲ್ಲರೂ ನವ ದಂಪತಿಗಳಿಗೆ ಪುಷ್ಪವೃಷ್ಟಿಗೆರೆದರು.

ಆಗ ಭೋಜರಾಜನ ಅಖಂಡ ಪುಣ್ಯ ವಿಶೇಷ ಫಲದಿಂದಾಗಿ ಗಗನ ಮಂಡಲದಲ್ಲಿ ನೆರೆದಿದ್ದ ಇಂದ್ರಾದಿದೇವತೆಗಳು ಸಹ ಭೋಜರಾಜ - ಲೀಲಾವತಿಯರಿಗೆ ದೇವ ಮಂದಾರ ಪುಷ್ಪಗಳಿಂದ ಹೂಮಳೆಗೆರೆದರು - ನವದಂಪತಿಗಳನ್ನು ಆಶೀರ್ವದಿಸಿದ್ದರು. ಅಷ್ಟೇ ಅಲ್ಲದೆ, ಸಾಕ್ಷಾತ್ ಬ್ರಹ್ಮಾಂಶ ಸಂಭೂತನಾದ ಭೋಜರಾಜನ ವಿವಾಹಕ್ಕೆ ವಿಷ್ಣುಲೋಕ - ಬ್ರಹ್ಮಲೋಕದಿಂದ ಭೂಧರೆಗೆ ಆಗಮಿಸಿದ್ದ ಲಕ್ಷ್ಮೀ - ಸರಸ್ವತಿಯರು ಸಹ ಧಾರಾನಗರದ ಭೂಪತಿಯಾದ ಭೋಜರಾಜನಿಗೆ (ಅವನು ಮಾಡಿದ ಅಖಂಡ ಪುಣ್ಯ ವಿಶೇಷ ಫಲದಿಂದಾಗಿ) ಆ

ತ್ರಿಲೋಕ ಮಾತೆಯರು ನವ ರಾಜದಂಪತಿಗಳಿಗೆ ದೇವಮಂದಾರ ಪುಷ್ಪಗಳಿಂದ ವೃಷ್ಟಿಗೆರೆದು ಆಶೀರ್ವಾದಮಾಡಿ ತಮ್ಮ ಲೋಕಕ್ಕೆ ಹೊರಟಿದ್ದರು (ಅಗೋಚರ).

ಈ ರೀತಿಯಾಗಿ ಎರಡು ರಾಜ್ಯಗಳ ರಾಜವಂಶದ ಸಂಬಂಧದಲ್ಲಿ ಭೋಜರಾಜ - ಲೀಲಾವತಿಯರ ವಿವಾಹವು ಅತ್ಯಂತ ವೈಭವದಿಂದ ಅಭೂತಪೂರ್ವವಾಗಿ ಜರುಗಿತು.

ಆ ಬಹು ಸಂಭ್ರಮದ ವಿವಾಹಕ್ಕೆ ಬಂದಿದ್ದ ಎಲ್ಲ ಸಾಮಂತರು ರಾಜಮಹಾರಾಜರು ನವದಂಪತಿಗಳಿಗೆ ಯಥೇಚ್ಛವಾದ ಮುತ್ತು ರತ್ನ ವಜ್ರ ವೈಢೂರ್ಯ ಕನಕ ಹಾರಗಳಾದಿಯಾಗಿ ಸುವರ್ಣ ಭಂಡಾರವನ್ನು ಉಡುಗೊರೆಕೊಟ್ಟು ಹಾರೈಸಿದ್ದರು.

ವಿವಾಹ ಜರುಗಿದಂತೆ ಎಲ್ಲರೂ ಭಕ್ಷ್ಯ - ಭೋಜ್ಯಾದಿ ಮೃಷ್ಟಾನ್ನ ಪಾಯಸ - ಪರಮಾನ್ನಗಳಿಂದ ಕೂಡಿದ ರಾಜಭೋಜನವನ್ನುಂಡು ವೀಳ್ಯಾತಾಂಬೂಲಗಳೊಂದಿಗೆ ಸಂತೋಷ ಚಿತ್ತರಾದರು.

ಆ ರೀತಿಯಾಗಿ ವಿಜಯ ಯಾತ್ರೆ ಹೊರಟಿದ್ದ ಭೋಜರಾಜನು ಭರತಖಂಡದ ಚಪ್ಪನ್ನಾರು ದೇಶಗಳಲ್ಲೂ ದಿಗ್ವಿಜಯ ವಿಜೇತನಾಗಿ 'ರಾಜಾದಿರಾಜ ಭೋಜರಾಜ'ನೆಂಬ ಬಿರುದಾಂಕಿತನಾಗಿ - ಧರ್ಮಪತ್ನಿ ಸಮೇತನಾಗಿ ತನ್ನ ಸಮಸ್ತ ಚತುರಂಗ ಬಲದೊಡನೆ, ತನ್ನ ಪಟ್ಟಣವಾದ ಧಾರಾನಗರವನ್ನು ಸೇರಿದ್ದನು.

ಪಟ್ಟಮಹಿಷಿಯಾದ ಲೀಲಾವತಿಯೊಡನೆ - ರತ್ನ ಸಿಂಹಾಸನವನ್ನಲಂಕರಿಸಿ ಪ್ರಜೆಗಳ ಪರಮ ಸಂತೋಷಕ್ಕೆ ಪಾತ್ರನಾಗಿ ರಾಜ್ಯಭಾರ ಮಾಡುತ್ತಿದ್ದನು. ಆ ಆದರ್ಶ ಪುರುಷನಾದ ಭೋಜರಾಜ.

**ಇಲ್ಲಿಗೆ ಮೊದಲನೆಯ ಭಾಗ ಮುಗಿಯಿತು.**

ಇದೇ ಸಂದರ್ಭದಲ್ಲಿ - ವಂಗದೇಶದ ರಾಜಕುಮಾರಿಯಾದ ಇಂದೂಮತಿಯು (ಈಕೆಯ ಇನ್ನೊಂದು ಹೆಸರು ವಿದ್ಯಾವತಿ) ದುಷ್ಟಮಂತ್ರಿಯೊಬ್ಬನ ಕೇಡಿನ ಕಿಡಿಗೆ ತುತ್ತಾಗಿ ನಿರಕ್ಷರಕುಕ್ಷಿಯಾದ ಓರ್ವ ಕುರಿಕಾಯುವ ಕುರುಬನೊಬ್ಬನನ್ನು ವಿವಾಹವಾಗಿ ದಾಂಪತ್ಯ ಜೀವನದಲ್ಲಿ ವಂಚಿತಳಾಗುತ್ತಾಳೆ. ಆಗ ಅವಳು ನೀಡಿದ ಮಾರ್ಗದರ್ಶನದಲ್ಲಿ ಆಕೆಯ ಪತಿಎನಿಸಿದ ಕುರುಬನು ಕಾಳಿಕಾದೇವಿಯ ಮೊರೆ ಹೋಗುತ್ತಾನೆ. ಕಾಳಿಕಾದೇವಿಯ ದಿವ್ಯ ಅನುಗ್ರಹ ಬಲದಿಂದ ಮಹಾ ಸಂಸ್ಕೃತ ಪಂಡಿತನಾಗಿ ಮುಂದೆ ಕಾಳಿದಾಸನೆಂಬ ಹೆಸರಿನಿಂದ ಭೋಜರಾಜನನ್ನು ಆಶ್ರಯಿಸಿ ಧಾರಾನಗರಕ್ಕೆ ಬರುತ್ತಾನೆ.

ಮುಂದಿನ ಭಾಗ :-

ಕಾಳಿದಾಸ - ಭೋಜರಾಜ

ಎರಡನೆ ಭಾಗ ನಿರೀಕ್ಷಿಸಿರಿ



ಮಾಧವಸಿಂಹ



ವಿಜಯಾನಾರಸಿಂಹ

ಶ್ರೀಯುತ ಮಾಧವಸಿಂಹ ಅವರು ಸುಸಂಸ್ಕೃತ ವಂಶಪಾರಂಪರ್ಯದವರು.

ಕನ್ನಡ ಚಿತ್ರರಂಗದ ಬುನಾದಿ ಪುರುಷರೆನಿಸಿದ ಪ್ರತಿಭಾವಂತ ನಿರ್ದೇಶಕ ದಿವಂಗತ ಹೆಚ್.ಎಲ್.ಎನ್. ಸಿಂಹ ಅವರು ಶ್ರೀ ಮಾಧವಸಿಂಹರ ತೀರ್ಥರೂಪ ಸಮಾನರು

ಇವರು ಹಲವಾರು ಕಾದಂಬರಿಗಳನ್ನು (ಬಾಳಪುಟದಲಿ, ಅಪೂರ್ವದೇವತೆ) ಬರೆದಿದ್ದಾರೆ. ಸರಳ ಸುಂದರ ಶೈಲಿಯ ಶ್ರೀಯುತರ ಕಾದಂಬರಿಗಳಲ್ಲಿ "ಅಪೂರ್ವ ದೇವತೆ" ಚಿತ್ರೀಕರಣಕ್ಕೆ ಉತ್ತಮವಾದ ಕಥಾವಸ್ತುವನ್ನೊಳಗೊಂಡಿದೆ.

ಪೋಲೀಸ್ ಅಧಿಕಾರಿಯಾಗಿ ಮೂರುದಶಕಗಳಿಂದಲೂ ನಿಷ್ಠಾವಂತ ಸೇವೆ ಸಲ್ಲಿಸುತ್ತಿರುವ ಶ್ರೀಯುತರಿಗೆ ಬಂದೂಕಿಗಿಂತ ಲೇಖಣಿಯೆ ಸರಿಯಾದ ಆಯುಧವಾಗಿದೆ. ಸಾರಸ್ವತ ಲೋಕದಲ್ಲಿ ಇವರ ಲೇಖಣಿ ಉತ್ತಮ ಕೊಡುಗೆಗಳನ್ನು ನೀಡಿ ಸಾಹಿತ್ಯ ಲೋಕವನ್ನು ಶ್ರೀಮಂತಗೊಳಿಸಲೆಂದು ಹಾರೈಸುತ್ತೇನೆ.

ಪ್ರಸ್ತುತ ಕನ್ನಡ ಸಾಹಿತ್ಯಪ್ರಿಯರ ಹಸ್ತಗತವಾಗಿರುವ "ವಿದ್ವನ್ಮಣಿತಿಲಕಭೋಜರಾಜ" ಕೃತಿಯು ಸಾಹಿತ್ಯ ದೃಷ್ಟಿಯಿಂದ ವಿಚಾರಕ್ರಾಂತಿ ಉಂಟು ಮಾಡುವುದರಲ್ಲಿ ಸಂದೇಹವಿಲ್ಲ.

ಪುರಾತನ ಕಾಲದ ನಮ್ಮ ಸಂಸ್ಕೃತಿ ವೈಭವ ಮನದಲ್ಲಿ ಮೆರೆದಾಡುವುದು

ಈ ಕೃತಿಕರ್ತರ ಈ ರಸದೌತಣ ನುಡಿದೇವಿಯ ಪದತಳದಲ್ಲಿ ಪದ್ಮವಾಗಲಿ.

- ವಿಜಯನಾರಸಿಂಹ

ಸಾಹಿತಿ, ಬೆಂಗಳೂರು